WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜೂನ್ ೭, ೨೦೧೨ (ಜ್ಯೇಷ್ಠ ೧೭, ಶಕ ವರ್ಷ ೧೯೩೪) | ಸಂಚಿಕೆ ೨೩ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವಿ.ಎಸ್. ಸಜ್ಜನರ, ದ್ವಿ.ದ.ಸ. ಇವರ ಪುನರ್ ಪರಿಷ್ಕರಣ ಮೇಲ್ಮನವಿ ಬಗ್ಗೆ ಪರಿಷ್ಕೃತ ಆದೇಶವನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಒಇ 266 ಪೊಸಇ ದಿನಾಂಕ 21–08–2007.
2) ಪುನರ್ ಪರಿಷ್ಕರಣ ಮೇಲ್ಮನವಿಯ ದಿನಾಂಕ 29–06–2010.
3) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಅಪೀಲು(2) 86/2010–11 ದಿನಾಂಕ 21–04–2011.
4) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ರವರ ಪತ್ರ ಸಂಖ್ಯೆ:ಪಿ.ಎಸ್.ಸಿ 90 ಸಿಎನ್ಎಸ್ 11 ದಿನಾಂಕ 06–12–2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ವಿ.ಎಸ್.ಸಜ್ಜನರ, ದ್ವಿ.ದ.ಸ. ಸಹಾಯಕರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಸದರಿ ಪರಿಷ್ಕರಣ ಮೇಲ್ಮನವಿಯ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಿ ಶಿಸ್ತು ಪ್ರಾಧಿಕಾರಿಗಳು ವಿಧಿಸಿರುವ ಆದೇಶದಲ್ಲಿನ ಶಿಕ್ಷೆಯನ್ನು ಭಾಗಶಃ ಮಾರ್ಪಡಿಸಿ ದಿ: 21–08–2007 ರಂದು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿರುತ್ತದೆ.

"ಶ್ರೀ ವಿ.ಎಸ್.ಸಜ್ಜನರ, ದ್ವಿ.ದ.ಸ. ಇವರನ್ನು ಸೇವೆಗೆ ಪುನರ್ ಹಾಜರುಪಡಿಸಿ ಇವರ ಕಾಲವೇತನ ಶ್ರೇಣಿಯಲ್ಲಿನ ಕೆಳಗಿನ ಹಂತಕ್ಕೆ ಇಳಿಸಲು ಸರ್ಕಾರವು ಆದೇಶಿಸಿದೆ"

ಶ್ರೀ ವಿ.ಎಸ್.ಸಜ್ಜನರ, ದ್ವಿ.ದ.ಸ. ರವರು ಸರ್ಕಾರದ ಆದೇಶದ ವಿರುದ್ಧ 3 ವರ್ಷಗಳ ನಂತರ ದಿನಾಂಕ 29–06–2010 ಪುನರ್ ಪರಿಷ್ಕರಣೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ.

ಪುನರ್ ಪರಿಷ್ಕರಣಾ ಮೇಲ್ಮನವಿಯನ್ನು ಪರಿಶೀಲಿಸಿ ಉಲ್ಲೇಖ (1)ರ ಆದೇಶವನ್ನು ರದ್ದುಪಡಿಸಿ ಕೆ.ಸಿ.ಎಸ್.ಆರ್. ನಿಯಮ 59 ರಂತೆ ಪರಿಷ್ಕೃತ ದಂಡನೆಯನ್ನು ಈ ಕೆಳಕಂಡಂತೆ ವಿಧಿಸಲು ನಿರ್ಣಯಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ (4)ರ ಪತ್ರದಲ್ಲಿ ಪಡೆಯಲಾಗಿರುತ್ತದೆ.

(1) ಕಾಲವೇತನ ಶ್ರೇಣಿಯಲ್ಲಿ ಕೆಳಗಿನ ಹಂತಕ್ಕೆ ಮೂರು ವರ್ಷಗಳ ಅವಧಿಯವರೆಗೆ ಸಂಚಿತ ಪರಿಣಾಮ ರಹಿತವಾಗಿ ಇಳಿಸುವುದು.

(2) ಕಡ್ಡಾಯ ನಿವೃತ್ತಿಗೊಂಡ ದಿನಾಂಕ: 19–12–2005 ರಿಂದ ಸೇವೆಗೆ ಪುನರ್ ಸ್ಥಾಪನೆಗೊಂಡು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವವರೆಗೆ ಸೇವೆಯಿಂದ ಹೊರಗುಳಿದ ಅವಧಿಯನ್ನು "ಲೆಕ್ಕಕ್ಕಿಲ್ಲದ ಅವಧಿ" ಎಂದು ಪರಿಗಣಿಸುವುದು.

(3) ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತು ಎಂದೇ ಪರಿಗಣಿಸುವುದು.

**ಸರ್ಕಾರದ ಆದೇಶ ಸಂಖ್ಯೆ: ಒಇ 63 ಪೊಸಿಲಿ 2010, ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯನ್ನು ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ವಿ.ಎಸ್. ಸಜ್ಜನರ, ದ್ವಿ.ದ.ಸ.ರವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ, ಈ ಕೆಳಗಿನಂತೆ ಪರಿಷ್ಕೃತ ದಂಡನೆಯನ್ನು ವಿಧಿಸಿದೆ.

(1) ಕಾಲವೇತನ ಶ್ರೇಣಿಯಲ್ಲಿ ಕೆಳಗಿನ ಹಂತಕ್ಕೆ ಮೂರು ವರ್ಷಗಳ ಅವಧಿಯವರೆಗೆ ಸಂಚಿತ ಪರಿಣಾಮ ರಹಿತವಾಗಿ ಇಳಿಸತಕ್ಕದ್ದು.

(2) ಕಡ್ಡಾಯ ನಿವೃತ್ತಿಗೊಂಡ ದಿನಾಂಕ: 19–12–2005 ರಿಂದ ಸೇವೆಗೆ ಪುನರ್ ಸ್ಥಾಪನೆಗೊಂಡು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವವರೆಗೆ ಸೇವೆಯಿಂದ ಹೊರಗುಳಿದ ಅವಧಿಯನ್ನು **"ಲೆಕ್ಕಕ್ಕಿಲ್ಲದ ಅವಧಿ"** (Dies-non) ಎಂದು ಪರಿಗಣಿಸತಕ್ಕದ್ದು.

(3) ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತು ಎಂದೇ ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

ಪಿ.ಆರ್. 979

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ತುಮಕೂರು ಜಿಲ್ಲೆಯ ಕ್ಯಾತಸಂದ್ರದ ಶ್ರೀ ಉಮಾ ಪ್ರಗತಿ ಪ್ರಥಮ ದರ್ಜೆ ಕಾಲೇಜು ಹಾಗೂ ಅಲ್ಲಿನ ಬೋಧಕರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 551 ಯುಪಿಸಿ 99 ದಿನಾಂಕ: 07–08–2003
2) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 13–05–2009
3) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 05–10–2009
4) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:01:ವೇಅನು:2010–11: ಖಾಕಾವಿ–1, ದಿನಾಂಕ: 28–10–2010
5) ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ:ಸಿ:499:2011, ದಿನಾಂಕ: 28–10–2011.
6) ಸರ್ಕಾರದ ಆದೇಶ ಸಂಖ್ಯೆ:ಇಡಿ 177 ಯುಪಿಸಿ 2010, ದಿನಾಂಕ: 11–11–2011.
7) ಆಡಳಿತ ಮಂಡಳಿಯ ಪತ್ರ ಸಂಖ್ಯೆ:ಶ್ರೀ ಉ.ಪ್ರ.ವಿ.ಸಂಸ್ಥೆ:78/2011–12, ದಿನಾಂಕ: 16–11–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ: 01–06–1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ: 01–06–1987 ರಿಂದ ದಿನಾಂಕ: 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ: 18–02–2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ: 01–06–87 ರಿಂದ 31–03–95ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ: 13–05–2009ರ ಅಧಿಸೂಚನೆಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ: 05–10–2009ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು ಮಾನದಂಡಗಳನ್ನು ನಿಗದಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (4)ರ ದಿನಾಂಕ: 05–10–2010ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಕಾಲೇಜನ್ನು ಹಾಗೂ ಅದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಈಗಾಗಲೇ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ 5 ಕಾಲೇಜುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ವಿಧಿಸಲಾಗಿದ್ದ ಷರತ್ತುಗಳೊಂದಿಗೆ ಹೆಚ್ಚುವರಿಯಾಗಿ ಕೆಲವು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪೂರೈಸಿದ್ದಲ್ಲಿ ಎರಡನೇ ಹಂತವಾಗಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಆರ್ಥಿಕ ಇಲಾಖೆಯು ತಿಳಿಸಿದೆ. ಆದರೆ, ಪ್ರಥಮ ಹಂತವಾಗಿ ವೇತನಾನುದಾನಕ್ಕೆ ಒಳಪಡಿಸಲಾದ 5 ಕಾಲೇಜುಗಳಿಗೆ ವಿಧಿಸದೇ ಇದ್ದ ಹೆಚ್ಚುವರಿ ಷರತ್ತುಗಳನ್ನು ವಿಧಿಸಿತ್ತು. ಈ ಹೆಚ್ಚುವರಿ ಷರತ್ತುಗಳನ್ನು ವಿಧಿಸದಂತೆ ವಿನಾಯಿತಿ ನೀಡುವಂತೆ ಸಚಿವ ಸಂಪುಟದ ಅನುಮೋದನೆ ಕೋರಲಾಗಿದ್ದು, ಸಚಿವ ಸಂಪುಟವು ಮೇಲೆ ಓದಲಾದ (5)ರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ವಿಧಿಸಿರುವ ಷರತ್ತುಗಳನ್ನು ಸಡಿಲಿಸಿ, ಸದರಿ ಕಾಲೇಜು ಹಾಗೂ ಇತರೆ 9 ಕಾಲೇಜುಗಳನ್ನು ಮತ್ತು ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅನುಮತಿ ನೀಡಿದೆ. ಅದರಂತೆ, ಕಾಲೇಜು ಶಿಕ್ಷಣ ನಿರ್ದೇಶನಾಲಯವು ಶ್ರೀ ಉಮಾ ಪ್ರಗತಿ ಪ್ರಥಮ ದರ್ಜೆ ಕಾಲೇಜು, ಕ್ಯಾತಸಂದ್ರ, ತುಮಕೂರು ಈ ಕಾಲೇಜನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಈಗಾಗಲೇ ಮೇಲೆ ಓದಲಾದ (6)ರ ಆದೇಶದಲ್ಲಿ ಒಳಪಡಿಸಲಾಗಿರುತ್ತದೆ. ಆದರೆ, ಕಾರ್ಯಭಾರದ ಕೊರತೆಯಿಂದಾಗಿ ಆಂಗ್ಲಭಾಷೆ ಮತ್ತು ಹಿಂದಿ ಹಾಗೂ ಸಮಾಜಶಾಸ್ತ್ರ ಬೋಧಕರ

ವಿಷಯದಲ್ಲಿ ಪ್ರಸ್ತಾಪಿಸಲಾಗಿದ್ದ ಬೋಧಕರು ನಿಗದಿತ ವಿದ್ಯಾರ್ಹತೆಯನ್ನು ಹೊಂದದೇ ಇದ್ದ ಪ್ರಯುಕ್ತ ಸದರಿ ವಿಷಯಗಳನ್ನು ಹಾಗೂ ಅವುಗಳನ್ನು ಬೋಧಿಸುತ್ತಿದ್ದ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ತರಲಾಗಿರಲಿಲ್ಲ. ನಂತರದಲ್ಲಿ ಮೇಲೆ ಓದಲಾದ (7)ರ ಪತ್ರದಲ್ಲಿ ಆಡಳಿತ ಮಂಡಳಿಯು ದಿನಾಂಕ: 16–11–2011ರ ಪತ್ರದಲ್ಲಿ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಕನ್ನಡ, ಇಂಗ್ಲೀಷ್ ಮತ್ತು ಗ್ರಂಥಪಾಲಕರ ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಹಾಗೂ ಇವರುಗಳ ವಿದ್ಯಾರ್ಹತೆಯ ದಾಖಲಾತಿಗಳನ್ನು ಒದಗಿಸಿರುತ್ತಾರೆ. ಆದರೆ, ಪ್ರಸ್ತಾಪಿಸಲಾಗಿರುವ 5 ಜನರಲ್ಲಿ ಗ್ರಂಥಪಾಲಕರ ಹುದ್ದೆಗೆ ಪ್ರಸ್ತಾಪಿಸಿರುವ ಶ್ರೀಮತಿ ತನುಜಾ ಇವರು ಎಂ.ಫಿಲ್. ಪದವಿಯನ್ನು ದಿನಾಂಕ: 11–07–2009ರ ನಂತರದಲ್ಲಿ ಪಡೆದಿರುವುದರಿಂದ ಹಾಗೂ ಇಂಗ್ಲೀಷ್, ಕನ್ನಡ ಮತ್ತು ರಾಜ್ಯಶಾಸ್ತ್ರ ವಿಷಯಗಳಲ್ಲಿ ನಿಗದಿತ 16 ಗಂಟೆಗಳ ಕಾರ್ಯಭಾರವಿಲ್ಲದಿರುವ ಕಾರಣ ಸದರಿ ವಿಷಯಗಳನ್ನು ಹಾಗೂ ಅವುಗಳನ್ನು ಬೋಧಿಸುತ್ತಿರುವ ಬೋಧಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ. ಆದರೆ, ಶ್ರೀ ಆರ್. ಶೇಖರ್ ಇವರು ಸ್ನಾತಕೋತ್ತರ ಪದವಿಯಲ್ಲಿ ಶೇಕಡ 55% ಕ್ಕಿಂತ ಹೆಚ್ಚು ಅಂಕಗಳನ್ನು ಹಾಗೂ ಜೂನ್ 2009ರಂದು ಎಂ.ಫಿಲ್. ಪದವಿಯನ್ನು ಪಡೆದಿರುವುದರಿಂದ ಅರ್ಥಶಾಸ್ತ್ರ ವಿಷಯದಲ್ಲಿ 18 ಗಂಟೆಗಳ ನಿಗದಿತ ಕಾರ್ಯಭಾರವಿರುವುದರಿಂದ ಸದರಿ ವಿಷಯವನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಬಹುದಾಗಿದೆ. ಆದುದರಿಂದ, ಶ್ರೀ ಆರ್. ಶೇಖರ್ ಇವರನ್ನು ಯುಜಿಸಿ ವೇತನ ಶ್ರೇಣಿಯಲ್ಲಿ ಈ ಹಿಂದೆ ಮೂವರು ಬೋಧಕ ಸಿಬ್ಬಂದಿಯನ್ನು ವೇತನಾನುದಾನಕ್ಕೆ ಒಳಪಡಿಸಿದ ದಿನಾಂಕದಿಂದ ಅಂದರೆ ದಿನಾಂಕ: 11–11–2011ರಿಂದ ಜಾರಿಗೆ ಬರುವಂತೆ ಅನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 177 ಯುಪಿಸಿ, 2010 ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಶ್ರೀ ಉಮಾ ಪ್ರಗತಿ ಪ್ರಥಮ ದರ್ಜೆ ಕಾಲೇಜು, ಕ್ಯಾತಸಂದ್ರ, ತುಮಕೂರು ಇಲ್ಲಿ ಅರ್ಥಶಾಸ್ತ್ರ ವಿಷಯವನ್ನು ಹಾಗೂ ಸದರಿ ಹುದ್ದೆಯ ಎದುರು ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರನ್ನು ಕೆಳಕಂಡ ಷರತ್ತಿಗೊಳಪಟ್ಟು ದಿನಾಂಕ: 11–11–2011ರಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆ/ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ಶ್ರೀ ಆರ್. ಶೇಖರ್ | ಅರ್ಥಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 18 ಗಂಟೆ | ಯುಜಿಸಿ |

1. ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕರ ಸೇವೆ ಕುರಿತು ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿಪಡಿಸತಕ್ಕದ್ದು, ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.
4. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು/ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.
5. ಸಂಸ್ಥೆಯ ಬೈಲಾದಲ್ಲಿ ನಿಗದಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
6. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15(ಇ)ರಡಿಯಲ್ಲಿ ನಿಗದಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಒದಗಿಸಿರತಕ್ಕದ್ದು.
7. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇಕಡಾ 35ರಷ್ಟು ಇರತಕ್ಕದ್ದು. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

8. ವಿಶ್ವವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (Enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
9. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
10. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
11. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗದಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗದಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.
12. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.
13. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
14. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
15. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ:ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.
16. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ:860/ವೆಚ್ಚ–8/2010, ದಿನಾಂಕ: 28–06–2011 ಮತ್ತು ಆಇ:898/ವೆಚ್ಚ–8/2010, ದಿನಾಂಕ: 02–07–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಬಿ.ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

ಪಿ.ಆರ್. 980

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಮೂಅಇ 48 ರಾಅವಿ 2010 ದಿನಾಂಕ 20.05.2011.
2. ಸರ್ಕಾರಿ ಆದೇಶ ಸಂಖ್ಯೆ.ಮೂಅಇ 48 ರಾಅವಿ 2010 ದಿನಾಂಕ 16.11.2011.
3. ಸರ್ಕಾರಿ ಆದೇಶ ಸಂಖ್ಯೆ.ಮೂಅಇ 48 ರಾಅವಿ 2010 ದಿನಾಂಕ 28.01.2012.
4. ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯ ಪತ್ರ ಸಂ.: ಎಲ್.ಎ.ಕ್ಯೂ. ಸಿ.ಆರ್. 72/2011–12, ದಿನಾಂಕ: 17–02–2012.

**ಪ್ರಸ್ತಾವನೆ :**

ಮೈಸೂರು ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ದಿನಾಂಕ: 06–10–2005ರಂದು ಭಾರತ ವಿಮಾನ ನಿಲ್ದಾಣಗಳ ಪ್ರಾಧಿಕಾರದೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಅನುಸಾರ ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಳಕೆ ಬಿಲ್ಲನ್ನು ವಿಮಾನಯಾನ ಸೇವೆ ಕಾರ್ಯಾರಂಭಗೊಂಡ ದಿನಾಂಕದಿಂದ 5 ವರ್ಷಗಳ ಅವಧಿಗೆ ರಾಜ್ಯ ಸರ್ಕಾರದಿಂದ ಭರಿಸಬೇಕಾಗಿರುತ್ತದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ನವೆಂಬರ್ 2010 ರಿಂದ ಏಪ್ರಿಲ್ 2011 ರವರೆಗೆ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಬಿಲ್ಲಿನ ಮೊತ್ತ ರೂ. 28,85,360/–ಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಇವರಿಗೆ ಬಿಡುಗಡೆ ಮಾಡಲಾಗಿದೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಮೇ 2011 ರಿಂದ ಆಗಸ್ಟ್ 2011 ರವರೆಗೆ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲಿನ ಬಾಕಿ ಮೊತ್ತ ರೂ. 15,98,216.00 ಗಳನ್ನು ಬಿಡುಗಡೆ ಮಾಡಲಾಗಿದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ಮೈಸೂರು ವಿಮಾನ ನಿಲ್ದಾಣದ ಸೆಪ್ಟೆಂಬರ್ 2011ರಿಂದ ನವೆಂಬರ್ 2011ರ ಅಂತ್ಯಕ್ಕೆ ಬಾಕಿಯಿರುವ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತ ರೂ. 12,46,456.00 ಗಳನ್ನು ಬಿಡುಗಡೆ ಮಾಡಲಾಗಿದೆ.

5. ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಇವರು ಜನವರಿ 2012ರ ಅಂತ್ಯಕ್ಕೆ ಬಾಕಿ ಉಳಿದಿರುವ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತ ರೂ. 6,45,069.00 (ಆರು ಲಕ್ಷದ ನಲವತ್ತೈದು ಸಾವಿರದ ಅರವತ್ತೊಂಬತ್ತು ರೂಪಾಯಿ ಮಾತ್ರ) ಗಳನ್ನು ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 48 ರಾಅವಿ 2010, ಬೆಂಗಳೂರು, ದಿನಾಂಕ: 20–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಜನವರಿ 2012ರ ಅಂತ್ಯಕ್ಕೆ ಬಾಕಿ ಉಳಿದಿರುವ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತ ರೂ. 6,45,069.00 (ಆರು ಲಕ್ಷದ ನಲವತ್ತೈದು ಸಾವಿರದ ಅರವತ್ತೊಂಬತ್ತು ರೂಪಾಯಿ ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

2. ಈ ಮೊತ್ತವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ "5465–01–190–1–05–133 ವಿಶೇಷ ಅಭಿವೃದ್ಧಿ ಯೋಜನೆ" ಯಡಿಯಲ್ಲಿ ಲಭ್ಯವಿರುವ ರೂ. 80.00 ಕೋಟಿಗಳಿಂದ ಭರಿಸತಕ್ಕದ್ದು.

3. ಈ ಹಣವನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು, ಇವರು ಜಿಲ್ಲಾ ಖಜಾನೆ ಮೈಸೂರು ಇಲ್ಲಿ ಡ್ರಾ ಮಾಡಲು ಅಧಿಕರಿಸಿದೆ. ಉಪ ನಿರ್ದೇಶಕರು, ಎನ್.ಎಂ.ಸಿ. ಬೆಂಗಳೂರು. ಇವರು ಈ ಮೊತ್ತವನ್ನು ಜಿಲ್ಲಾಧಿಕಾರಿಗಳ ಖಾತೆಗೆ ಅಪ್‌ಲೋಡ್ ಮಾಡುವುದು. ಈ ಹಣವನ್ನು ಯೋಜನೆಗೆ ವೆಚ್ಚ ಮಾಡಿ ಉಪಯೋಗಿತಾ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 2008 ದಿನಾಂಕ 16–05–2008 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಇಲಾಖೆ

ಪಿ.ಆರ್. 981

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ಅಶೋಕ್ ವಂಗೆನಪಲ್ಲಿ, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಬೀದರ್ ಮತ್ತು ಶ್ರೀ ರೇವಣಸಿದ್ಧಸ್ವಾಮಿ, ತಳವಾಡ (ಕೆ) ದ ಹಿಂದಿನ ಕಾರ್ಯದರ್ಶಿ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ – ಆದೇಶ.

**ಓದಲಾಗಿದೆ:** ಅಪರ ನಿಬಂಧಕರು ವಿಚಾರಣೆಗಳು–7, ಕರ್ನಾಟಕ ಲೋಕಾಯುಕ್ತ ಕಚೇರಿ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ ಕಂಪ್ಲೆಂಟ್/ಉಪಲೋಕ್/ಜಿಎಲ್‌ಬಿ–637/2007/ಎಆರ್‌ಇ–7, ದಿನಾಂಕ: 08–02–2012.

**ಪ್ರಸ್ತಾವನೆ :**

ಶ್ರೀ ಅಶೋಕ್ ವಂಗೆನಪಲ್ಲಿ, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಬೀದರ್ ಮತ್ತು ಶ್ರೀ ರೇವಣಸಿದ್ಧಸ್ವಾಮಿ, ತಳವಾಡ (ಕೆ) ದ ಹಿಂದಿನ ಕಾರ್ಯದರ್ಶಿ ಇವರುಗಳು ಭಾಲ್ಕಿ ತಾಲ್ಲೂಕು ತಳವಾಡ ಗ್ರಾಮದ ಸರ್ವೆ ನಂ. 305ರ ಖಾಸಗಿ ಜಮೀನಿನಲ್ಲಿ ಜಲ ನಿರ್ಮಲ ಯೋಜನೆಯಡಿಯಲ್ಲಿ ರೂ. 5.25 ಲಕ್ಷ ಖರ್ಚು ಮಾಡಿ ಬಾವಿ ತೆಗೆಸುವ ಮೂಲಕ ಕರ್ತವ್ಯಲೋಪವೆಸಗಿದ್ದಾರೆಂದು ಶ್ರೀ ಸಂಗಶೆಟ್ಟಿ ಸಾ: ಬೀದರ್ ಜಿಲ್ಲೆ ಎಂಬುವವರು ಸಲ್ಲಿಸಿದ್ದ ಲಿಖಿತ ದೂರಿನ ಮೇರೆಗೆ ಜರುಗಿಸಿದ ತನಿಖೆಯಲ್ಲಿ ಇವರುಗಳು ನಿರ್ವಹಿಸಿದ್ದ ಕಾಮಗಾರಿಗಳಲ್ಲಿ ಕರ್ತವ್ಯಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ಪ್ರಕಾರ ಇಲಾಖಾ ವಿಚಾರಣೆ ಜರುಗಿಸಲು ಆದೇಶ ನೀಡುವಂತೆ ಕರ್ನಾಟಕ ಉಪ ಲೋಕಾಯುಕ್ತರು–1 ರವರು ಮೇಲೆ ದಿನಾಂಕ 8–2–2012ರ ಪತ್ರದೊಂದಿಗೆ ಕಳುಹಿಸಿರುವ ವರದಿಯಲ್ಲಿ ಶಿಫಾರಸ್ಸು ಮಾಡಿದ್ದಾರೆ.

ಕರ್ನಾಟಕ ಉಪ ಲೋಕಾಯುಕ್ತರ ವರದಿ ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿ ಶ್ರೀ ಅಶೋಕ್ ವಂಗೆನಪಲ್ಲಿ, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಬೀದರ್ ಮತ್ತು ಶ್ರೀ ರೇವಣಸಿದ್ಧಸ್ವಾಮಿ, ತಳವಾಡ (ಕೆ) ದ ಹಿಂದಿನ ಕಾರ್ಯದರ್ಶಿ ಇವರುಗಳು ಭಾಲ್ಕಿ ತಾಲ್ಲೂಕು ತಳವಾಡ ಗ್ರಾಮದ ಸರ್ವೆ ನಂ. 305ರ ಖಾಸಗಿ ಜಮೀನಿನಲ್ಲಿ ಜಲ ನಿರ್ಮಲ ಯೋಜನೆಯಡಿಯಲ್ಲಿ ರೂ. 5.25 ಲಕ್ಷ ಖರ್ಚು ಮಾಡಿ ಬಾವಿ ತೆಗೆಸುವ ಮೂಲಕ ಕರ್ತವ್ಯಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಆದ್ದರಿಂದ, ಕರ್ನಾಟಕ ಉಪ ಲೋಕಾಯುಕ್ತ–1 ರವರ ಶಿಫಾರಸ್ಸಿನಂತೆ ಶ್ರೀ ಅಶೋಕ್ ವಂಗೆನಪಲ್ಲಿ, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಬೀದರ್ ಮತ್ತು ಶ್ರೀ ರೇವಣಸಿದ್ಧಸ್ವಾಮಿ, ತಳವಾಡ (ಕೆ) ದ ಹಿಂದಿನ ಕಾರ್ಯದರ್ಶಿ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತ–1 ರವರಿಗೆ ವಹಿಸಲು ಸರ್ಕಾರವು ನಿರ್ಧರಿಸಿ, ಈ ಮುಂದಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 9 ಇಎನ್‌ಕ್ಯೂ 2012, ಬೆಂಗಳೂರು, ದಿನಾಂಕ: 14–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಅಶೋಕ್ ವಂಗೆನಪಲ್ಲಿ, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಬೀದರ್ ಮತ್ತು ಶ್ರೀ ರೇವಣಸಿದ್ಧಸ್ವಾಮಿ, ತಳವಾಡ (ಕೆ) ದ ಹಿಂದಿನ ಕಾರ್ಯದರ್ಶಿ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,

ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14(ಎ)ರ ಪ್ರಕಾರ ಶಿಸ್ತು ಕ್ರಮ ಜರುಗಿಸಲು ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತ–1 ರವರಿಗೆ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ವೈ. ಸಾಗರ**

ಪಿ.ಆರ್. 982

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ತೋಟಗಾರಿಕೆ ಸಚಿವಾಲಯ

**ವಿಷಯ :** ನಂಜನಗೂಡು ಸ.ನಂ. 1299/3, 1301/2, 1301/3ರ ರೇಷ್ಮೆ ಇಲಾಖೆಗೆ ಸೇರಿದ ಜಮೀನನ್ನು ಮಿನಿ ವಿಧಾನಸೌಧ ಮತ್ತು ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣಕ್ಕೆ ನೀಡುವ ಬಗ್ಗೆ.

**ಓದಲಾಗಿದೆ:**

1. ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ(1)ಸಿಆರ್/350/2009–10, ದಿನಾಂಕ: 6–7–2011.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇಬಿರೇಕ್ಷೇ/ನಂಗೂಡು/ಜಮೀನು/15/2005–06, ದಿನಾಂಕ: 18–8–2011.
3. ಶ್ರೀ ವಿ. ಶ್ರೀನಿವಾಸ ಪ್ರಸಾದ್, ಮಾಜಿ ಕೇಂದ್ರ ಸಚಿವರು ಹಾಗೂ ಶಾಸಕರು, ನಂಜನಗೂಡು ವಿಧಾನಸಭಾ ಕ್ಷೇತ್ರ, ಇವರು ಮಾನ್ಯ ಮುಖ್ಯಮಂತ್ರಿಯವರಿಗೆ ಬರೆದ ಪತ್ರ ದಿನಾಂಕ: 7–1–2012.
4. ಸರ್ಕಾರಿ ಆದೇಶ ಸಂಖ್ಯೆ: ವಾಕೈ 01 ರೇಯೋವಿ 2011, ದಿನಾಂಕ: 14–10–2011.

**ಪ್ರಸ್ತಾವನೆ :**

ಮೈಸೂರು ಜಿಲ್ಲೆ ನಂಜನಗೂಡಿನಲ್ಲಿ ರೇಷ್ಮೆ ಇಲಾಖೆಗೆ ಸೇರಿದ ಜಮೀನಿನಲ್ಲಿ ಮಿನಿ ವಿಧಾನಸೌಧ ಹಾಗೂ ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣದ ಉದ್ದೇಶಕ್ಕಾಗಿ ರೇಷ್ಮೆ ಇಲಾಖೆಗೆ ಸೇರಿದ ಒಟ್ಟು 5.18 ಎಕರೆ ಜಮೀನನ್ನು ಕಂದಾಯ ಇಲಾಖೆಗೆ ಹಸ್ತಾಂತರಿಸುವಂತೆ ಕೋರಿರುತ್ತಾರೆ. ಈ ಕುರಿತು ಮೇಲೆ ಓದಲಾದ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ರೇಷ್ಮೆ ನಿರ್ದೇಶಕರು ತಮ್ಮ ವರದಿಯನ್ನು ನೀಡಿದ್ದು, ಈ ಕೃಷಿ ಕ್ಷೇತ್ರದ ಒಟ್ಟು ಜಮೀನು 16.09 ಆಗಿದ್ದು, ಇದನ್ನು ಖಾಸಗಿಯವರಿಂದ ಭೂಸ್ವಾಧೀನದ ಮೂಲಕ ಪಡೆಯಲಾಗಿದ್ದು, ಈ ಜಮೀನಿನ ಪೈಕಿ 10.05 ಎಕರೆ ಜಮೀನನ್ನು ಹಿಪ್ಪುನೇರಳೆ, ರಸ್ತೆ, ವಸತಿ ಗೃಹಗಳು, ಕಛೇರಿ ಕಟ್ಟಡಗಳು, ಹುಳು ಸಾಕಾಣಿಕೆ ಮನೆಯ ಕಟ್ಟಡಗಳು, ರೇಷ್ಮೆ ಗೂಡಿನ ಮಾರುಕಟ್ಟೆ ಕಟ್ಟಡ ಇತ್ಯಾದಿ ಸೇರಿವೆ. ಉಳಿದಂತೆ 6.04 ಎಕರೆ ಜಮೀನು ಹೆಚ್ಚುವರಿ ಎಂದು ಪರಿಗಣಿಸಲಾಗಿದ್ದು ಇದರಲ್ಲಿ ಹಿಪ್ಪುನೇರಳೆ ಸಸಿಗಳನ್ನು ಬೆಳೆಸಿ ರೈತರಿಗೆ ವಿತರಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲು ಉದ್ದೇಶಿಸಲಾಗಿತ್ತು ಹಾಗೂ ಈ ಕ್ಷೇತ್ರವು ಪಿ3 ಕ್ಷೇತ್ರವಾಗಿದ್ದು, ಇಲಾಖೆಯ ಅಭಿವೃದ್ಧಿ ದೃಷ್ಟಿಯಿಂದ ಇತರೆ ಇಲಾಖೆಗಳಿಗೆ ನೀಡುವ ಅಭಿಪ್ರಾಯವಿಲ್ಲವೆಂದು ತಿಳಿಸಲಾಗಿತ್ತೆಂದು ನಂತರದಲ್ಲಿ ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 19–4–2011 ರಂದು ನಡೆದ ಪ್ರಗತಿ ಪರಿಶೀಲನಾ ಸಭೆಯಲ್ಲಿ ತೀರ್ಮಾನಿಸಿದಂತೆ, ಮಿನಿ ವಿಧಾನಸೌಧ, ಪ್ರಥಮ ದರ್ಜೆ ಕಾಲೇಜು ಕಟ್ಟಡ ಸೇರಿದಂತೆ ಒಟ್ಟು 5.18 ಎಕರೆ ಜಮೀನನ್ನು ಕಂದಾಯ ಇಲಾಖೆಗೆ ಹಸ್ತಾಂತರಿಸಲು ಹಾಗೂ ಸದರಿ ಜಮೀನನ್ನು ರೇಷ್ಮೆ ಇಲಾಖೆಗೆ ಖಾಸಗಿಯವರಿಂದ ಸ್ವಾಧೀನಪಡಿಸಿಕೊಳ್ಳಲಾಗಿರುವುದರಿಂದ ಹಾಲಿ ಇರುವ ಮಾರುಕಟ್ಟೆ ದರಗಳನ್ವಯ ಮೌಲ್ಯವನ್ನು ಇಲಾಖೆಗೆ ನೀಡುವ ಷರತ್ತಿನೊಂದಿಗೆ ಹಸ್ತಾಂತರಿಸಬಹುದಾಗಿದೆ ಎಂದು ಅಭಿಪ್ರಾಯ ನೀಡಿರುತ್ತಾರೆ.

ಈಗಾಗಲೇ ಮೇಲೆ ಓದಲಾದ ಕ್ರಮಸಂಖ್ಯೆ (4)ರ ಆದೇಶದಲ್ಲಿ ರೇಷ್ಮೆ ಇಲಾಖೆಗೆ ಸೇರಿದ 2.00 ಎಕರೆ ಜಮೀನನ್ನು ಪ್ರಥಮ ದರ್ಜೆ ಕಾಲೇಜು ಕಟ್ಟಡಕ್ಕಾಗಿ ನೀಡಲಾಗಿದೆ.

ಮುಂದುವರೆದು, ಶ್ರೀ ವಿ. ಶ್ರೀನಿವಾಸ ಪ್ರಸಾದ್, ಮಾಜಿ ಕೇಂದ್ರ ಸಚಿವರು ಹಾಗೂ ಶಾಸಕರು, ನಂಜನಗೂಡು ವಿಧಾನಸಭಾ ಕ್ಷೇತ್ರ ಇವರು ಮಾನ್ಯ ಮುಖ್ಯಮಂತ್ರಿಗಳಿಗೆ ಬರೆದ ಮೇಲೆ ಓದಲಾದ (3)ರ ಪತ್ರದಲ್ಲಿ ನಂಜನಗೂಡು ತಾಲ್ಲೂಕು ಮೈಸೂರು ಜಿಲ್ಲೆಯಲ್ಲಿಯೇ ಅತ್ಯಂತ ದೊಡ್ಡ ತಾಲ್ಲೂಕು ಆಗಿದ್ದು, ತಾಲ್ಲೂಕಿನಲ್ಲಿ ಮಿನಿವಿಧಾನಸೌಧ ಇರುವುದಿಲ್ಲವೆಂದು ಈ ಕಟ್ಟಡ ನಿರ್ಮಾಣಕ್ಕಾಗಿ ಲೋಕೋಪಯೋಗಿ ಇಲಾಖೆಯು 1.32 ಎಕರೆ ಪ್ರದೇಶದಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣಕ್ಕೆ ಸ್ಥಳವನ್ನು ಗುರುತಿಸಲಾಗಿದ್ದು, ಕಳೆದ 4 ವರ್ಷಗಳ ಹಿಂದೆಯೇ ರೂ. 100.00 ಲಕ್ಷಗಳ ಅನುದಾನ ಲೋಕೋಪಯೋಗಿ ಇಲಾಖೆಗೆ ಬಿಡುಗಡೆಯಾಗಿರುತ್ತದೆಂದು ಕೂಡಲೇ ರೇಷ್ಮೆ ಇಲಾಖೆಗೆ 1.32 ಎಕರೆ ಪ್ರದೇಶವನ್ನು ಕಂದಾಯ ಇಲಾಖೆಗೆ ಹಸ್ತಾಂತರಿಸಲು ಸೂಕ್ತ ನಿರ್ದೇಶನ ನೀಡಬೇಕೆಂದು ಕೋರಿರುತ್ತಾರೆ. ಈ ಪತ್ರದ ಮೇಲೆ ಸನ್ಮಾನ್ಯ ಮುಖ್ಯಮಂತ್ರಿಯವರು 1.32 ಎಕರೆ ಜಮೀನನ್ನು ಕಂದಾಯ ಇಲಾಖೆಗೆ ಹಸ್ತಾಂತರಿಸಲು ಸೂಕ್ತ ಆದೇಶ ನೀಡುವಂತೆ ನಿರ್ದೇಶಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 01 ರೇಯೋವಿ 2011, ಬೆಂಗಳೂರು, ದಿನಾಂಕ: 22–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ನಂಜನಗೂಡಿನ ಸರ್ವೆ ನಂ. 1299/3, 1301/2 ಮತ್ತು 1301/3 ರ ರೇಷ್ಮೆ ಇಲಾಖೆಗೆ ಸೇರಿದ 5.18 ಎಕರೆ ಜಮೀನಿನಲ್ಲಿ ಈಗಾಗಲೇ 2.00 ಎಕರೆ ಜಮೀನನ್ನು ಪ್ರಥಮ ದರ್ಜೆ ಕಾಲೇಜು ಕಟ್ಟಡಕ್ಕಾಗಿ ನೀಡಿದ್ದು, ಉಳಿದ 3.18

ಎಕರೆ ಜಮೀನನ್ನು ಮಿನಿ ವಿಧಾನಸೌಧ ನಿರ್ಮಾಣ ಮಾಡಲು ಹಾಲಿ ಇರುವ ಮಾರುಕಟ್ಟೆ ದರಗಳನ್ವಯ ಮೌಲ್ಯವನ್ನು ರೇಷ್ಮೆ ಇಲಾಖೆಗೆ ನೀಡುವ ಷರತ್ತಿನೊಂದಿಗೆ ಕಂದಾಯ ಇಲಾಖೆಗೆ ಹಸ್ತಾಂತರಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆರ್‌ಡಿ 74 ಎಲ್‌ಜಿಎಂ 2012, ದಿನಾಂಕ: 29.2.2012 ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಚಂದ್ರಶೇಖರ್**

ಪೀಠಾಧಿಕಾರಿ

ತೋಟಗಾರಿಕೆ ಇಲಾಖೆ

ಪಿ.ಆರ್. 983

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಗಳನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್. ವ್ಯವಹಾರ ನಡೆಸಿರುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ಅಡಿ ನೇಮಕವಾದ ವಿಚಾರಣಾಧಿಕಾರಿಗಳು ನಡೆಸುವ ವಿಚಾರಣಾ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಒ 33 ಸಿಎಲ್‌ಎಂ 2010, ದಿನಾಂಕ 19–08–2011.

2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–1/169/ವಿಚಾರಣೆ/2009–10, ದಿನಾಂಕ 07–02–2012

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಯನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್. ವ್ಯವಹಾರವನ್ನು ನಡೆಸಿ ಬ್ಯಾಂಕಿಗೆ ಉಂಟು ಮಾಡಿರುವ ನಷ್ಟದ ಪ್ರಮಾಣವನ್ನು ನಿರ್ಧರಿಸಿ ಹಾಗೂ ಬ್ಯಾಂಕಿಗೆ ವಿಧಿಸಿರುವ ರೂ. 5.00 ಲಕ್ಷಗಳ ದಂಡವನ್ನು ಸಂಬಂಧಪಟ್ಟ ಆಡಳಿತ ಮಂಡಳಿಯ ಸದಸ್ಯರು/ಅಧಿಕಾರಿಗಳಿಂದ ವಸೂಲಿಗೆ ಜವಾಬ್ದಾರಿ ನಿಗದಿಪಡಿಸುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ಅಡಿ ವಿಚಾರಣಾಧಿಕಾರಿಗಳನ್ನು ವಿಚಾರಣೆಗೆ ನೇಮಿಸಿ ದಿನಾಂಕ 28–08–2009 ರಂದು ಸಹಕಾರ ಸಂಘಗಳ ನಿಬಂಧಕರು ಆದೇಶ ಹೊರಡಿಸಿ, ನಂತರ ವಿಚಾರಣಾ ಅವಧಿಯನ್ನು ವಿಸ್ತರಿಸುತ್ತಾ, ಅಂತಿಮವಾಗಿ ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ದಿನಾಂಕ 27–12–2011 ರವರೆಗೆ ವಿಸ್ತರಿಸಲಾಗಿತ್ತು.

ಆದರೆ, ಗೌರವ ಉಚ್ಚನ್ಯಾಯಾಲಯವು ಸದರಿ ವಿಚಾರಣೆಗೆ ರಿಟ್ ಅರ್ಜಿ ಸಂಖ್ಯೆ: 24731–32/2011ರಲ್ಲಿ ಮೊದಲಿಗೆ ದಿನಾಂಕ 13–07–2011 ರಂದು ತಡೆಯಾಜ್ಞೆಯನ್ನು ನೀಡಿ ನಂತರ ತಡೆಯಾಜ್ಞೆಯನ್ನು ದಿನಾಂಕ 24–01–2012ರವರೆಗೆ ವಿಸ್ತರಿಸಿದ್ದು, ತದನಂತರ ತಡೆಯಾಜ್ಞೆ ವಿಸ್ತರಣೆಯಾಗಿರುವುದಿಲ್ಲ.

ಈಗಾಗಲೇ ವಿಚಾರಣಾ ಆದೇಶ ಹೊರಡಿಸಿ ಎರಡು ವರ್ಷಗಳ ಮೇಲಾಗಿದ್ದು ಇನ್ನೂ ವಿಚಾರಣೆಯು ಪೂರ್ಣಗೊಳ್ಳದಿರುವುದರಿಂದ ಬ್ಯಾಂಕಿಗೆ ನಷ್ಟವಾಗಿರುವ ಮೊತ್ತವನ್ನು ನಿರ್ಧರಿಸಿ ಅದಕ್ಕೆ ಜವಾಬ್ದಾರಿ ನಿಗದಿಪಡಿಸಿ ವಸೂಲಿ ಮಾಡಲು ವಿಚಾರಣೆಯನ್ನು ನಡೆಸುವುದು ಅಗತ್ಯವಾಗಿರುತ್ತದೆ. ಆದುದರಿಂದ, ವಿಚಾರಣಾ ಅವಧಿಯನ್ನು ದಿನಾಂಕ 30–06–2012ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿ ದತ್ತವಾಗಿರುವ ಅಧಿಕಾರದ ಅನ್ವಯ ಅನುಮತಿಯನ್ನು ನೀಡುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸರ್ಕಾರವನ್ನು ಕೋರಿದ್ದಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 31 ಸಿಎಲ್‌ಎಂ 2012, ಬೆಂಗಳೂರು, ದಿನಾಂಕ 17–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಗಳನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್. ವ್ಯವಹಾರವನ್ನು ನಡೆಸಿರುವ ಬಗ್ಗೆ ಆದೇಶಿಸಲಾದ ವಿಚಾರಣಾ ಅವಧಿಯನ್ನು ದಿನಾಂಕ 28–12–2011 ರಿಂದ ದಿನಾಂಕ 30–06–2012 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2–ಎ)ರ ಉಪಬಂಧಗಳಲ್ಲಿಯ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಇಪ್ಪತ್ತಮೂರು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2–ಎ)ಯ ಉಪಬಂಧಕ್ಕೆ ಮಾಡಿದ ಮಾರ್ಪಡು ದಿನಾಂಕ 30–06–2012 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 64(2–ಎ) ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಸಿ. ಸತೀಶ್**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 991

## ಕಾರ್ಮಿಕ ಸಚಿವಾಲಯ

**ವಿಷಯ:** ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಹಾಯಕ ದಂತ ಶಸ್ತ್ರ ಚಿಕಿತ್ಸಕರಿಗೆ ಕಾಲಬದ್ಧ ಪದೋನ್ನತಿಯ ಸೌಲಭ್ಯವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ನಿರ್ದೇಶಕರು, ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಭಿವೃದ್ಧಿ/97/2007-08, ದಿನಾಂಕ 17-06-2008, 18-07-2008, 19-08-2008, 04-06-2009, 02-02-2010, 03-03-2010, 24-04-2010, 23-08-2011.
2) ಅಧ್ಯಕ್ಷರು ಕರ್ನಾಟಕ ಸರ್ಕಾರ ಕಾರ್ಮಿಕ ರಾಜ್ಯ ವಿಮಾ ವೈದ್ಯಾಧಿಕಾರಿಗಳ ಸಂಘ ಇವರ ದಿನಾಂಕ 24-01-2008ರ ಮನವಿ.

**ಪ್ರಸ್ತಾವನೆ:**

ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇವರು ಮೇಲೆ ಓದಲಾದ (1)ರಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆ.ಕು.ಕ/5 ಎಚ್.ಎಸ್.ಡಿ./92, ದಿನಾಂಕ 12-09-1996ರ ಆದೇಶದಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಿಸುತ್ತಿರುವ ಸಹಾಯಕ ದಂತ ಚಿಕಿತ್ಸಕರಿಗೆ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ವಿಸ್ತರಿಸಿರುತ್ತದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಕಾಇ 356 ಎಲ್.ಎಸ್.ಐ. 95, ದಿನಾಂಕ 04-09-2006ರ ಪ್ರಕಾರ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿಮಾ ವೈದ್ಯಾಧಿಕಾರಿಗಳಿಗೆ ಕಾಲ ಬದ್ಧ ಪದೋನ್ನತಿ ಸೌಲಭ್ಯವನ್ನು ವಿಸ್ತರಿಸಿರುವುದರಿಂದ ಇದೇ ಮಾದರಿಯಲ್ಲಿ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಹಾಯಕ ದಂತ ಶಸ್ತ್ರಚಿಕಿತ್ಸಕರಿಗೂ ಕಾಲ ಬದ್ಧ ಪದೋನ್ನತಿ ಸೌಲಭ್ಯವನ್ನು ವಿಸ್ತರಿಸುವಂತೆ ಕೋರಿರುತ್ತಾರೆ.

ಇಲಾಖೆಗೆ ಒಟ್ಟು ಎಂಟು ಸಹಾಯಕ ದಂತ ಶಸ್ತ್ರ ಚಿಕಿತ್ಸಕರ ಹುದ್ದೆಗಳು ಮಂಜೂರಾತಿಯಾಗಿದ್ದು, ಕೇವಲ ಮೂರು ಹುದ್ದೆಗಳು ಭರ್ತಿಯಾಗಿರುತ್ತದೆ. ಇವರಿಗೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯ ಅನುಸಾರ ಯಾವುದೇ ಪದೋನ್ನತಿ ಇರುವುದಿಲ್ಲ.

ಸದರಿ ವೈದ್ಯಾಧಿಕಾರಿಗಳು ಆರು ವರ್ಷ ಸೇವೆಯನ್ನು ಪೂರ್ಣಗೊಳಿಸಿದವರಿಗೆ ಮೊದಲನೇ ಕಾಲ ಬದ್ಧ ಪದೋನ್ನತಿ ಸೌಲಭ್ಯವನ್ನು ಹಾಗೂ ಹದಿಮೂರು ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದವರಿಗೆ ಎರಡನೇ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ವಿಸ್ತಿರಿಸಬೇಕಾಗಿರುತ್ತದೆ ಹಾಗೂ ಅವರ ಪದನಾಮವನ್ನು ಈ ಕೆಳಕಂಡಂತೆ ಬದಲಾವಣೆ ಮಾಡಲು ಪ್ರಸ್ತಾಪಿಸಿದ್ದಾರೆ.

| ಕ್ರ.ಸಂ. | ಪ್ರಸ್ತುತ ಇರುವ ಪದನಾಮ | ಪುನರ್ ನಾಮಕರಣ ಮಾಡಲಾದ ಪದನಾಮ | ಪೂರ್ಣಗೊಳಿಸಿದ ಸೇವಾವಧಿಯಲ್ಲಿ ಬದಲಾಗುವ ಪದನಾಮ/ಉನ್ನತ ವ್ಯಾಸಂಗವನ್ನು ಹೊಂದಿದ್ದಲ್ಲಿ ಬದಲಾಗುವ ಪದನಾಮ | ವೇತನ ಶ್ರೇಣಿ |
|---|---|---|---|---|
| 1 | ಸಹಾಯಕ ದಂತ ಚಿಕಿತ್ಸಕರು | - | - | ₹14050-25050 |
| | | ಹಿರಿಯ ದಂತ ಚಿಕಿತ್ಸಕರು/<br>ಹಿರಿಯ ದಂತ ಶಸ್ತ್ರ ಚಿಕಿತ್ಸಕರು | ಆರು ವರ್ಷ ಸೇವೆ ಪೂರ್ಣಗೊಳಿಸಿದ ನಂತರ ಸ್ನಾತಕೋತ್ತರ ಪದವಿ ಪೂರ್ಣಗೊಳಿಸಿದವರಿಗೆ | ₹15200-25650 |
| | | ಮುಖ್ಯ ದಂತ ಚಿಕಿತ್ಸಕರು/<br>ಮುಖ್ಯ ದಂತ ಶಸ್ತ್ರ ಚಿಕಿತ್ಸಕರು | ಹದಿಮೂರು ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದವರಿಗೆ ಸ್ನಾತಕೋತ್ತರ ಪದವಿ ಪೂರ್ಣಗೊಳಿಸಿದವರಿಗೆ | ₹18150-26925 |

ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ವಿಸ್ತರಿಸಿದ ನಂತರ ಇಲಾಖೆಗೆ ಮಂಜೂರಾಗುವ ಹುದ್ದೆಗಳ ಸಂಖ್ಯೆ ಮೀರದಿರುವ ಕಾರಣ ಹುದ್ದೆಗಳ ವಿವರ ಈ ರೀತಿ ಇರುತ್ತದೆಯೆಂದು ತಿಳಿಸಿದ್ದಾರೆ.

| ಕ್ರ.ಸಂ. | ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ದಂತ ಚಿಕಿತ್ಸಕರು | 05 |
| 2 | ಹಿರಿಯ ದಂತ ಚಿಕಿತ್ಸಕರು/ಹಿರಿಯ ದಂತ ಶಸ್ತ್ರ ಚಿಕಿತ್ಸಕರು | 03 |
| | ಒಟ್ಟು | 08 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಅದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 266 ಎಲ್.ಎಸ್.ಐ. 2008, ಬೆಂಗಳೂರು, ದಿನಾಂಕ 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಹಾಯಕ ದಂತ ಚಿಕಿತ್ಸಕರಿಗೆ ಕಾಲಬದ್ಧ ಪದೋನ್ನತಿಯ ಸೌಲಭ್ಯವನ್ನು ಈ ಕೆಳಕಂಡ ಬದಲಾದ ಪದನಾಮದೊಂದಿಗೆ ವಿಸ್ತರಿಸಲಾಗಿದೆ.

| ಕ್ರ.ಸಂ. | ಪ್ರಸ್ತುತ ಇರುವ ಪದನಾಮ | ಪುನರ್ ನಾಮಕರಣ ಮಾಡಲಾದ ಪದನಾಮ | ಪೂರ್ಣಗೊಳಿಸಿದ ಸೇವಾವಧಿಯಲ್ಲಿ ಬದಲಾಗುವ ಪದನಾಮ/ಉನ್ನತ ವ್ಯಾಸಂಗವನ್ನು ಹೊಂದಿದ್ದಲ್ಲಿ ಬದಲಾಗುವ ಪದನಾಮ | ವೇತನ ಶ್ರೇಣಿ |
|---|---|---|---|---|
| 1 | ಸಹಾಯಕ ದಂತ ಚಿಕಿತ್ಸಕರು | – | – | ₹14050–25050 |
| | | ಹಿರಿಯ ದಂತ ಚಿಕಿತ್ಸಕರು/ ಹಿರಿಯ ದಂತ ಶಸ್ತ್ರ ಚಿಕಿತ್ಸಕರು | ಆರು ವರ್ಷ ಸೇವೆ ಪೂರ್ಣಗೊಳಿಸಿದ ನಂತರ ಸ್ನಾತಕೋತ್ತರ ಪದವಿ ಪೂರ್ಣಗೊಳಿಸಿದವರಿಗೆ | ₹15200–25650 |
| | | ಮುಖ್ಯ ದಂತ ಚಿಕಿತ್ಸಕರು/ ಮುಖ್ಯ ದಂತ ಶಸ್ತ್ರ ಚಿಕಿತ್ಸಕರು | ಹದಿಮೂರು ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದವರಿಗೆ ಸ್ನಾತಕೋತ್ತರ ಪದವಿ ಪೂರ್ಣಗೊಳಿಸಿದವರಿಗೆ | ₹18150–26925 |

ಸದರಿ ಆದೇಶವು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

ಅ) ಮಂಜೂರಾತಿಯಾದ ಒಟ್ಟು ಹುದ್ದೆಗಳು ಸಹಾಯಕ ದಂತ ಚಿಕಿತ್ಸಕರುಗಳು ಪಡೆಯುವ ಪದೋನ್ನತಿ ಹಾಗೂ ಪದೋನ್ನತಿಯ ಮೇಲೆ ಅವಲಂಭಿತವಾಗಿದ್ದು, ಯಾವುದೇ ಕಾರಣಕ್ಕೂ ಒಟ್ಟು ಮಂಜೂರಾತಿಯಾದ 8 ಹುದ್ದೆಗಳಿಗೆ ಮೀರಕೂಡದು.

ಆ) ಕಾಲಬದ್ಧ ಪದೋನ್ನತಿ ಸೌಲಭ್ಯವು ತೃಪ್ತಿಕರವಾಗಿ ನಿಗದಿತ ಅವಧಿಯೊಳಗೆ ಪೂರ್ಣಗೊಳಿಸಿದವರಿಗೆ ಮಾತ್ರ ವಿಸ್ತರಿಸುವುದು.

ಇ) ವೇತನವನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 42(ಬಿ)ಯ ಪ್ರಕಾರ ನಿಗಧಿಗೊಳಿಸುವುದು.

ಈ) ಕಾಲಬದ್ಧ ಪದೋನ್ನತಿ ಸೌಲಭ್ಯ ಯೋಜನೆಯನ್ನು ವಿಸ್ತಿರಿಸುವ ಬಗ್ಗೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಅವಶ್ಯಕ ನಿಯಮಗಳನ್ನು ರೂಪಿಸಿದ ನಂತರ ಕಾಲಬದ್ಧ ಪದೋನ್ನತಿ ಸೌಲಭ್ಯವನ್ನು ಕ್ರಮಬದ್ಧಗೊಳಿಸಲಾಗುವುದು.

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 477 Exp.–9/2010, ದಿನಾಂಕ 03–02–2011ರಲ್ಲಿ ನೀಡಲಾದ ಸಹಮತಿಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋವಿಂದಸ್ವಾಮಿ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

ಪಿ.ಆರ್. 992

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಎಲ್. ರಂಗಪ್ಪ, ನಿವೃತ್ತ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ ಇವರ ಮೇಲಿನ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ–214 ರನ್ವಯ ಶಿಸ್ತು ಕ್ರಮ ಜರುಗಿಸುವ ಕುರಿತು.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ2(5)ದೂರು18/2011–12, ದಿನಾಂಕ 26–12–2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಎಲ್. ರಂಗಪ್ಪ. ಹಿಂದಿನ ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ರುದ್ರಪ್ಪ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಹೊಳಲ್ಕೆರೆ ಮತ್ತು ಶ್ರೀ ಲೋಕೇಶ್, ಸಹ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಆವಿನಹಟ್ಟಿ, ಹೊಳಲ್ಕೆರೆ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ–13 ರಡಿಯಲ್ಲಿ ಶಿಸ್ತುಕ್ರಮ ಜರುಗಿಸಲು ಅನುವಾಗುವಂತೆ

ನಿಯಮ–II ರನ್ವಯ ಕರಡು ದೋಷಾರೋಪಣಾ ಪಟ್ಟಿಯನ್ನು ಅನುಬಂಧ–1 ರಿಂದ 4 ರವರೆಗೆ ತಯಾರಿಸಿ ಸಲ್ಲಿಸಿದ್ದು ಶ್ರೀ ಎಲ್. ರಂಗಪ್ಪ, ಇವರು ವಯೋನಿವೃತ್ತಿ ಹೋಂದಿರುವುದರಿಂದ ಅವರು ಎಸಗಿರುವ ಆರೋಪಗಳಿಗೆ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ–II ಮತ್ತು 13ರಡಿಯಲ್ಲಿ ಜಂಟಿ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಲಾಗಿದ್ದು ಅವರ ಮೇಲಿನ ಆರೋಪಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ–214 ರಡಿ ಶಿಸ್ತು ಕ್ರಮ ಜರುಗಿಸಲು ನಿರ್ಧರಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 52 ಡಿಜಿಪಿ 2011, ಬೆಂಗಳೂರು, ದಿನಾಂಕ 22–03–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಎಲ್. ರಂಗಪ್ಪ, ನಿವೃತ್ತ ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ ಇವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ–214 ರಡಿ ಶಿಸ್ತು ಕ್ರಮ ಜರುಗಿಸಲು ಸರ್ಕಾರದ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಆಡಳಿತ)

ಪಿ.ಆರ್. 993

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.–

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 205 ಸಅಸೇ 2009, ದಿನಾಂಕ 20–04–2009
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 134 ಸಅಸೇ 2011, ದಿನಾಂಕ 09–03–2011
3) ಸರ್ಕಾರದ ಕಾರ್ಯದರ್ಶಿ, ವಸತಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಒಹೆಚ್/5841/ಎಸ್ಇಸಿವೈ/2011, ದಿನಾಂಕ 15–12–2011.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ 01–04–2011 ರಿಂದ 31–03–2012 ರವರೆಗೆ ಮುಂದುವರಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ ವಸತಿ ಇಲಾಖೆ ಹಾಗೂ ಪೂರಕ ಹುದ್ದೆಗಳು ಅವಶ್ಯಕವಿದ್ದು ಈ ಕೆಳಕಂಡ ಹುದ್ದೆಗಳನ್ನು ಮುಂದುವರಿಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2) | 01 |
| 2 | ಶೀಘ್ರಲಿಪಿಗಾರರು/ಹಿರಿಯ ಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 02 |
| 3 | ಕಿರಿಯ ಸಹಾಯಕರು/ಸಹಾಯಕ | 01 |
| 4 | ವಾಹನ ಚಾಲಕರು | 01 |
| 5 | ದಲಾಯತ್ | 02 |
| | ಒಟ್ಟು | 07 ಹುದ್ದೆಗಳು |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಅಸೇ 2012, ಬೆಂಗಳೂರು, ದಿನಾಂಕ 20–03–2012**

ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸರ್ಕಾರದ ಕಾರ್ಯದರ್ಶಿ ಹಾಗೂ ಈ ಕೆಳಕಂಡ ಪೂರಕ ಹುದ್ದೆಗಳನ್ನು ದಿನಾಂಕ 01–04–2012 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2) | 01 |
| 2 | ಶೀಘ್ರಲಿಪಿಗಾರರು/ಹಿರಿಯ ಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 02 |
| 3 | ಕಿರಿಯ ಸಹಾಯಕರು/ಸಹಾಯಕ | 01 |
| 4 | ವಾಹನ ಚಾಲಕರು | 01 |
| 5 | ದಲಾಯತ್ | 02 |
| | ಒಟ್ಟು | 07 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–07–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ. ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 994 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

## PERSONNEL AND ADMINISTRATIVE REFORMS SECRETARIAT

**Sub:** Sanction of Medical expenses to the retired Chief Justices and Judges who are appointed initially in Karnataka High Court and thereafter transferred and retired from other High courts and are residing in Karnataka.

**Read:**
1) G.O. No. DPAR 84 SHC 2004, dated 15-10-2004
2) G.O. No. DPAR 84 SHC 2004, dated 22-09-2006
3) G.O. No. DPAR 40 SE Vu Nya 2010, dated 20-11-2010
4) G.O. No. DPAR 18 Se Vu Nya 2011, dated 25-06-2011
5) Letter No. RPS 71/2002, dated 01-06-2011 received from the Registrar General, High Court of Karnataka.

**Preamble:**

In the Government Order read at (3) above Government have ordered enhancement of medical expenses sanctioned to the retired Chief Justices and Judges of the High Court of Karnataka to Rs. 30,000/- and Rs. 20,000/- respectively, per annum, subject to certain conditions.

In the letter read at (5) above, the Registrar General of High Court of Karnataka had requested the Government to modify the Government Order read at (3) above, in order to extend the benefit of reimbursement of Medical expenses to the retired Chief Justices and Judges who are appointed initially in Karnataka High Court and thereafter transferred and retired from other High courts and are residing in Karnataka on par with the Chief Justices and Judges retired from the Karnataka High Court.

In the Government Order read at (4) above, in modification of Government Order read at (3), Government have ordered extension of the benefit of reimbursement of Medical expenses to the retired Chief Justices and Judges of the Karnataka High Court on par with the sitting Chief Justices and Judges of the Karnataka High Court.

In the above circumstances the request of the Registrar General of High Court of Karnataka have been examined by Government in detail and the following order is issued.

**Government Order No. DPAR 31 Se Vu Nya 2011, Bangalore, dated 21-03-2011**

Government are pleased to order extension of the benefit of reimbursement of medical expenses to the retired Chief Justices and Judges who are appointed initially in Karnataka High Court and thereafter transferred and retired from other High courts and are residing in Karnataka as applicable to the sitting Judges of the High Court of Karnataka subject to the following condition:-

**Conditions**

a) The Chief Justices and Judges initially appointed in Karnataka High Court and transferred and later retired elsewhere but residing in Karnataka.
b) The Chief Justices and Judges who are not practicing as Senior Advocate
c) Who are not engaged or re-employed in any Government Assignments.
d) The reimbursement of Medical expenses shall be covered by the Karnataka Ministers, Minister of State and Deputy Ministers Medical Attendance Rules, 1958 as applicable to the sitting Chief Justice/Judges of the High Court of Karnataka.

The Registrar General, High Court of Karnataka shall be the drawing and disbursing Officer in respect of the above expenditure preferred by the above retired Chief Justices and Judges.

The expenditure in this regard is debitable to the head of account "2014-00-102-0-01 High Court Judges"

This Order issues with the concurrence of Finance Department vide its Note No. FD 202 S-I 2012, dated 08-03-2012.

By Order and in the name of the Governor of Karnataka

**A. R. Vijayananda Sharma**

Under Secretary to Government

P.R. 995 DPAR (Services-3)

## ಕಂದಾಯ ಸಚಿವಾಲಯ

**ವಿಷಯ:** 2011–12ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ, ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.–

**ಓದಲಾಗಿದೆ:** 1) ದಿನಾಂಕ 22–2–2012ರಂದು ಮಾನ್ಯ ಮುಖ್ಯಮಂತ್ರಿಗಳು ಜರುಗಿಸಿದ ವಿಡಿಯೋ ಸಂವಾದದ ನಡವಳಿಗಳು.

2) ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು

**ಪ್ರಸ್ತಾವನೆ:**

2011–12ನೇ ಸಾಲಿನಲ್ಲಿ ಮುಂಗಾರು ಮಳೆವಿಫಲವಾಗಿ, ರಾಜ್ಯದ 24 ಜಿಲ್ಲೆಗಳ 123 ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ ಉಂಟಾಗಿರುತ್ತದೆ. ಬರ ಪರಿಸ್ಥಿತಿಯನ್ನು ಎದುರಿಸಲು ಕುಡಿಯುವ ನೀರು ಸರಬರಾಜು, ಜಾನುವಾರುಗಳಿಗೆ ಮೇವು ಒದಗಿಸುವ ಮತ್ತು ಜಾನುವಾರು ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ದಿನಾಂಕ 22–2–2012 ರಂದು ಮಾನ್ಯ ಮುಖ್ಯ ಮಂತ್ರಿಗಳೊಂದಿಗೆ ಜರುಗಿದ ವಿಡಿಯೋ ಸಂವಾದ ಹಾಗೂ ಪತ್ರಗಳ ಮುಖೇನ ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿಗಳು ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು, ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 83 ಟಿಎನ್‌ಆರ್ 2012, ಬೆಂಗಳೂರು, ದಿನಾಂಕ 20–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಂಗಾರು ಮಳೆಯ ಕೊರತೆಯಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆ | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) | ಈ ಕೆಳಕಂಡ ಲೆಕ್ಕ ಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು |
|---|---|---|---|
| 1 | ಬಿಜಾಪುರ | 250.00 | 2245–01–800–1–01–100 (ಯೋಜನೇತರ) |
| 2 | ಬೀದರ್ | 250.00 | 2245–01–800–1–01–100 (ಯೋಜನೇತರ) |
| 3 | ಬಳ್ಳಾರಿ | 150.00 | 2245–01–800–1–01–100 (ಯೋಜನೇತರ) |
| 4 | ಗುಲ್ಬರ್ಗಾ | 100.00 | 2245–01–800–1–01–100 (ಯೋಜನೇತರ) |
| 5 | ಚಾಮರಾಜನಗರ | 200.00 | 2245–01–800–1–01–100 (ಯೋಜನೇತರ) |
| 6 | ಚಿತ್ರದುರ್ಗ | 350.00 | 2245–01–800–1–01–100 (ಯೋಜನೇತರ) |
| 7 | ಚಿಕ್ಕಬಳ್ಳಾಪುರ | 100.00 | 2245–01–800–1–01–100 (ಯೋಜನೇತರ) |
| 8 | ಹಾಸನ | 100.00 | 2245–01–800–1–01–100 (ಯೋಜನೇತರ) |
| 9 | ದಾವಣಗೆರೆ | 200.00 | 2245–01–800–1–01–100 (ಯೋಜನೇತರ) |
| 10 | ರಾಮನಗರ | 200.00 | 2245–01–800–1–01–100 (ಯೋಜನೇತರ) |
| 11 | ಹಾವೇರಿ | 100.00 | 2245–01–800–1–01–100 (ಯೋಜನೇತರ) |
| 12 | ಮಂಡ್ಯ | 300.00 | 2245–01–102–0–00–100 (ಯೋಜನೇತರ) |
| 13 | ತುಮಕೂರು | 500.00 | 2245–01–102–0–00–100 (ಯೋಜನೇತರ) |

| | | | |
|---|---|---|---|
| 14 | ಯಾದಗಿರಿ | 100.00 | 2245–01–102–0–00–100 (ಯೋಜನೇತರ) |
| 15 | ಬಾಗಲಕೋಟೆ | 250.00 | 2245–01–102–0–00–100 (ಯೋಜನೇತರ) |
| 16 | ಕೋಲಾರ | 400.00 | 2245–01–102–0–00–100 (ಯೋಜನೇತರ) |
| 17 | ರಾಯಚೂರು | 250.00 | 2245–80–101–0–02–100 (ಯೋಜನೇತರ) |
| 18 | ಕೊಪ್ಪಳ | 300.00 | 2245–80–101–0–02–100 (ಯೋಜನೇತರ) |
| | **ಒಟ್ಟು** | **4100.00** | |

(ರೂಪಾಯಿ ನಾಲ್ಕು ಸಾವಿರದ ಒಂದು ನೂರು ಲಕ್ಷಗಳು ಮಾತ್ರ)

1) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ಅನುದಾನವನ್ನು ವೆಚ್ಚ ಮಾಡುವುದು

2) ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಸಮಾಲೋಚಿಸಿ.
   ಅ) ಕುಡಿಯುವ ನೀರಿನ ವ್ಯವಸ್ಥೆ, ಹಾಗೂ
   ಆ) ಜಾನುವಾರುಗಳ ಸಂರಕ್ಷಣೆಗಾಗಿ ಮಾತ್ರ ಅನುದಾನವನ್ನು ಬಳಸುವುದು

3) ಜಿಲ್ಲಾ ಉಸ್ತುವಾರಿ ಸಚಿವರುಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಈ ಬಗ್ಗೆ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿರವರುಗಳು ಆಯಾ ಜಿಲ್ಲಾ ಸಚಿವರೊಡನೆ ನಿಕಟ ಸಂಪರ್ಕವಿರಿಸಿಕೊಂಡು ಸಭೆಗಳನ್ನು ಆಯೋಜಿಸಲು ಕ್ರಮ ವಹಿಸುವುದು.

4) ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗೆಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು, ಪ್ರತಿ ತಿಂಗಳ 5ನೇ ತಾರೀಖಿನೊಳಗೆ ಸಭೆಗಳ ನಡವಳಿಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.

5) ಪ್ರತಿ ತಾಲ್ಲೂಕಿನಲ್ಲಿ ಶಾಸಕರ ಅಧ್ಯಕ್ಷತೆಯಲ್ಲಿ ಬರಪರಿಹಾರ ಕಾಮಗಾರಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನೂ ಸೇರಿಸಿದಂತೆ ಕ್ರಿಯಾ ಯೋಜನೆಗಳನ್ನು ಸಿದ್ಧಪಡಿಸಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ಕರೆದು ಸಿದ್ಧಪಡಿಸಿದ ಹಾಗೂ ಅನುಮೋದಿಸಿದ ಕಾರ್ಯ ಯೋಜನೆಗಳನ್ನು ಯುದ್ಧೋಪಾದಿಯಲ್ಲಿ ಜಾರಿಗೊಳಿಸುವುದು.

6) ಬರಪೀಡಿತ ಪ್ರದೇಶಗಳಿಗೆ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ವ್ಯಾಪಕವಾಗಿ ಪ್ರವಾಸ ಮಾಡುವುದು ಹಾಗೂ ಯಾವುದೇ ಗ್ರಾಮದಲ್ಲಿ ಕುಡಿಯುವ ನೀರು ಹಾಗೂ ಜಾನುವಾರುಗಳಿಗೆ ಸಂಬಂಧಪಟ್ಟ ಸಮಸ್ಯೆಗಳು ಉದ್ಭವವಾಗದಂತೆ ನೋಡಿಕೊಳ್ಳುವುದು ಬರಪೀಡಿತ ಪ್ರದೇಶದಲ್ಲಿ ಜನರು ಗುಳೇ ಹೋಗುವುದನ್ನು ತಡೆಗಟ್ಟಲು ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಕಾಮಗಾರಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬೇಡಿಕೆಗನುಗುಣವಾಗಿ ಅನುಷ್ಠಾನಗೊಳಿಸುವುದು.

7) ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸಲು ತಾಲ್ಲೂಕಿಗೊಂದು ಸಹಾಯವಾಣಿಯನ್ನು ಸ್ಥಾಪಿಸಿ, ತಾಂತ್ರಿಕ ಸಿಬ್ಬಂದಿಯನ್ನು ನಿಯೋಜಿಸಿ 24 ಗಂಟೆಯೊಳಗಾಗಿ ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸುವುದು.

8) ಪ್ರತಿ 15 ದಿನಗಳಿಗೊಮ್ಮೆ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಜಂಟಿಯಾಗಿ ಬರ ಪರಿಹಾರ ಕಾಮಗಾರಿಗಳ ಬಗ್ಗೆ ಪತ್ರಿಕಾಗೋಷ್ಠಿ ನಡೆಸಿ ಮಾಧ್ಯಮಗಳಿಗೆ ಜಿಲ್ಲೆಯಲ್ಲಿ ಕೈಗೊಂಡಿರುವ ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಉದ್ಯೋಗ ಖಾತರಿ ಯೋಜನೆ ಮತ್ತು ಬರಪರಿಹಾರಕ್ಕೆ ಸಂಬಂಧಿಸಿದಂತೆ ಸಾಧಿಸಿರುವ ಪ್ರಗತಿಯ ಚಿತ್ರಣವನ್ನು ಬಿಂಬಿಸುವುದು, ಪತ್ರಿಕಾಗೋಷ್ಠಿಯಲ್ಲಿ ಸಿದ್ಧಪಡಿಸಿದ ಟಿಪ್ಪಣಿಯನ್ನು ಇ–ಮೇಲ್ ಮುಖಾಂತರ ಸರ್ಕಾರಕ್ಕೆ ರವಾನಿಸುವುದು. ಇ–ಮೇಲ್ ವಿಳಾಸ secyrelief-rev@karnataka.gov.in.

9) ಪ್ರತಿ ಹೋಬಳಿಗೆ ಒಬ್ಬ ಜಿಲ್ಲಾ ಮಟ್ಟದ ನೋಡಲ್ ಅಧಿಕಾರಿಯನ್ನು ನೇಮಿಸಿ ಅವರ ಮೂಲಕ ಬರಪರಿಹಾರ ಕಾಮಗಾರಿಗಳು ಜಾನುವಾರು ಸಂರಕ್ಷಣೆ ಮತ್ತು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನಿರ್ವಹಿಸಲಾಗುತ್ತಿರುವ ಕಾಮಗಾರಿಗಳನ್ನು ವ್ಯಾಪಕವಾಗಿ ಪರಿಶೀಲನೆ ಮಾಡುವುದು.

10) ಮುಂದಿನ 2 ತಿಂಗಳುಗಳ ಕಾಲ ಕುಡಿಯುವ ನೀರು/ಮೇವಿನ ಕೊರತೆ ಹಾಗೂ ಉದ್ಯೋಗಕ್ಕೆ ಕೊರತೆಯುಂಟಾಗದಂತೆ ಹಾಗೂ ಯಾವುದೇ ದೂರುಗಳು ಬರದಂತೆ ಕಾರ್ಯ ನಿರ್ವಹಿಸುವುದು.

11) ಪ್ರತಿಯೊಂದು ಕಾಮಗಾರಿಯ ಆರಂಭ, ಚಾಲ್ತಿಯಲ್ಲಿರುವ ಹಾಗೂ ಮುಕ್ತಾಯದ ಹಂತಗಳ ಛಾಯಾ ಚಿತ್ರಗಳನ್ನು ದಾಖಲಿಸಿ, ಮೂರನೇ ಹಂತದ ಪರಿವೀಕ್ಷಣೆಗೆ ಒಳಪಡಿಸಿ, ಅಂತಿಮ ಬಿಲ್ ಪಾವತಿ ಮಾಡುವುದು.

12) ಪೂರ್ಣಗೊಂಡ ಪ್ರತಿಯೊಂದು ಕಾಮಗಾರಿಯ ಛಾಯಾ ಚಿತ್ರಗಳು ಹಾಗು ವೆಚ್ಚದ ವಿವರಗಳನ್ನು ಈ–ಮೇಲ್ ಮುಖಾಂತರ secyrelief-rev@karnataka.gov.in ಕಳುಹಿಸುವುದು.

13) ಪ್ರತಿಯೊಂದು ಕಾಮಗಾರಿಯ ವಿವರಗಳನ್ನು ಫಲಕದಲ್ಲಿ ಸಾರ್ವಜನಿಕರಿಗೆ ಕಾಣುವಂತೆ ಈ ಕೆಳಕಂಡ ಮಾದರಿಯಲ್ಲಿ ನಮೂದಿಸುವುದು.

**ಪ್ರಕೃತಿ ವಿಕೋಪ ಕಾಮಗಾರಿ**

| | |
|---|---|
| ಕಾಮಗಾರಿಯ ಹೆಸರು | |
| ಅಂದಾಜು ಮೊತ್ತ | |
| ಕಾಮಗಾರಿ ಪ್ರಾರಂಭಿಸಿದ ದಿನಾಂಕ | |
| ಕಾಮಗಾರಿ ಮುಕ್ತಾಯವಾದ ದಿನಾಂಕ | |
| ಅನುಷ್ಠಾನಗೊಳಿಸಿದ ಸಂಸ್ಥೆ: | |

14) ಪ್ರತಿ ತಿಂಗಳೂ ಅಂತ್ಯಕ್ಕೆ ಅನುದಾನ ಬಳಕೆಯಾದ ವಿವರಗಳನ್ನು ಮೇಲ್ಕಂಡ ಇ–ಮೇಲ್ ಮುಖಾಂತರ ಸಲ್ಲಿಸುವುದು ಬಳಕೆ ಪ್ರಮಾಣ ಪತ್ರಗಳನ್ನೂ ಸಹ ತಪ್ಪದೇ ಸರ್ಕಾರಕ್ಕೆ ರವಾನಿಸುವುದು.

15) ಪ್ರತಿ ತಿಂಗಳು ಸಾಧಿಸಿದ ಪ್ರಗತಿಯನ್ನು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ಹಾಗೂ ಪ್ರಾದೇಶಿಕ ಆಯುಕ್ತರ ಗಮನಕ್ಕೆ ತರುವುದು ಮತ್ತು ಅವರಿಂದ ಸಲಹೆ–ಸೂಚನೆಗಳನ್ನು ಪಡೆಯುವುದು.

16) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್./ಎನ್.ಡಿ.ಆರ್.ಎಫ್. ಅಡಿಯಲ್ಲಿ ಕೈಗೊಳ್ಳುವಂತಿಲ್ಲ ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಎಸ್.ಡಿ.ಆರ್.ಎಫ್. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಜಿಲ್ಲಾಧಿಕಾರಿಗಳು ಅವರ ಜಿಲ್ಲೆಯ ಎದುರಿಗೆ ತಿಳಿಸಿರುವ ಆಯವ್ಯಯ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ.ಆ.ಇ. 243 ವೆಚ್ಚ–7/2012, ದಿನಾಂಕ 15–03–2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಎಂ. ಆನಂದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 996

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಹುಬ್ಬಳ್ಳಿ ವಿಮಾನ ನಿಲ್ದಾಣದ ವಿಸ್ತರಣೆಗಾಗಿ ಸ್ವಾಧೀನಪಡಿಸಿರುವ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ಗೋಕುಲ ಮತ್ತು ಉಣಕಲ್ ಗ್ರಾಮಗಳ 11–05 ಎಕರೆ ಜಮೀನಿನಲ್ಲಿ ಅಕ್ರಮವಾಗಿ ಮನೆ ಕಟ್ಟಿಕೊಂಡು, ವಾಸ ಮಾಡುತ್ತಿರುವ ಮನೆ / ಕಟ್ಟಡಗಳಿಗೆ ದಯಾತ್ಮಕ ಪರಿಹಾರ ನೀಡುವ ಕುರಿತು.

**ಓದಲಾಗಿದೆ :** ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹಾಗೂ ಕಾರ್ಯ ನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ: ಕಕೈಪ್ರಅಮಂ/ ಕೇಂಕ/ ಭೂಸ್ವಾ (ಧಾ–1)/ 1849 (3)/ 13972/ 2011–12, ದಿನಾಂಕ: 18–02–2012.

**ಪ್ರಸ್ತಾವನೆ :**

ಹುಬ್ಬಳ್ಳಿ ವಿಮಾನ ನಿಲ್ದಾಣದ ವಿಸ್ತರಣೆಗಾಗಿ ಸ್ವಾಧೀನಪಡಿಸಿರುವ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ಗೋಕುಲ ಮತ್ತು ಉಣಕಲ್ ಗ್ರಾಮಗಳ ಒಟ್ಟು 710–36 ಎಕರೆ ಜಮೀನನ್ನು ಭೂಸ್ವಾಧೀನ ಪ್ರಕ್ರಿಯೆಗೆ ಒಳಪಡಿಸಲು ಕೆ.ಐ.ಎ.ಡಿ. ಕಾಯ್ದೆ ಕಲಂ 28(4)ರಡಿ ಅಂತಿಮ ಅಧಿಸೂಚನೆಗಳನ್ನು ದಿನಾಂಕ: 02–09–2009 ಮತ್ತು 17–11–2009ರಂದು ಹೊರಡಿಸಲಾಗಿದೆ. ಈ ಅಧಿಸೂಚನೆಯಲ್ಲಿ ಗೋಕುಲ ಗ್ರಾಮದ ರಿ.ಸ. / ಬ್ಲಾಕ್ ನಂ. 3ಅ/1, 4/3 ಹಾಗೂ ಉಣಕಲ್ ಗ್ರಾಮದ ರಿ.ಸ. ನಂ: 628ಅ/1, ಪ್ಲಾಟ್ ನಂ: 31, 639/4+5ಬ, 639/8–9ರ 11–05 ಎಕರೆ ಜಮೀನಿನಲ್ಲಿ ಕೆಲ ಬಡ ವರ್ಗದ ಜನರು ಅಕ್ರಮವಾಗಿ ಮನೆ ಕಟ್ಟಿಕೊಂಡು ವಾಸ ಮಾಡುತ್ತಿದ್ದು, ಇವರುಗಳ ಹೆಸರಿಗೆ ಅಧಿಕೃತ ದಾಖಲಾತಿಗಳು ಇರುವುದಿಲ್ಲ. ಈ ಅಕ್ರಮ ಕಟ್ಟಡಗಳನ್ನು ಭೂ ಕಂದಾಯ ಕಾಯ್ದೆ ಮತ್ತು ನಿಯಮಾವಳಿಗಳ ಅನುಸಾರ ಭೂ ಪರಿವರ್ತನೆ, ಸ್ಥಳೀಯ ಸಂಸ್ಥೆಯಿಂದ ಪರವಾನಿಗೆ ಪಡೆಯದೇ, ಮುಗ್ಧತೆಯಿಂದ ಕಟ್ಟಿಕೊಂಡು ವಾಸವಿರುವ ಕಾರಣ, ವಿಶೇಷ ಪ್ರಕರಣ ಎಂದು ಪರಿಗಣಿಸಿ, ಹಾಲಿ ವಾಸವಿರುವ ಬಡ ಕೂಲಿಕಾರರಿಗೆ ಮಾನವೀಯತೆಯ ದೃಷ್ಟಿಯಿಂದ ಪರಿಹಾರವನ್ನು ಪಾವತಿಸುವುದು ಸೂಕ್ತ ಎಂದು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರು ಶಿಫಾರಸ್ಸು ಮಾಡಿದ್ದು,

ಈ ಕುರಿತು ಕೆ.ಐ.ಎ.ಡಿ.ಬಿ.ಯು ಮೌಲ್ಯಮಾಪನ ಮಾಡಿ, ಈ ಕೆಳಕಂಡ ಜಮೀನುಗಳಿಗೆ ದಯಾತ್ಮಕ ಪರಿಹಾರವನ್ನು ಪಾವತಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತದೆ.

| ಕ್ರಮ ಸಂಖ್ಯೆ | ಗ್ರಾಮ | ಬ್ಲಾಕ್ / ರಿ.ಸ. ನಂಬರ್ | ಮೌಲ್ಯಮಾಪನ ವರದಿಯಂತೆ ಒಟ್ಟು ಮೌಲ್ಯ (ರೂ.ಗಳಲ್ಲಿ) |
|---|---|---|---|
| 1. | ಗೋಕುಲ | 3ಅ/1 | 5,53,876.00 |
| 2. | ಗೋಕುಲ | 4/3 | 31,52,379.00 |
| 3. | ಉಣಕಲ್ | 628/ಅ/1 | 22,47,150.00 |
| 4. | ಉಣಕಲ್ | 639/4+5ಬ | 1,48,37,032.00 |
| 5. | ಉಣಕಲ್ | 639/8+9 | 52,20,148.00 |
| | ಒಟ್ಟು | | 2,60,10,585.00 |

ಒಟ್ಟು 53 ಬಡ ಕೂಲಿಕಾರರ ಮನೆ / ಕಟ್ಟಡಗಳಿಗೆ ದಯಾತ್ಮಕ ಪರಿಹಾರವನ್ನು ನೀಡಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಸ್ವಾಧೀನಪಡಿಸಿರುವ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ಗೋಕುಲ ಮತ್ತು ಉಣಕಲ್ ಗ್ರಾಮಗಳ ವಿವಿಧ ರಿ.ಸ. / ಬ್ಲಾಕ್ ನಂಬರ್‌ಗಳ 11 ಎಕರೆ 05 ಗುಂಟೆ ಜಮೀನಿನಲ್ಲಿ ಅಕ್ರಮವಾಗಿ ಮನೆ ಕಟ್ಟಿಕೊಂಡಿರುವವರಿಗೆ ದಯಾತ್ಮಕ ಪರಿಹಾರ ನೀಡುವ ವಿಷಯವನ್ನು ದಿನಾಂಕ: 07–03–2012ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ (ಪ್ರಕರಣ ಸಂಖ್ಯೆ: ಸಿ: 128/2012) ಕೂಲಂಕಷವಾಗಿ ಪರಿಶೀಲಿಸಿದಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ: ಸಿಐ 243 ಎಸ್‌ಪಿಕ್ಯೂ 2011, ಬೆಂಗಳೂರು, ದಿನಾಂಕ: 21–03–2012**

ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯ ಕೋರಿಕೆಯ ಮೇರೆಗೆ ಹುಬ್ಬಳ್ಳಿ ವಿಮಾನ ನಿಲ್ದಾಣದ ವಿಸ್ತರಣೆಗಾಗಿ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲಾಗಿದೆ. ಈ ಯೋಜನೆಗೆ ಸಂಬಂಧಪಟ್ಟಂತೆ ಈಗ ಹೆಚ್ಚುವರಿಯಾಗಿ ಪಾವತಿಸಬೇಕಾಗಿರುವ ರೂ.2,60,10,585/–ಗಳ ದಯಾತ್ಮಕ ಪರಿಹಾರವನ್ನು ವಿಶೇಷ ಪ್ರಕರಣ ಎಂದು ಪರಿಗಣಿಸಿ, ಸದರಿ ಇಲಾಖೆಯೇ ಭರಿಸಬೇಕಾಗಿರುತ್ತದೆ. ಈ ಹಿಂದೆ ಕೆಲವು ಪ್ರಕರಣಗಳಲ್ಲಿ ಹೆಚ್ಚುವರಿಯಾಗಿ ಪಾವತಿಸಬೇಕಾದಂತಹ ಸಂದರ್ಭಗಳಲ್ಲಿ ಜಮೀನು ಪಡೆದ ಇಲಾಖೆ / ಕಂಪನಿಯು ಭರಿಸಿರುತ್ತದೆ. ಆದಕಾರಣ ಈ ಪ್ರಕರಣದಲ್ಲಿ ಹೆಚ್ಚುವರಿಯಾಗಿ ಪಾವತಿಸಬೇಕಾಗಿರುವ ಈ ಕೆಳಕಂಡ ಗ್ರಾಮಗಳ / ರಿ.ಸ. ನಂಬರ್‌ಗಳ ಜಮೀನುಗಳಿಗೆ ತಗಲುವ ದಯಾತ್ಮಕ ಪರಿಹಾರದ ಮೊತ್ತವನ್ನು ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯೇ ಭರಿಸಲು ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಗ್ರಾಮ | ಬ್ಲಾಕ್ / ರಿ.ಸ. ನಂಬರ್ | ಮೌಲ್ಯಮಾಪನ ವರದಿಯಂತೆ ಒಟ್ಟು ಮೌಲ್ಯ (ರೂ.ಗಳಲ್ಲಿ) |
|---|---|---|---|
| 1. | ಗೋಕುಲ | 3ಅ/1 | 5,53,876.00 |
| 2. | ಗೋಕುಲ | 4/3 | 31,52,379.00 |
| 3. | ಉಣಕಲ್ | 628/ಅ/1 | 22,47,150.00 |
| 4. | ಉಣಕಲ್ | 639/4+5ಬ | 1,48,37,032.00 |
| 5. | ಉಣಕಲ್ | 639/8+9 | 52,20,148.00 |
| | ಒಟ್ಟು | | 2,60,10,585.00 |

ಈ ಆದೇಶವು ಮೇಲ್ಕಂಡ ಜಮೀನುಗಳಿಗೆ ಮಾತ್ರ ಅನ್ವಯಿಸಲ್ಪಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)

ಪಿ.ಆರ್. 997 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಸಂಪತ್‌ರಾವ್ ಎಸ್. ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–2/ಸಿಆರ್–1/2006 ಮೈಸೂರು ದಿನಾಂಕ: 10–02–2006.
2. ಸರ್ಕಾರದ ಆದೇಶ ಸಂಖ್ಯೆ: ಆಇ 4 ವಾತೆತ 2006 ದಿನಾಂಕ: 07–07–2006.
3. ಸರ್ಕಾರಿ ಆದೇಶ ಸಂಖ್ಯೆ: ಆಇ 4 ವಾತೆತ 2006 ಬೆಂಗಳೂರು, ದಿನಾಂಕ: 22–06–2007.
4. ಸರ್ಕಾರಿ ಆದೇಶ ಸಂಖ್ಯೆ: ಆಇ 12 ವಾತೆತ 2007 ಬೆಂಗಳೂರು, ದಿನಾಂಕ: 18–04–2007.
5. ಸರ್ಕಾರಿ ಆದೇಶ ಸಂಖ್ಯೆ: ಆಇ 4 ವಾತೆತ 2006 ಬೆಂಗಳೂರು, ದಿನಾಂಕ: 09–07–2009.
6. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–2/ಸಿಆರ್–1/2006 ಮೈಸೂರು ದಿನಾಂಕ: 31–01–2012.

**ಪ್ರಸ್ತಾವನೆ :**

ಶ್ರೀ ಸಂಪತ್‌ರಾವ್ ಎಸ್. ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿ, (ಸ್ಥಿತ್ಯಂತರ)–1, ಮೈಸೂರು, ಇವರನ್ನು ಶ್ರೀ ಗಣೇಶ್ ಬಿನ್. ಶೇಷಪ್ಪ ಶೆಟ್ಟಿ, ಅಕೌಂಟೆಂಟ್, ಲಕ್ಷ್ಮಿ ಕಂಟ್ರೋಲ್ ಸಿಸ್ಟಂ, ಹೂಟಹಳ್ಳಿ ಕೈಗಾರಿಕಾ ಬಡಾವಣೆ, ಬೆಳವಾಡಿ ಅಂಚೆ, ಮೈಸೂರು, ಇವರು ದಿನಾಂಕ: 16–10–2005 ರಂದು ಫಾರಂ–37ನ್ನು ನೀಡಲು ಕೋರಿದ ಸಂದರ್ಭದಲ್ಲಿ ರೂ.3,000/– ಅಕ್ರಮ ಸಂಭಾವನೆಗಾಗಿ ಒತ್ತಾಯಿಸಿದ್ದು, ಫಿರ್ಯಾದುದಾರರು ಲಂಚದ ಹಣವನ್ನು ಕೊಡಲು ಇಷ್ಟವಿಲ್ಲದ್ದರಿಂದ ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮೈಸೂರು, ಇಲ್ಲಿ ಲಿಖಿತ ದೂರನ್ನು ಸಲ್ಲಿಸಿದ್ದರ ಮೇರೆಗೆ ಮೊಕದ್ದಮೆ ಸಂಖ್ಯೆ:1/2006ನ್ನು ದಾಖಲಿಸಿಕೊಂಡು, ದಿನಾಂಕ: 19–01–2006 ರಂದು ಆರೋಪಿತರ ಕಛೇರಿಯಲ್ಲಿ ಬೀಸಿದ ಬಲೆಗೆ ಆರೋಪಿತರಾದ ಶ್ರೀ ಸಂಪತ್‌ರಾವ್ ಎಸ್.ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರು 2,600/– ಗಳನ್ನು ಫಿರ್ಯಾದುದಾರರಿಂದ ಒತ್ತಾಯಿಸಿ ಸ್ವೀಕರಿಸಿದ ಸಂದರ್ಭದಲ್ಲಿ ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದ ಕಾರಣ ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸದರಿ ಅಧಿಕಾರಿಯವರನ್ನು ಅಮಾನತ್ತುಗೊಳಿಸುವಂತೆ ಅಭಿಪ್ರಾಯಿಸಿ ಕಳುಹಿಸಿದ್ದರು.

ಸರ್ಕಾರವು ಸದರಿ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ನೀಡಿರುವ ವರದಿ ಆಧಾರದ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಸರ್ಕಾರದ ಆದೇಶದಲ್ಲಿ ಶ್ರೀ ಸಂಪತ್‌ರಾವ್ ಎಸ್. ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಅಮಾನತ್ತುಗೊಳಿಸಲಾಗಿತ್ತು. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಸರ್ಕಾರಿ ಆದೇಶದಲ್ಲಿ ಅಮಾನತ್ತು ತೆರವುಗೊಳಿಸಿ ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಸರ್ಕಾರದ ಆದೇಶದಲ್ಲಿ ಶ್ರೀ ಸಂಪತ್‌ರಾವ್ ಎಸ್. ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7.13(1)ಡಿ ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಮಂಜೂರಾತಿ ನೀಡಿ ಆದೇಶಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ಸರ್ಕಾರದ ಆದೇಶದಲ್ಲಿ ಶ್ರೀ ಸಂಪತ್‌ರಾವ್ ಎಸ್. ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಶಿಸ್ತುಕ್ರಮವನ್ನು ವಿಚಾರಣೆ ನಡೆಸಲು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಂತೆ ವಿಚಾರಣೆ ನಡೆಸಲು, ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–14ಎ ರನ್ವಯ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (6)ರ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದಲ್ಲಿ, ಶ್ರೀ ಸಂಪತ್‌ರಾವ್ ಎಸ್. ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿ, ಮೈಸೂರು, ಇವರ ವಿರುದ್ಧ ಸಲ್ಲಿಸಿದ್ದ ದೋಷಾರೋಪಣಾ ಪಟ್ಟಿಯನ್ನು ಮೈಸೂರು 3ನೇ ಅಪರ ನ್ಯಾಯಾಧೀಶರು ವಿಶೇಷ ಪ್ರಕರಣದ ಸಂಖ್ಯೆ: 70/2007 ರಲ್ಲಿ ವಿಚಾರಣೆ ಕೈಗೊಂಡ ಬಳಿಕ ಆರೋಪಿ (1) ಶ್ರೀ ಸಂಪತ್‌ರಾವ್ ಎಸ್. ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿರವರಿಗೆ ದಿನಾಂಕ: 02–12–2011 ರಂದು ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಒಂದು ವರ್ಷ ಕಠಿಣ ಸೆರೆಮನೆ ಶಿಕ್ಷೆ ಮತ್ತು ರೂ.15,000/– ದಂಡ, ದಂಡ ಕಟ್ಟಲು ತಪ್ಪಿದಲ್ಲಿ ಮೂರು ತಿಂಗಳ ಸಾದಾ ಸೆರೆಮನೆ ಶಿಕ್ಷೆ ಅನುಭವಿಸುವಂತೆ ಘನ ಜಿಲ್ಲಾ ನ್ಯಾಯಾಲಯವು ಆರೋಪಿ ಅಧಿಕಾರಿಗೆ ಶಿಕ್ಷೆ ವಿಧಿಸಿ ತೀರ್ಪು ನೀಡಿ ಆದೇಶಿಸಿದೆ.

ವಿಶೇಷ ಜಿಲ್ಲಾ ನ್ಯಾಯಾಧೀಶರು, ಮೈಸೂರು, ಇವರು ಸದರಿ ಅಧಿಕಾರಿಯವರಿಗೆ ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ, ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಕ್ರಮ ಕೈಗೊಳ್ಳುವಂತೆ ಕೋರಿದ್ದರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಭಾರತ ಸರ್ವೋಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಷನ್ ಸಂಖ್ಯೆ: 770/2011 (ಎಸ್.ಎಲ್.ಪಿ) ಅಪರಾಧ ಸಂಖ್ಯೆ: 2202/2001 ದಿನಾಂಕ: 02–08–2011ರ ತೀರ್ಪಿನಲ್ಲಿ ಹೇಳಿರುವಂತೆ ಯಾವುದೇ ನೋಟೀಸನ್ನು ನೀಡದೇ ನೇಮಕಾತಿಯನ್ನು ರದ್ದುಮಾಡತಕ್ಕದ್ದು ಮತ್ತು ಯಾವುದೇ ಹುದ್ದೆಯಲ್ಲಿ ಮುಂದುವರೆಸತಕ್ಕದ್ದಲ್ಲ ಎಂದು ತಿಳಿಸಲಾಗಿದೆ. ಅದನ್ನು ಗಮನಿಸಿ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಸದರಿ ಅಧಿಕಾರಿಯನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಸರ್ಕಾರವು ತೀರ್ಮಾನಿಸಿದ್ದು, ಅದರಂತೆ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 12 ವಾತೆತ 2007 ಬೆಂಗಳೂರು, ದಿನಾಂಕ: 16-03-2012**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಸಂಪತ್‌ರಾವ್ ಎಸ್. ಬೊಮ್ಮಣ್ಣನವರ್, ವಾಣಿಜ್ಯ ತೆರಿಗೆ ಅಧಿಕಾರಿ, ವಾಣಿಜ್ಯ ತೆರಿಗೆ ಇಲಾಖೆ, ಇವರನ್ನು ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

ಪಿ.ಆರ್. 998

## ಕಂದಾಯ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆಯ ಜಗಳೂರು ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 50 ಮುಸರ 2008, ದಿನಾಂಕ: 25-02-2009.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 50 ಮುಸರ 2008(ಭಾ), ದಿನಾಂಕ: 25-11-2010

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ದಾವಣಗೆರೆ ಜಿಲ್ಲೆಯ ಜಗಳೂರು ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರಿಂದ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಜಗಳೂರು ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ದಾವಣಗೆರೆ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಜಗಳೂರು ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ಪ್ರತ್ಯೇಕವಾಗಿ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು. ನಂತರ, ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಈ ಕೆಳಕಂಡ ನಾಲ್ಕು ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲಾಗಿತ್ತು.

| | | |
|---|---|---|
| 1 | ಶ್ರೀ ಜಿ.ಕೆ. ಮಂಜುನಾಥ ಬಿನ್ ಕಲ್ಲೇಗೌಡ, ಬಿದರಕೆರೆ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ. (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಸುಮಿತ್ರ ಕೋಂ ಬಸವರಾಜ, ಪಲ್ಲಾಗಟ್ಟೆ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ (ಮಹಿಳೆ) | ಸದಸ್ಯರು |
| 3 | ಶ್ರೀ ಎ.ಕೆ. ದೇವೇಂದ್ರಪ್ಪ ಬಿನ್ ಮಾರಪ್ಪ, ಮಲ್ಲೇಮಾಚಿಕೆರೆ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ. (ಪ.ಜಾತಿ) | ಸದಸ್ಯರು |
| 4 | ಶ್ರೀ ಕೃಷ್ಣಪ್ಪ ಬಿನ್ ಭರ್ಮಪ್ಪ, ಬೈರನಾಯ್ಕನಹಳ್ಳಿ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ (ಪ.ಪಂಗಡ) | ಸದಸ್ಯ |

ಈ ಹಿನ್ನಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 11 ಮುಸರ 2011 ಬೆಂಗಳೂರು, ದಿನಾಂಕ: 07ನೇ ಮಾರ್ಚ್ 2012**

ದಾವಣಗೆರೆ ಜಿಲ್ಲೆಯ ಜಗಳೂರು ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ ಕಂಇ 50 ಮುಸರ 2008(ಭಾ) ದಿನಾಂಕ: 25-11-2010ನ್ನು ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಮಹೇಶ್ವರಪ್ಪ ಬಿನ್ ವೀರಭದ್ರಪ್ಪ, ರಸ್ತೆಮಾಕುಂಟೆ, ಜಗಳೂರು ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಸುಮಿತ್ರಾ ಜಿ (ಪ್ರಭಾವತಿ) ಬಿನ್ ಗೋವಿಂದನಾಯ್ಕ, ಸುಮನ್ ಕಂಪ್ಯೂಟರ್ಸ್, ಜಗಳೂರು. | ಮಹಿಳೆ |

| | | |
|---|---|---|
| 3 | ಶ್ರೀ ಎಸ್. ನಾಗೇಶ್ ಬಿನ್ ಶಂಕ್ರನಾಯ್ಕ, ಬ್ಯಾಟಗಾರನಹಳ್ಳಿ, ಜಗಳೂರು ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಎಸ್.ಟಿ. ದೇವರಾಜ್, ಸಿದ್ದಯ್ಯನಕುಂಟೆ ಗ್ರಾಮ, ಜಗಳೂರು ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 999 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 87 ಮುಸರ 2009, ದಿನಾಂಕ: 25–02–2009.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಚಿತ್ತಾಪುರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಚಿತ್ತಾಪುರ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಚಿತ್ತಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾವುದೆಂದು ನಮೂದಿಸಲಾಗಿತ್ತು.

ಆ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಮುಸರ 2011 ಬೆಂಗಳೂರು, ದಿನಾಂಕ: 06ನೇ ಮಾರ್ಚ್ 2012**

ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಭೀಮರಾಯಗೌಡ ಬಿನ್ ಗುರಣ್ಣಗೌಡ, ವಸಂತನಗರ, ಸರಕಾರಿ ಮುದ್ರಣಾಲಯ, ಎಂ.ಎಸ್.ಕೆ.ಮಿಲ್, ರೋಡ, ಗುಲ್ಬರ್ಗಾ | ಸಾಮಾನ್ಯ |
| 2 | ಶ್ರೀಮತಿ ಸ್ವಾತಿ ಕೋಂ ಶಶಿಕಾಂತ ಸ್ವಾಮಿ, ಸರಕಾರಿ ಸಾರ್ವಜನಿಕ ಆಸ್ಪತ್ರೆ ಎದುರುಗಡೆ, ಚಿತ್ತಾಪೂರ | ಮಹಿಳೆ |
| 3 | ಶ್ರೀ ಶಾಂತಕುಮಾರ ಮಲಖೇಡ, ಬಾಬು ಜಗಜೀವನರಾಮ ನಗರ, ಚಿತ್ತಾಪೂರ. | ಪರಿಶಿಷ್ಟ ಜಾತಿ |
| 4 | ಶ್ರೀ ಹಣಮಂತ ಬಿನ್ ಸಾಯಬಣ್ಣಾ ನಾಯಿಕೋಡಿ, ಸೂಲಹಳ್ಳಿ, | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1000 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆಯ ಪಾವಗಡ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** **1.** ಸರ್ಕಾರದ ಆದೇಶ ಸಂಖ್ಯೆ: ಕಂಇ 130 ಮುಸರ 2008, ದಿನಾಂಕ: 25-02-2009.

**2.** ಸರ್ಕಾರದ ಆದೇಶ ಸಂಖ್ಯೆ: ಕಂಇ 130 ಮುಸರ 2008, ದಿನಾಂಕ: 23-06-2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ತುಮಕೂರು ಜಿಲ್ಲೆಯ ಪಾವಗಡ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರಿಂದ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಪಾವಗಡ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ತುಮಕೂರು ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಪಾವಗಡ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು. ನಂತರ, ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಈ ಕೆಳಕಂಡ ನಾಲ್ಕು ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲಾಗಿತ್ತು.

| | | |
|---|---|---|
| 1 | ಶ್ರೀ ಸೂರ್ಯನಾರಾಯಣ ಶಾಸ್ತ್ರಿ ಬಿನ್ ನರಸಿಂಹ ಶಾಸ್ತ್ರಿ, ಕನ್ನಮೇಡಿ, ಪಾವಗಡ. (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ತಮ್ಮಕ್ಕ ಕೋಂ ರಂಗಪ್ಪ, ಬ್ಯಾಡನೂರು, ಪಾವಗಡ ತಾಲ್ಲೂಕು. (ಮಹಿಳೆ) | ಸದಸ್ಯರು |
| 3 | ಶ್ರೀ ಛತ್ರುನಾಯ್ಕ ಬಿನ್ ಸೂರ್ಯನಾಯ್ಕ ವೀರಮ್ಮನಹಳ್ಳಿ, ಪಳವಳ್ಳಿ, ಪಾವಗಡ. (ಪ.ಜಾತಿ) | ಸದಸ್ಯರು |
| 4 | ಶ್ರೀ ಬಿ.ಓ. ಪಾಲಯ್ಯ ಬಿನ್ ಓಬಳಯ್ಯ, ಬೆಳ್ಳಿಭಟ್ಲು, ಪಾವಗಡ. (ಪ.ಪಂಗಡ) | ಸದಸ್ಯರು |

ಆ ಹಿನ್ನಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 24 ಮುಸರ 2012, ಬೆಂಗಳೂರು, ದಿನಾಂಕ: 06ನೇ ಮಾರ್ಚ್ 2012**

ತುಮಕೂರು ಜಿಲ್ಲೆಯ ಪಾವಗಡ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ: ಕಂಇ 130 ಮುಸರ 2008 ದಿನಾಂಕ: 23-06-2009ರಲ್ಲಿ ಅಧಿಕಾರೇತರರ ನೇಮಕಾತಿ ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಪೆದನ್ನ ಬಿನ್ ನಾಗಯ್ಯ, ರ್‍ಯಾಪ್ಟೆ, ಹುಸೇನ್‌ಪುರ ಅಂಚೆ, ಪಾವಗಡ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಸಾವಿತ್ರಮ್ಮ ಕೋಂ ಮಲ್ಲೇಶಮೂರ್ತಿ, ಕನ್ನಮೇಡಿ ಅಂಚೆ, ಪಾವಗಡ ತಾಲ್ಲೂಕು | ಮಹಿಳೆ |
| 3 | ಶ್ರೀ ದಾಸಣ್ಣ ಬಿನ್ ಈರಪ್ಪ, ಪೊನ್ನಸಮುದ್ರ, ಪಾವಗಡ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಸ್ವಾರಣ್ಣ ಬಿನ್ ದೊಡ್ಡಚಿಕ್ಕನಾಯಕ, ಕರೆಕ್ಯಾತನಹಳ್ಳಿ, ಮದ್ದೆ ಅಂಚೆ, ಪಾವಗಡ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1001 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆಯ ಮಾಗಡಿ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 58 ಮುಸರ 2009, ದಿನಾಂಕ: 25-02-2009.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ರಾಮನಗರ ಜಿಲ್ಲೆಯ ಮಾಗಡಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಮಾಗಡಿ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಮನಗರ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಮಾಗಡಿ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 17 ಮುಸರ 2011, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2012**

ರಾಮನಗರ ಜಿಲ್ಲೆಯ ಮಾಗಡಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಶೇಷಪ್ಪ ಬಿನ್ ಲೇ ಪುಟ್ಟರಂಗಯ್ಯ, ಕೆ.ಇ.ಬಿ. ಎದುರು, ಮುಖ್ಯರಸ್ತೆ, ಕುದೂರು | ಸಾಮಾನ್ಯ |
| 2 | ಶ್ರೀಮತಿ ಗೀತಾ ಕೋಂ ಆನಂದ್, ನಾರಸಿಂಹ ಸರ್ಕಲ್, ಮಾಗಡಿ ಟೌನ್, ಮಾಗಡಿ | ಮಹಿಳೆ |
| 3 | ಶ್ರೀ ನಾರಾಯಣಪ್ಪ ಬಿನ್ ಲೇ ರಂಗಯ್ಯ, ಗಂಗಾಧರಯ್ಯನ ನಗರ, ಬಾಣವಾಡಿ ಪೋಸ್ಟ್, ಸೋಲೂರು ಹೋಬಳಿ | ಪರಿಶಿಷ್ಟ ಜಾತಿ |
| 4 | ಶ್ರೀ ಅಂಜಿನಪ್ಪ ಬಿನ್ ಗಾಳಿಯಪ್ಪ, ಬ್ಯಾಲಕೆರೆ ಗ್ರಾಮ & ಅಂಚೆ, ಕಸಬಾ ಹೋಬಳಿ, ಮಾಗಡಿ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1002 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 58 ಮುಸರ 2009, ದಿನಾಂಕ: 25-02-2009.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಕೂಡ್ಲಿಗಿ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬಳ್ಳಾರಿ ಜಿಲ್ಲೆ | ಸದಸ್ಯರು |

| | | |
|---|---|---|
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಕೂಡ್ಲಿಗಿ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 11 ಮುಸರ 2012, ಬೆಂಗಳೂರು, ದಿನಾಂಕ: 07ನೇ ಮಾರ್ಚ್ 2012**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಕೆ.ಎನ್ ಭೀಮಪ್ಪ ಬಿನ್ ಕೆ. ಗುಂಡಪ್ಪ, ಖಾನಾಹೊಸಹಳ್ಳಿ, ಕೂಡ್ಲಿಗಿ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಬಿ.ಕೆ. ಜಯಮ್ಮ ತಂದೆ ಬಿ. ಮಾರೆಪ್ಪ, 13ನೇ ವಾರ್ಡ್, ರಾಮನಗರ, ಕೂಡ್ಲಿಗಿ | ಮಹಿಳೆ |
| 3 | ಶ್ರೀ ಜಿ. ಅಂಜನಪ್ಪ ಬಿನ್ ಜಿ. ಈರಪ್ಪ, ಸಿದ್ದಾಪುರವಡ್ಡರಹಟ್ಟಿ, ಸಿದ್ದಾಪುರ ಪೋಸ್ಟ್, ಕೂಡ್ಲಿಗಿ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಎ. ಕೊಟ್ರೇಶ್ ಬಿನ್ ಲೇಟ್ ಎ. ಕಾಡಪ್ಪ, ಮೊರಬ ಗ್ರಾಮ, ಕೂಡ್ಲಿಗಿ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 1003

## ಕಂದಾಯ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ–2 ರವರ ಟಿಪ್ಪಣಿ ಸಂಖ್ಯೆ: ಮುಮಕಾ/1464/2012, ದಿನಾಂಕ: 06–03–2012

**ಪ್ರಸ್ತಾವನೆ:**

ಮೇಲೆ ಓದಲಾದ ಮಾನ್ಯ ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿ–2ರವರ ಟಿಪ್ಪಣಿಯಲ್ಲಿ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕಿನ ನಂದಿಕೇಶ್ವರ, ಬಿ.ಎನ್. ಜಾಲಿಹಾಳ, ಚೋಳಚಗುಡ್ಡ, ನೆಲವಗಿ ಹಾಗೂ ಹುನಗುಂದ ತಾಲ್ಲೂಕಿನ ಹಿರೇಮಾಗಿ ಮತ್ತು ಕಮತಗಿ ಗ್ರಾಮಗಳಲ್ಲಿ ಕ್ರೆಡೈ, ಬೆಂಗಳೂರು ಸಂಸ್ಥೆಯವರು ನಿರ್ಮಿಸದೇ ಬಿಟ್ಟಿರುವ 986 ಆಸರೆ ಮನೆಗಳನ್ನು ಸರ್ಕಾರೀ ಸಂಸ್ಥೆಗಳ ಮೂಲಕ ನಿರ್ಮಿಸಿ ಪೂರ್ಣಗೊಳಿಸುವ ಸಲುವಾಗಿ ಅವಶ್ಯವಿರುವ ರೂ.12,59,40,000/–ಗಳ ಅನುದಾನವನ್ನು ಬಾಗಲಕೋಟೆ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಮಾನ್ಯ ಮುಖ್ಯಮಂತ್ರಿಯವರು ಅನುಮೋದನೆ ನೀಡಿದ್ದು, ಅದರಂತೆ, ಅನುದಾನ ಬಿಡುಗಡೆ ಮಾಡಲು ಕೋರಿರುತ್ತಾರೆ.

ಈ ಹಿನ್ನಲೆಯಲ್ಲಿ, ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 174 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕಿನ ನಂದಿಕೇಶ್ವರ, ಬಿ.ಎನ್ ಜಾಲಿಹಾಳ, ಚೋಳಚಗುಡ್ಡ, ನೆಲವಗಿ ಹಾಗೂ ಹುನಗುಂದ ತಾಲ್ಲೂಕಿನ ಹಿರೇಮಾಗಿ ಮತ್ತು ಕಮತಗಿ ಗ್ರಾಮಗಳಲ್ಲಿ ಕ್ರೆಡೈ, ಬೆಂಗಳೂರು ಸಂಸ್ಥೆಯವರು ನಿರ್ಮಿಸದೇ ಬಿಟ್ಟಿರುವ 986 ಆಸರೆ ಮನೆಗಳನ್ನು ಸರ್ಕಾರೀ ಸಂಸ್ಥೆಗಳ ಮೂಲಕ ನಿರ್ಮಿಸಿ ಪೂರ್ಣಗೊಳಿಸುವ ಸಲುವಾಗಿ ಅವಶ್ಯವಿರುವ ರೂ.12,59,40,000/– (ರೂಪಾಯಿ ಹನ್ನೆರೆಡು ಕೋಟಿ ಐವತ್ತೊಂಬತ್ತು ಲಕ್ಷ ನಲವತ್ತು ಸಾವಿರ ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಿಸಿದ ಲೆಕ್ಕ ಶೀರ್ಷಿಕೆ 8235–00–111–0–02 “Public Contributions to Calamity Relief” ಅಡಿಯಲ್ಲಿ ಡ್ರಾ ಮಾಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರು ಪೇಯೀಸ್ ರಸೀದಿ ಬಿಲ್ಲು (ಸಿಟಿಎಸ್–8) ತಯಾರಿಸಿ ಮೇಲು ರುಜು ಮಾಡಿ ಬಾಗಲಕೋಟೆ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿಕೊಳ್ಳಲು ಆದೇಶಿಸಿದೆ. ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿಯೇ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.

ಅನುದಾನ ವೆಚ್ಚ ಮಾಡಿದ್ದಕ್ಕೆ, ಸಂಬಂಧಪಟ್ಟ ಅಧಿಕಾರಿಗಳು ಹಣಬಳಕೆ ಪ್ರಮಾಣ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸುವುದು. ಹಾಗೂ ಕಾಮಗಾರಿಗಳ ಬಗ್ಗೆ ಭೌತಿಕ ಹಾಗೂ ಆರ್ಥಿಕ ಪ್ರಗತಿಯನ್ನು ಸಹ ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂ: ಮುಮಕಾ/1464/2012, ದಿನಾಂಕ: 06–03–2012 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಎಂ. ಆನಂದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1004 ಕಂದಾಯ ಇಲಾಖೆ (ವಿ.ನಿ & ಸೇವೆಗಳು-2)

## ಒಳಾಡಳಿತ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಒಇ 65 ಪೊಸಇ 2012, ಬೆಂಗಳೂರು ದಿನಾಂಕ : 14-03-2012**

ವಿಷಯ : ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ಉಪ ನಿಯಮ 5 ರ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಪೊಲೀಸ್ ಸಿಬ್ಬಂದಿ/ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965 ರಲ್ಲಿ ಅವಕಾಶ ಕಲ್ಪಿಸಲಾಗಿದ್ದು, ಸದರಿ ನಿಯಮಾವಳಿಗಳ ನಿಯಮ 6(5) ಕೆಳಕಂಡಂತಿದೆ :

"(5) The Disciplinary Authority or the specially empowered authority, as the case may be may nominate any police officer to present the case in support of the charges before the authority inquiring into the charges (hereinafter referred to as the Inquiring Authority). The police officer may present his case with the assistance of any other police officer or retired police officer approved by the Disciplinary Authority (or specially empowered authority, as the case may be), but may not engage a Legal Practitioner for the purpose unless the Disciplinary Authority (or specially empowered authority, as the case may be), having regard to the circumstances of the case, so permits.

Provided that if the retired Police Officer is also a legal practitioner, the Police Officer shall not engage such person unless the Presenting Officer appointed by the Disciplinary Authority is a legal practitioner or the Disciplinary Authority or specially empowered authority, as the case may be, having regard to the circumstances of the case, so permits."

Further rule 14 is as under :

"14. Appearance of Legal Practioners – Save as otherwise provided in these rules, no legal practitioner or agent shall be allowed to appear in any proceeding under these rules".

ಮೇಲ್ಕಂಡ ನಿಯಮಾವಳಿಗಳ ಅನ್ವಯ ಆರೋಪಿತ ಪೊಲೀಸ್ ಅಧಿಕಾರಿಯು ತನ್ನ ರಕ್ಷಣೆಗೆ ಪೊಲೀಸ್ ಅಧಿಕಾರಿ ಅಥವಾ ನಿವೃತ್ತ ಪೊಲೀಸ್ ಅಧಿಕಾರಿಯನ್ನು ವಿಚಾರಣಾಧಿಕಾರಿಗಳ ಅನುಮತಿಯೊಂದಿಗೆ ಪಡೆದುಕೊಳ್ಳಬಹುದಾಗಿದೆ. ಮನವಿಯಲ್ಲಿ ನಮೂದಿಸಿರುವಂತೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965 ರ ನಿಯಮಾವಳಿಗಳಲ್ಲಿ ಪೊಲೀಸ್ ಅಧಿಕಾರಿ ಅಥವಾ ನಿವೃತ್ತ ಪೊಲೀಸ್ ಅಧಿಕಾರಿಯಲ್ಲದೆ, ಇತರೆ ನಿವೃತ್ತ ಅಧಿಕಾರಿಗಳನ್ನಾಗಲಿ ಅಥವಾ ನ್ಯಾಯವಾದಿಗಳನ್ನಾಗಲೀ ಪಡೆದುಕೊಳ್ಳಲು ಅವಕಾಶವಿರುವುದಿಲ್ಲ. ಈ ಅಂಶವನ್ನು ಎಲ್ಲಾ ವಿಚಾರಣಾಧಿಕಾರಿಗಳು, ಎಲ್ಲಾ ಶಿಸ್ತು ಪ್ರಾಧಿಕಾರಿಗಳು ಮತ್ತು ಮೇಲ್ಮನವಿ ಪ್ರಾಧಿಕಾರಿಗಳು ಗಮನಿಸಲು ಸೂಚಿಸಿದೆ.

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್.1005 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸೇರ್ಪಡೆ ಆದೇಶ

**ಸಂಖ್ಯೆ : ಸಿಆಸುಇ 19 ಸಅಸೇ 2010, ಬೆಂಗಳೂರು ದಿನಾಂಕ : 24-03-2012**

ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 19 ಸೇಇವಿ 2010 ರ ಆದೇಶದ ದಿನಾಂಕವನ್ನು 04-11-2011 ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಪಿ.ಆರ್.1006 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು)-3

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ : ರಾಜ್ಯದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ವಿಧೇಯಕ 2011ನ್ನು ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ ಸಮನ್ವಯ ಸಮಿತಿ ರಚಿಸುವ ಬಗ್ಗೆ.

ಓದಲಾಗಿದೆ : **1.** ಅಧಿಸೂಚನೆ ಸಂಖ್ಯೆ : ಸಂವ್ಯಶಾಇ 39 ಶಾಸನ 2011, ದಿನಾಂಕ : 02-01-2012.

2. ಅಧಿಸೂಚನೆ ಸಂಖ್ಯೆ : ಸಿಆಸುಇ 04 ಇಕಾಅ 2012, ದಿನಾಂಕ : 14-02-2012.

3. ಅಧಿಸೂಚನೆ ಸಂಖ್ಯೆ : ಸಿಆಸುಇ 28 ಇಕಾಅ 2012, ದಿನಾಂಕ : 27–02–2012.

4. ಅಧಿಸೂಚನೆ ಸಂಖ್ಯೆ : ಸಿಆಸುಇ 04 ಇಕಾಅ 2012, ದಿನಾಂಕ : 01–03–2012.

5. ಆದೇಶ ಸಂಖ್ಯೆ : ಸಿಆಸುಇ 20 ಇಕಾಅ 2012 ದಿನಾಂಕ : 06–03–2012.

**ಪ್ರಸ್ತಾವನೆ :**

11 ಇಲಾಖೆಗಳ ಮುಖಾಂತರ 151 ಕಾಲಮಿತಿ ಸೇವೆಯನ್ನು ನಾಗರೀಕರಿಗೆ ಒದಗಿಸಲು ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 ವನ್ನು ರಾಜ್ಯ ಶಾಸನ ಸಭೆಯು ಸರ್ವಾನುಮತದಿಂದ ಅಂಗೀಕರಿಸಿತು. ಸಾರ್ವಜನಿಕರಿಗೆ ಸರ್ಕಾರಿ ಅಧಿಕಾರಿಗಳ ಹೊಣೆಗಾರಿಕೆಯನ್ನು ಖಾತರಿಪಡಿಸುವ ಮೂಲಕ ಸುಧಾರಿತ ಸೇವೆಯನ್ನು ನೀಡುವುದು ಈ ಅಧಿನಿಯಮದ ಮುಖ್ಯ ಉದ್ದೇಶ್ಯವಾಗಿದೆ. ಇದು ಆಡಳಿತದಲ್ಲಿ ಹೆಚ್ಚಿನ ಪಾರದರ್ಶಕತೆ ಹಾಗೂ ದಕ್ಷತೆಯನ್ನು ತರುವುದಲ್ಲದೇ ದೊಡ್ಡ ಪ್ರಮಾಣದಲ್ಲಿ ಸಾರ್ವಜನಿಕ ಕುಂದುಕೊರತೆ ಹಾಗೂ ಭ್ರಷ್ಟ ಪದ್ಧತಿಗಳನ್ನು ಕಡಿಮೆ ಮಾಡುತ್ತದೆ.

ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ : 02–01–2012ರ ಅದಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಮಸೂದೆಯನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಭಾಗ IV-A ಯಲ್ಲಿ ಪ್ರಕಟಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (4)ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ನಿಯಮಗಳು 2012ನ್ನು ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯ ಭಾಗ IV-A ನಲ್ಲಿ ದಿನಾಂಕ : 01–03–2012 ರಂದು ಪ್ರಕಟಿಸಿ ಜಾರಿಗೊಳಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3)ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು ಪೈಲೆಟ್ ಲಾಂಚ್ ಮಾಡಿದ ಧಾರವಾಡ ಜಿಲ್ಲೆಯ ಧಾರವಾಡ ತಾಲ್ಲೂಕು, ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕು, ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹಾಯಕ ಕಂದಾಯ ಅಧಿಕಾರಿಗಳ ಕಛೇರಿ, ಬೆಂಗಳೂರು ಇವುಗಳಿಗೆ ಸಂಬಂಧಿಸಿದಂತೆ ರಂದು ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ 2011ನ್ನು ದಿನಾಂಕ : 01–03–2012 ರಿಂದ ಜಾರಿಗೆ ತರಲಾಗಿದೆ.

ಈ ಕಾಯಿದೆಯನ್ನು ಸದ್ಯದಲ್ಲೇ ರಾಜ್ಯಾದ್ಯಂತ ಇಲ್ಲಾ ಜಿಲ್ಲೆಗಳಲ್ಲಿಯೂ ಜಾರಿ ಮಾಡಲು ಉದ್ದೇಶಿಸಲಾಗಿದೆ.

11 ಇಲಾಖೆಗಳ ವ್ಯಾಪ್ತಿಗೆ ಬರುವ ಸೇವೆಗಳನ್ನು ಕಾಲಮಿತಿಯೊಳಗೆ ರಾಜ್ಯ ನಾಗರೀಕರಿಗೆ ಸಕಾಲದಲ್ಲಿ ಒದಗಿಸಲು ಜಿಲ್ಲಾ ಮಟ್ಟದಲ್ಲಿ ಎಲ್ಲಾ 11 ಇಲಾಖೆಗಳೊಂದಿಗೆ ಸಮನ್ವಯ, ಉಸ್ತುವಾರಿ ಮತ್ತು ಪರಿಶೀಲನೆಯನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ ಸಮನ್ವಯ ಸಮಿತಿಯನ್ನು ರಚಿಸಲು ಉದ್ಧೇಶಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 66 ಇಕಾಅ 2012, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2012**

ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011 ರ ಅನುಸೂಚಿಯಲ್ಲಿ ವಿವರಿಸಿರುವ 11 ಇಲಾಖೆಗಳ ವ್ಯಾಪ್ತಿಗೆ ಬರುವ ಅಧಿಸೂಚಿತ ಸೇವೆಗಳನ್ನು ಕಾಲಮಿತಿಯೊಳಗೆ ನಾಗರೀಕರಿಗೆ ಒದಗಿಸಲು ಜಿಲ್ಲಾ ಮಟ್ಟ ಎಲ್ಲಾ 11 ಇಲಾಖೆಗಳೊಂದಿಗೆ ಸಮನ್ವಯ, ಉಸ್ತುವಾರಿ ಮತ್ತು ಪರಿಶೀಲನೆಯನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೆಳಕಂಡಂತೆ ಜಿಲ್ಲಾ ಮಟ್ಟದ ಕರ್ನಾಟಕ ನಾಗರೀಕ ಸೇವೆಗಳ ಖಾತರಿ ಅಧಿನಿಯಮ ಸಮನ್ವಯ ಸಮಿತಿಯನ್ನು ರಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| | | | |
|---|---|---|---|
| 1. | ಜಿಲ್ಲೆಯ ಜಿಲ್ಲಾಧಿಕಾರಿಗಳು | ... | ಅಧ್ಯಕ್ಷರು |
| 2. | ಜಿಲ್ಲೆಯ ಪೊಲೀಸ್ ವರಿಷ್ಠಾಧಿಕಾರಿಗಳು | ... | ಸದಸ್ಯರು |
| 3. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | ... | ಸದಸ್ಯರು |
| 4. | ಜಿಲ್ಲೆಯ ಮುನಿಸಿಪಲ್ ಕಮೀಷನರ್ | ... | ಸದಸ್ಯರು |
| 5. | ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು | ... | ಸದಸ್ಯರು |
| 6. | ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು | ... | ಸದಸ್ಯರು |
| 7. | ಪದವಿಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು | ... | ಸದಸ್ಯರು |
| 8. | ಜಿಲ್ಲಾ ವೈದ್ಯಾಧಿಕಾರಿಗಳು | ... | ಸದಸ್ಯರು |
| 9. | ಎಲ್ಲಾ ಅಸಿಸ್ಟೆಂಟ್ ಕಮೀಷನರುಗಳು | ... | ಸದಸ್ಯರು |
| 10. | ಜಿಲ್ಲೆಯ ಆಹಾರ ಮತ್ತು ನಾಗರೀಕ ಸರಗರಾಜು ಇಲಾಖೆಯ ಉಪ ನಿರ್ದೇಶಕರು | ... | ಸದಸ್ಯರು |
| 11. | ಜಿಲ್ಲೆಯಲ್ಲಿನ ವಾಣಿಜ್ಯ ತೆರಿಗೆ ಇಲಾಖೆಯ ಉಪ ಅಯುಕ್ತರು | ... | ಸದಸ್ಯರು |
| 12. | ಜಿಲ್ಲೆಯ ಸಹಾಯಕ ಕಾರ್ಮಿಕ ಅಧಿಕಾರಿ | ... | ಸದಸ್ಯರು |
| 13. | ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರು | ... | ಸದಸ್ಯರು |
| 14. | ಜಿಲ್ಲಾ ವ್ಯಸ್ಥಾಪಕರು, ರಾಷ್ಟ್ರೀಯ ಮಾಹಿತಿ ಕೇಂದ್ರ | ... | ಸದಸ್ಯರು |
| 15. | ಜಿಲ್ಲೆಯ ವಾರ್ತಾ ಮತ್ತು ಪ್ರಚಾರ ಇಲಾಖೆಯ ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು | ... | ಸದಸ್ಯರು |
| 16. | ಜಿಲ್ಲಾ ಮಟ್ಟದ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರು | ... | ಸದಸ್ಯರು |
| 17. | ಜಿಲ್ಲೆಯ ಅಪರ ಜಿಲ್ಲಾಧಿಕಾರಿಗಳು | ... | ಸದಸ್ಯ |
| 18. | ಜಿಲ್ಲಾ ಎನ್ಐಸಿ ಜಿಲ್ಲಾ ಮಾಹಿತಿ ಅಧಿಕಾರಿ (ಡಿಐಒ) | ... | ಸಲಹೆಗಾರರು |

ಸಮಿತಿಯು ಕೆಳಕಂಡ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಕೆಳಕಂಡ ಅಂಶಗಳ ಬಗ್ಗೆ ಪರಿಶೀಲನೆ, ಉಸ್ತುವಾರಿ ಮತ್ತು ಮೇಲ್ವಿಚಾರಣೆ ಮಾಡುವುದು :

1. ಒಟ್ಟಾರೆಯಾಗಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದ ಬಗ್ಗೆ ಅಧಿಕಾರಿ/ಸಿಬ್ಬಂದಿ ಮತ್ತು ನಾಗರೀಕರಲ್ಲಿ ಸಮಯಪ್ರಜ್ಞೆ ಮತ್ತು ಒಲವು ಮೂಡಿಸಲು ಪ್ರಯತ್ನಿಸುವುದು.
2. ಅಧಿಕೃತ ಅರ್ಜಿ ನಮೂನೆಗಳನ್ನು ಪ್ರಕಟಿಸಿ ಕಛೇರಿಯಲ್ಲಿ ಅಥವಾ ಸಹಾಯ ಕೇಂದ್ರಗಳ ಮೂಲಕ ವಿತರಿಸಲಾಗುತ್ತಿದೆಯೇ ಹಾಗೂ ಯಾವುದೇ ಕಾರಣಕ್ಕೂ ಮಧ್ಯವರ್ತಿಗಳು ಪ್ರವೇಶಿಸಿ ನಾಗರಿಕರಿಗೆ ಶೋಷಣೆ ಮಾಡದಂತೆ ನೋಡಿಕೊಳ್ಳತಕ್ಕದ್ದು.
3. ಸೇವೆಗಳನ್ನು ಸಮಯಬದ್ಧವಾಗಿ ನೀಡುವುದು ಮೇಲಿನ ಹಂತದಿಂದ ಕೆಳಗಿನ ಹಂತದವರೆಗಿನ ಎಲ್ಲಾ ಅಧಿಕಾರಿಗಳ ಜವಾಬ್ದಾರಿಯಾಗಿದ್ದು ಖಚಿತಪಡಿಸಿಕೊಳ್ಳುವುದು.
4. ನಿಗದಿತ ಸಮಯದಲ್ಲಿ ಸೇವೆಗಳನ್ನು ಒದಗಿಸಲು ಕಷ್ಟವೆಂದು ಕಂಡುಬಂದರೆ, ಆ ಸಮಸ್ಯೆಗೆ ಕಾರಣಗಳನ್ನು ಕಂಡುಹಿಡಿದು ಇನ್ನು ಮುಂದೆ ಆ ರೀತಿ ಆಗದಂತೆ ನೋಡಿಕೊಳ್ಳುವುದು.
5. ಪ್ರತಿ ತಿಂಗಳೂ ಯಾವ ಸೇವೆಯಲ್ಲಿ ವಿಳಂಬ/ವಿಫಲತೆ ಆಗಿದ್ದರೆ, ಅದರ ಬಗ್ಗೆ ಪರಿಶೀಲಿಸಿ ಸುಧಾರಣಾ ಕ್ರಮವನ್ನು ತೆಗೆದುಕೊಂಡು, ಈ ಬಗ್ಗೆ ಸಿಆಸುಇ (ಆಸು) ವಿಭಾಗಕ್ಕೆ ವರದಿಯನ್ನು ಸಲ್ಲಿಸುವುದು.
6. ಸಕ್ಷಮ ಅಧಿಕಾರಿಗಳಿಗೆ ಪ್ರತ್ಯೇಕ ಲೆಕ್ಕ ಶೀರ್ಷಿಕೆಯೊಂದಿಗೆ ರೂ. 1000/– ಇಂಪ್ರಸ್ಟ್ ಮೊತ್ತವನ್ನು ನೀಡಲಾಗುತ್ತಿದೆ. ಇದು ಸಾಲುವುದಿಲ್ಲವೆಂದು ಕಂಡುಬಂದರೆ ಈ ಬಗ್ಗೆ ಸಮರ್ಥನೆಯೊಂದಿಗೆ ಹೆಚ್ಚಿಸಲು ಪ್ರಸ್ತಾವನೆ ಮಂಡಿಸುವುದು.
7. ಸಾರ್ವಜನಿಕರಿಗೆ ಈ ಅಧಿನಿಯಮದಡಿಯಲ್ಲಿ ಸೇವೆಗಳನ್ನು ಪಡೆಯಲು ನಿರಂತರ ತಿಳುವಳಿಕೆ/ಪ್ರಚಾರ ನೀಡುವುದು.
8. ಈ ಅಧಿನಿಯಮದಡಿಯಲ್ಲಿ ಬೇಕಾಗುವ ಹೆಚ್ಚಿನ ಗಣಕಯಂತ್ರಗಳು/ಪೀಠೋಪಕರಣಗಳನ್ನು ಇಲಾಖೆಗೆ ಒದಗಿಸಿರುವ ಆಯವ್ಯಯ ಅನುದಾನದಿಂದ ಪೂರೈಸಲು ಕ್ರಮವಹಿಸಬೇಕು. ಒಂದು ಪಕ್ಷ ಒದಗಿಸಲು ಸಾಧ್ಯವಾಗದಿದ್ದಲ್ಲಿ ಗಣಕಯಂತ್ರ ಮತ್ತು ಅದರ ಪರಿಕರಗಳ ಬಗ್ಗೆ ಪ್ರಸ್ತಾವನೆಯನ್ನು ಸಿಆಸುಇ (ಇ–ಆಡಳಿತ) ರವರಿಗೆ ಕಳುಹಿಸತಕ್ಕದ್ದು.
9. ಜಿಲ್ಲೆಗೆ ಸಂಬಂಧಿಸಿದಂತೆ ಈ ಅಧಿನಿಯಮದಡಿಯಲ್ಲಿ ಆಗಿರುವ ಪ್ರಗತಿಯ ಮೌಲ್ಯಮಾಪನವನ್ನು ನಡೆಸಿ ಸರಳೀಕರಣ ಮತ್ತು ಗಣಕೀಕರಣ ಯೋಜನೆಯನ್ನು ರೂಪಿಸುವುದು. ರಾಷ್ಟ್ರೀಯ ಮಾಹಿತಿ ಕೇಂದ್ರದವರು ತಯಾರಿಸಿರುವ ಜಿ.ಎಸ್.ಸಿ ತಂತ್ರಾಂಶದ ಸದ್ಬಳಕೆಯನ್ನು ಮಾಡಿಕೊಳ್ಳುವಂತೆ ಮನನ ಮಾಡುವುದು.
10. ಇಲಾಖೆಯಲ್ಲಿ ಖಾಲಿ ಹುದ್ದೆಗಳ ಬಗ್ಗೆ ವಿಮರ್ಶಿಸಿ ಬಾಹ್ಯ ಮೂಲಕ ವಾಹನ ಚಾಲಕರು, ಗಣಕಯಂತ್ರ ಸಹಾಯಕರು ಮತ್ತು ಗ್ರೂಪ್–ಡಿ ನೌಕರರನ್ನು ಒದಗಿಸತಕ್ಕದ್ದು.
11. ಪ್ರತ್ಯೇಕವಾಗಿ ಪ್ರತಿ ಇಲಾಖೆಯ ಕಾರ್ಯಭಾರವನ್ನು ವಿಶ್ಲೇಷಿಸಿ, ಅಧಿಕ ಹುದ್ದೆಗಳ ಬಗ್ಗೆ ವಿವರಗಳನ್ನು ಸಕಾರಣಗಳೊಂದಿಗೆ ವರದಿಯನ್ನು ಸಂಬಂಧಿತ ಇಲಾಖಾ ಕಾರ್ಯದರ್ಶಿಯವರಿಗೆ ಕಳುಹಿಸುವುದು. ಅದಕ್ಕೂ ಮುಂಚೆ ಇಲಾಖೆಯೊಳಗೆ ರೀಡಿಪ್ಲಾಯಮೆಂಟ್ ಮೂಲಕ ಭರ್ತಿ ಮಾಡುವ ಬಗ್ಗೆ ಪರಿಶೀಲಿಸುವುದು.
12. ಈ ಅಧಿನಿಯಮದ ಸಂಬಂಧ ಸ್ಥಾಪಿಸಲಾಗಿರುವ ಕರೆ ಕೇಂದ್ರಗಳಲ್ಲಿ ಸ್ವೀಕೃತವಾಗಬಹುದಾದಂತಹ ನಾಗರೀಕರ ಪ್ರಶ್ನೆ, ಅವರ ಅರ್ಜಿಗಳ ಮೇಲ್ವಿಚಾರಣೆ ಬಗ್ಗೆ ಹಾಗೂ ಕರೆಕೇಂದ್ರದ ಸಿಬ್ಬಂದಿಗಳ ಕೋರಿಕೆಯ ಬಗ್ಗೆ ಜಿಲ್ಲೆಯಲ್ಲಿನ ನೋಡಲ್ ಅಧಿಕಾರಿಗಳು ಕೂಡಲೇ ಸ್ಪಂದಿಸಿ ಸರಿಯಾದ ಮಾರ್ಗದರ್ಶನ/ಮಾಹಿತಿ ನೀಡುವಂತೆ ನೋಡಿಕೊಳ್ಳತಕ್ಕದ್ದು. ಕರೆಕೇಂದ್ರದ ದೂರವಾಣಿ ಸಂಖ್ಯೆ : 44554455. ವೆಬ್ ವಿಳಾಸ : kgsc@nic.in
13. ಆಗಿಂದ್ದಾಗ್ಗೆ ಸೇವಾ ಕೇಂದ್ರಗಳಲಿಂದ ಮಾಹಿತಿ ಪಡೆದು ಉದ್ಭವಿಸಬಹುದಾದ ಸಮಸ್ಯೆಗಳ ಬಗ್ಗೆ ಚರ್ಚಿಸಿ ಪರಿಹಾರ ನೀಡುವುದು.

ಸಮಿತಿಯು ಸ್ಥಳೀಯ ಅವಶ್ಯಕತೆಗನುಗುಣವಾಗಿ ಇನ್ನಾವುದೇ ಅಧಿಕಾರಿಗಳನ್ನು ಸಮಿತಿಗೆ ಸೇರ್ಪಡೆ ಮಾಡಿಕೊಳ್ಳಬಹುದು ಹಾಗೂ ಪ್ರತಿ ಹದಿನೈದು ದಿನಗಳಿಗೊಮ್ಮೆ ಅಥವಾ ಅವಶ್ಯಕತೆಗನುಗುಣವಾಗಿ ಸಭೆ ಸೇರಿ ಅಧಿನಿಯಮದ ಉಸ್ತುವಾರಿ ಮತ್ತು ಪರಿಶೀಲನೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1007

**ಕೆ.ಜಿ. ಶಶಿಕಲಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಸು–ನಾಗರೀಕ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ : "ಅಲ್ಪಸಂಖ್ಯಾತರ ಕಲ್ಯಾಣ" ವಿಷಯವನ್ನು ಸಮಾಜಕಲ್ಯಾಣ ಇಲಾಖೆಯಿಂದ ಪ್ರತ್ಯೇಕಿಸಿ "ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆ" ಎಂಬ ಹೊಸ ಇಲಾಖೆ ಸೃಜಿಸುವ ಬಗ್ಗೆ.

ಓದಲಾಗಿದೆ : **1.** ದಿನಾಂಕ : 30–07–2004ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 61 ಸಸಿವಿ 2004.

2. ದಿನಾಂಕ : 25–08–2004ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 61 ಸಸಿವಿ 2004.

3. ದಿನಾಂಕ : 20–08–2005ರ ಅಧಿಸೂಚನೆ ಸಂಖ್ಯೆ : ಡಿಸಿಎ 8 ಎಆರ್‌ಬಿ 2003

**ಪ್ರಸ್ತಾವನೆ :**

ಅಲ್ಪಸಂಖ್ಯಾತರ ಕಲ್ಯಾಣ ಕಾರ್ಯಕ್ರಮಗಳನ್ನು ತ್ವರಿತವಾಗಿ ಜಾರಿಗೆ ತರುವ ಉದ್ದೇಶದಿಂದ ಅಲ್ಪಸಂಖ್ಯಾತರ ಕಲ್ಯಾಣ, ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ, ರಾಜ್ಯ ವಕ್ಫ್ ಮಂಡಳಿ, ಹಜ್ ಸಮಿತಿ ಮತ್ತು ಅಲ್ಪಸಂಖ್ಯಾತರ ಆಯೋಗಕ್ಕೆ ಸಂಬಂಧಿಸಿದ ವಿಷಯಗಳು ಹಾಗೂ ಇತ್ಯಾದಿ ವಿಷಯಗಳನ್ನು ಒಟ್ಟಾಗಿ ನಿರ್ವಹಿಸಲು, ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಆದೇಶದಲ್ಲಿ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಎಂಬ ಹುದ್ದೆಯನ್ನು ಸೃಜಿಸಿ, ಅವರು ಸಮಾಜ ಕಲಾಣ ಇಲಾಖೆಯಡಿ ಕಾರ್ಯನಿರ್ವಹಿಸಲು ಆದೇಶಿಸಲಾಗಿದೆ.

ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಆದೇಶದಲ್ಲಿ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇವರಿಗೆ ವಿಷಯಗಳನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ದಿನಾಂಕ : 20–08–2005ರ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು 1977ರ ಅನುಸೂಚಿ – XVI ಕ್ಕೆ ತಿದ್ದುಪಡಿ ಮಾಡಿ 'ಸಮಾಜಕಲ್ಯಾಣ ಇಲಾಖೆ' ಶೀರ್ಷಿಕೆಯಡಿ 'ಎಎ – ಅಲ್ಪಸಂಖ್ಯಾತರ ಕಲ್ಯಾಣ' ಎಂಬ ಉಪಶೀರ್ಷಿಕೆಯನ್ನು ಸೇರ್ಪಡೆ ಮಾಡಲಾಗಿದೆ. ಆದರೆ ಪ್ರತ್ಯೇಕವಾದ 'ಅಲ್ಪಸಂಖ್ಯಾತ ಕಲ್ಯಾಣ ಇಲಾಖೆ' ಎಂಬ ಸಚಿವಾಲಯ ಇಲಾಖೆಯನ್ನು ರಚಿಸಲಾಗಿರುವುದಿಲ್ಲ.

ಅಲ್ಪಸಂಖ್ಯಾತ ಕಲ್ಯಾಣ ಇಲಾಖೆಯಲ್ಲಿ ವಕ್ಫ್ ಮತ್ತು ಹಜ್ ಸಮಿತಿಗೆ ಸಂಬಂಧಿಸಿದ ವಿಷಯಗಳು 'ಅಲ್ಪಸಂಖ್ಯಾತ ಕಲ್ಯಾಣ' ಎಂಬ ವಿವರಣೆ (Definition) ಯಡಿ ಬರುವುದಿಲ್ಲ ಮತ್ತು ಮಾನ್ಯ ಸಚಿವರ ಪದನಾಮ 'ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್' ಇಲಾಖೆಯೆಂದು ಇರುವುದರಿಂದ 'ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆ' ಎಂಬ ಪ್ರತ್ಯೇಕವಾದ ಸಚಿವಾಲಯ ಇಲಾಖೆಯನ್ನು ರಚಿಸಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 76 ಸೇನಿಸಿ 2011, ಬೆಂಗಳೂರು ದಿನಾಂಕ: 26ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದ ಸಮಾಜ ಕಲ್ಯಾಣ ಇಲಾಖೆಯಲ್ಲಿನ ಅಲ್ಪಸಂಖ್ಯಾತರ ಕಲ್ಯಾಣಕ್ಕೆ ಸಂಬಂದಿಸಿದ ವಿಷಯಗಳನ್ನು ಪ್ರತ್ಯೇಕಿಸಿ, "ಅಲ್ಪ ಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಇಲಾಖೆ" ಎಂಬ ಹೊಸ ಇಲಾಖೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲಾಗಿದೆ.

ಈ ಬಗ್ಗೆ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು 1977ಕ್ಕೆ ಸೂಕ್ತವಾದ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1008

**ದೇವರಾಜು**

ಸರ್ಕಾರದ ಉಪ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ : ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಜನಸ್ಪಂದನ ಕೋಶ) ವಿಭಾಗವನ್ನು ಸಿಆಸುಇ (ಆಡಳಿತ ಸುಧಾರಣಾ) ವಿಭಾಗಕ್ಕೆ ವಿಲಿನಗೊಳಿಸುವ ಬಗ್ಗೆ.

ಓದಲಾಗಿದೆ : ದಿನಾಂಕ : 15–10–2011 ರಂದು ಸಿಆಸುಇ (ಕಾರ್ಯಾಧ್ಯಯನ) ಶಾಖೆ ಇವರು ನೀಡಿರುವ ಕಾರ್ಯಾಧ್ಯಯನ ವರದಿ

**ಪ್ರಸ್ತಾವನೆ :**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಜನಸ್ಪಂದನ) ವಿಭಾಗವನ್ನು ಸಿಆಸುಇ (ಆಡಳಿತ ಸುಧಾರಣೆ) ಯೊಂದಿಗೆ ವಿಲೀನಗೊಳಿಸಿದಲ್ಲಿ ಸಿಆಸುಇ (ಆ.ಸು) ವಿಭಾಗವನ್ನು ಬಲಪಡಿಸಿದಂತಾಗುತ್ತದೆಂದು ಹಾಗೂ ಒಂದೇ ತರಹದ ಇಲಾಖೆಗಳನ್ನು ಒಂದೂಗೂಡಿಸಿದಂತಾಗುತ್ತದೆಂದು, ಇದು 2ನೇ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸಿನ ಆಶಯವೂ ಆಗಿದ್ದು, ಕೇಂದ್ರ ಸರ್ಕಾರದಲ್ಲಿ ಸಿಬ್ಬಂದಿ, ಕುಂದುಕೊರತೆ, ಪಿಂಚಣಿ ಮತ್ತು ಆಡಳಿತ ಸುಧಾರಣೆ ಸಚಿವಾಲಯದ ಮಾದರಿಯಲ್ಲಿ ಸಮಾನಾಂತರವಾಗಿ ರಾಜ್ಯ ಸರ್ಕಾರದಲ್ಲೂ ಈ ಪದ್ಧತಿಯನ್ನು ಅಳವಡಿಸಿದಂತಾಗುವುದರಿಂದ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಯ ಪ್ರದಾನ ಕಾರ್ಯದರ್ಶಿಯವರ ಮೌಖಿಕ ಆದೇಶದ ಮೇರೆಗೆ ದಿನಾಂಕ : 14–10–2011 ರಂದು ಸಿಆಸುಇ (ಜನಸ್ಪಂದನ) ವಿಭಾಗಕ್ಕೆ ಸಿಆಸು ಇಲಾಖೆಯ ಕಾರ್ಯಾಧ್ಯಯನ ತಂಡವು ಭೇಟಿ ನಿಡಿ ಸಿಆಸುಇ (ಜನಸಪಂದನ) ವಿಭಾಗವು ನಿರ್ವಹಿಸುತ್ತಿರುವ ಕಾರ್ಯಗಳ ಬಗ್ಗೆ ಸಿಬ್ಬಂದಿ ಹಾಗೂ ಕೆಲಸದ ಒತ್ತಡ ಮುಂತಾದ ವಿಷಯಗಳ ಬಗ್ಗೆ ಕಾರ್ಯಾದ್ಯಯನ ಕೈಗೊಳ್ಳಲಾಗಿರುತ್ತದೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಜನಸ್ಪಂದನ ಕೋಶ) ದಲ್ಲಿ ಒಂದು ಪ್ರಧಾನ ಕಾರ್ಯದರ್ಶಿ ಹುದ್ದೆ ಖಾಲಿ ಇದ್ದು, ಅವರ ಅಧೀನದಲ್ಲಿ ಉಪ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ ಹುದ್ದೆ ಹಾಗೂ ಮೂರು ಅಧೀನ ಕಾರ್ಯದರ್ಶಿಗಳ ಹುದ್ದೆಗಳು ಮಂಜೂರಾಗಿದ್ದು, ಅವರ ನಿಯಂತ್ರಣದಲ್ಲಿ 8 ಶಾಖಾಧಿಕಾರಿಗಳ ಹುದ್ದೆಗಳು ಮಂಜೂರಾಗಿರುತ್ತದೆ. ಶಾಖಾಧಿಕಾರಿಗಳ ಅಧೀನದಲ್ಲಿ ಹಿರಿಯ ಸಹಾಯಕರು, ಸಹಾಯಕರು, ಕಿರಿಯ

ಸಹಾಯಕರು, ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರು ಕಾರ್ಯನಿರ್ವಹಿಸುತ್ತಿರುತ್ತಾರೆ. ದಿನಾಂಕ : 15–10–2011 ರಂದು ನೀಡಿರುವ ಕಾರ್ಯಾಧ್ಯಯನ ವರದಿಯಲ್ಲಿ ಈ ಕೆಳಕಂಡಂತೆ ಶಿಫಾರಸು ಮಾಡಿರುತ್ತಾರೆ.

ಸಿಆಸುಇ (ಜನಸ್ಪಂದನ) ವಿಭಾಗದಲ್ಲಿ ಸಾರ್ವಜನಿಕರಿಂದ ಸ್ವೀಕರಿಸಲ್ಪಡುವ ಕುಂದುಕೊರತೆಗಳ/ದೂರು ಅರ್ಜಿಗಳನ್ನು ಕ್ರೋಢೀಕರಿಸಿ (ಮಾಹಿತಿ ಹಕ್ಕು ಅಧಿನಿಯಮ 2005ನ್ನು ಹೊರತುಪಡಿಸಿ) ಸಂಬಂಧಪಟ್ಟ ಇಲಾಖೆಗಳಿಗೆ ಕಳುಹಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದು, ಆಡಳಿತಾತ್ಮಕ ಹಿತದೃಷ್ಟಿಯಿಂದ ಸಿಆಸುಇ (ಜನಸ್ಪಂದನ ಕೋಶ) ವಿಭಾಗವನ್ನು ಸಿಆಸು ಇಲಾಖೆ (ಆಡಳಿತ ಸುಧಾರಣೆ) ಯೊಂದಿಗೆ ವಿಲೀನಗೊಳಿಸಿದಲ್ಲಿ ಸಿಆಸುಇ (ಆ.ಸು) ವಿಭಾಗವನ್ನು ಬಲಪಡಿಸಿದಂತಾಗುವುದಲ್ಲದೆ, ಒಂದೇ ತರಹದ ಇಲಾಖೆಗಳನ್ನು ಒಂದುಗೂಡಿಸಿದಂತಾಗುತ್ತದೆ. ಇದು 2ನೇ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸಿನ ಆಶಯವೂ ಆಗಿದೆ. ಕೇಂದ್ರ ಸರ್ಕಾರದಲ್ಲಿ ಸಿಬ್ಬಂದಿ , ಕುಂದುಕೊರತೆ, ಪಿಂಚಣಿ ಮತ್ತು ಆಡಳಿತ ಸುಧಾರಣೆ ಸಚಿವಾಲಯದ ಮಾದರಿಯಲ್ಲಿ ಸಮಾನಾಂತರವಾಗಿ ರಾಜ್ಯ ಸರ್ಕಾರದಲ್ಲೂ ಈ ಪದ್ಧತಿಯನ್ನು ಅಳವಡಿಸಿದಂತಾಗುತ್ತದೆಂದು ಕಾರ್ಯಾಧ್ಯಯನ ವರದಿಯಲ್ಲಿ ಶಿಫಾರಸ್ಸು ಮಾಡಲಾಗಿರುತ್ತದೆ.

ಮೇಲ್ಕಂಡ ಶಿಫಾರಸ್ಸಿನಂತೆ ಸಿಆಸುಇ (ಜನಸ್ಪಂದನ ಕೋಶ) ವಿಭಾಗವನ್ನು ಸಿಆಸುಇ (ಆಡಳಿತ ಸುಧಾರಣೆ) ವಿಭಾಗಕ್ಕೆ ವಿಲಿನಗೊಳಿಸುವುದು ಸೂಕ್ತವಾಗಿದ್ದು, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 7 ಅಕಾಅ 2011, ಬೆಂಗಳೂರು ದಿನಾಂಕ: 22ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಸಿಆಸುಇ (ಕಾರ್ಯಾಧ್ಯಯನ) ತಂಡವು ನೀಡಿರುವ ಶಿಫಾರಸ್ಸಿನನ್ವಯ ಸಿಆಸುಇ (ಜನಸ್ಪಂದನ ಕೋಶ) ವಿಭಾಗವನ್ನು ಅಧಿಕಾರಿ/ಸಿಬ್ಬಂದಿ ಸಮೇತವಾಗಿ ಸರ್ಕಾರದ ಪ್ರಧಾನ ಕಾರ್ಯರ್ಶಿ, ಸಿಆಸುಇ (ಆಡಳಿತ ಸುಧಾರಣೆ) ವಿಭಾಗಕ್ಕೆ ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ವಿಲೀನಗೊಳಿಸಲಾಗಿದ್ದು, ಈ ಬಗ್ಗೆ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಾವಳಿ, 1977 ಕ್ಕೆ ತಿದ್ದುಪಡಿ ತರಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಪ್ರೇಮಚಂದ್ರ**

ಪಿ.ಆರ್.1009

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಕಾರ್ಯಾಧ್ಯಯನ).

## ಕಂದಾಯ ಸಚಿವಾಲಯ

ವಿಷಯ : ಶ್ರೀ ಎಂ. ಕೃಷ್ಣಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಪ್ರಸ್ತುತ ನಿವೃತ್ತ ಇವರಿಗೆ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಎಲ್ಲಾ ಸೌಲಭ್ಯಗಳನ್ನು ಒದಗಿಸುವ ಬಗ್ಗೆ.

ಓದಲಾಗಿದೆ :

1. ಸರ್ಕಾರದ ಆದೇಶ ಸಂಖ್ಯೆ : ಕಂಇ 47 ಎಡಿಇ 2000, ದಿನಾಂಕ : 27–10–2000.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 47 ಎಡಿಇ 2000, ದಿನಾಂಕ : 01–06–2002.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 56 ಎಎಸ್‌ಡಿ 2002, ದಿನಾಂಕ : 01–06–2002.
4. ಸರ್ಕಾರದ ಆದೇಶ ಸಂಖ್ಯೆ : ಕಂಇ 47 ಎಡಿಇ 2000, ದಿನಾಂಕ : 13–11–2001.
5. ಸರ್ಕಾರದ ಆದೇಶ ಸಂಖ್ಯೆ : ಕಂಇ 47 ಎಡಿಇ 2000, ದಿನಾಂಕ : 14–08–2002.
6. ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್ ವಿ (ಜಿ) ಸಿಟಿ/ಕ್ರೈಂ. 19/2000 ದಿನಾಂಕ : 21–12–2005.
7. ಸಚಿವ ಸಂಪುಟದ ಸಭೆಯ ಪ್ರಕರಣ ಸಂಖ್ಯೆ : ಸಿ/212/2006, ದಿನಾಂಕ : 20–07–2006.
8. ಸರ್ಕಾರದ ಆದೇಶ ಸಂಖ್ಯೆ : ಕಂಇ 47 ಎಡಿಇ 2000, ದಿನಾಂಕ : 03–08–2006.
9. ಶ್ರೀ ಎಂ. ಕೃಷ್ಣಪ್ಪ, ವಜಾಗೊಂಡ ತಹಸೀಲ್ದಾರ್ ಇವರ ಅರ್ಜಿ ದಿನಾಂಕ : 21–9–2011.
10. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95 ದಿನಾಂಕ : 26–06–96 ಹಾಗೂ ಸಿಆಸುಇ 8 ಸೇಇವಿ 2000 ದಿನಾಂಕ : 29–08–2000.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1) ರ ಸರ್ಕಾರದ ದಿನಾಂಕ : 27–10–2000 ರ ಆದೇಶದಲ್ಲಿ, ಬೆಂಗಳೂರು ಉತ್ತರ ತಾಲ್ಲೂಕಿನ ಅಂದಿನ ವಿಶೇಷ ತಹಶೀಲ್ದಾರರಾಗಿದ್ದ ಶ್ರೀ ಎಂ. ಕೃಷ್ಣಪ್ಪ ಇವರ ವಿರುದ್ಧ ಫಿರ್ಯಾದುದಾರರಾದ ಶ್ರೀ ಜಿ.ಎಸ್. ರಾಜಾರಾಂ ಎಂಬುವರಿಗೆ ಸಾಲ್ವೆನ್ಸಿ ಸರ್ಟಿಫಿಕೇಟ್ ನೀಡಲು ಬೆಂಗಳೂರು ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಲು ರೂ. 5000/– ಗಳ ಅಕ್ರಮ ಸಂಭಾವನೆಯನ್ನು ಕೇಳಿ ಪಡೆಯುತ್ತಿರುವಾಗ ಲೋಕಾಯುಕ್ತ ಪೊಲೀಸ್ ರವರ ಬಲೆಗೆ ಸಿಲುಕಿದ್ದ ಪ್ರಕರಣಕ್ಕೆ ಸಂಬಂಧಿಸಿದಂತೆ, ಸದರಿಯವರನ್ನು 1957 ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳಡಿಯಲ್ಲಿ ಶ್ರೀ ಎಂ. ಕೃಷ್ಣಪ್ಪ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿಕೊಂಡು ಅಮಾನತ್ತುಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2) ರ ಸರ್ಕಾರದ ದಿನಾಂಕ : 01–06–2002ರ ಆದೇಶದಲ್ಲಿ, ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಗಳು 1957 ರಡಿಯಲ್ಲಿ, ಅಮಾನತ್ತುಗೊಂಡಿರುವ ಶ್ರೀ ಎಂ. ಕೃಷ್ಣಪ್ಪ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ

ಇವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ ಆದೇಶಿಸಿದ್ದು, ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ : (3) ರ ದಿನಾಂಕ : 01–06–2002 ರ ಅಧಿಸೂಚನೆಯನ್ವಯ, ಸದರಿಯವರನ್ನು ಸಹಾಯಕ ರಾಜ್ಯ ಪ್ರತಿನಿಧಿ, ಕರ್ನಾಟಕ ಮೇಲ್ಮನವಿ ಪ್ರಾಧಿಕಾರ ಇಲ್ಲಿ ಶ್ರೀ ಬಿ. ಗೋಪಾಲಕೃಷ್ಣ ಇವರ ನಿಧನದಿಂದ ತೆರವಾಗಿರುವ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (4) ರ ಸರ್ಕಾರದ ದಿನಾಂಕ : 13–11–2001 ರ ಆದೇಶದಲ್ಲಿ, ಉಪ ಆರಕ್ಷಕ ಮಹಾ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ : 30–06–2001 ರ ಪತ್ರದಂತೆ ಸರ್ಕಾರವು ಪರಿಶೀಲಿಸಿ, ಆಪಾದಿತ ಅಧಿಕಾರಿಯಾದ ಶ್ರೀ ಎಂ. ಕೃಷ್ಣಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ 7, 13 (1)(ಡಿ) ರ ಜೊತೆಯಲ್ಲಿ ಓದಲಾದ ಕಲಂ 13(2) ಪ್ರಕಾರ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಮಂಜೂರಾತಿ ನೀಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (5) ರ ಸರ್ಕಾರದ ದಿನಾಂಕ : 14–08–2002ರ ಆದೇಶದಲ್ಲಿ, ಶ್ರೀ ಎಂ. ಕೃಷ್ಣಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟಿದ್ದ 6 ತಿಂಗಳ ನಂತರದ ಅವಧಿಗೆ ಅಂದರೆ ದಿನಾಂಕ : 27–4–2001 ರಿಂದ 01–06–2002 ರವರೆಗೆ 1958 ರ ಕರ್ನಾಟಕ ನಾಗರೀಕ ಸೇವಾ ನಿಮಾವಳಿಗಳ ನಿಯಮ 98(ಬಿ)(1) ರನ್ವಯ ನೀಡಲಾಗುತ್ತಿದ್ದ ಜೀವನಾಧಾರ ಭತ್ಯೆಯನ್ನು ಶೇ 24 ರಷ್ಟು ಹೆಚ್ಚಿಸಲು (ಒಟ್ಟು ಶೇಕಡ 75 ರಷ್ಟು) ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (6) ರ ದಿನಾಂಕ : 21–12–2005ರ ಪತ್ರದಲ್ಲಿ, ಹೆಚ್ಚುವರಿ ಆರಕ್ಷಕ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಆರೋಪಿತರಾದ ಶ್ರೀ ಎಂ. ಕೃಷ್ಣಪ್ಪ ಇವರ ವಿರುದ್ಧ ದೋಷಾರೋಪಣೆ ಪಟ್ಟಿಯನ್ನು ವಿಶೇಷ ನ್ಯಾಯಲಯಕ್ಕೆ ಸಲ್ಲಿಸಿದ್ದು, ಸದರಿ ದೋಷಾರೋಪಣಾ ಪಟಿಯು ನ್ಯಾಯಾಲಯದ ವಿಶೇಷ ಸಂಖ್ಯೆ : 194/2002 ರಲ್ಲಿ ವಿಚಾರಣೆಗಾಗಿ ದಾಖಲಾಗಿದ್ದು, ವಿಚಾರಣೆಯು ಪೂರ್ಣಗೊಂಡ ನಂತರ, ಬೆಂಗಳೂರು ನಗರ ಜಿಲ್ಲೆಯ ವಿಶೇಷ ನ್ಯಾಯಾಧೀಶರು ಆರೋಪಿತನನ್ನು ತಪ್ಪಿತಸ್ಥರೆಂದು ಪರಿಗಣಿಸಿ, ಆರೋಪಿತರು ಲಂಚ ನಿರೋಧ ಕಾಯ್ದೆ 1988 ರ ಕಲಂ 7 ರ ಅಡಿಯಲ್ಲಿ ಅಪರಾಧ ಎಸಗಿದ್ದಕ್ಕೆ 1 ವರ್ಷ ಸಾದಾ ಸಜೆ ಮತ್ತು ರೂ. 5000/– ಗಳ ದಂಡವನ್ನು ವಿಧಿಸಿದ್ದು, ದಂಡ ಕೊಡಲು ತಪ್ಪಿದ್ದಲ್ಲಿ, ಪುನಃ 3 ತಿಂಗಳ ಸಾದಾ ಸಜೆಯನ್ನು ಅನುಭವಿಸತಕ್ಕದೆಂದು, ಮುಂದುವರೆದು ಲಂಚ ನಿರೋಧ ಕಾಯ್ದೆ 1988 ರ ಕಲಂ 13(1)(ಡಿ) ಸಹವಾಚನ 13(2) ರಡಿಯಲ್ಲಿ ಅಪರಾಧ ಎಸಗಿದ್ದಕ್ಕೆ 2 ವರ್ಷಗಳ ಸಾದಾ ಸಜೆ ಮತ್ತು ರೂ. 10,000/– ಗಳ ದಂಡವನ್ನು ವಿಧಿಸಿದ್ದು, ದಂಡ ಕೊಡಲು ತಪ್ಪಿದ್ದಲ್ಲಿ, ಪುನಃ 3 ತಿಂಗಳ ಸಾದಾ ಸಜೆಯನ್ನು ಅನುಭವಿಸತಕ್ಕದ್ದೆಂದು ದಿನಾಂಕ : 30–09–2005 ರಂದು ನೀಡಿದ ತೀರ್ಪಿನಲ್ಲಿ ಆದೇಶಿಸಲಾಗಿದೆ. ಈ ಸಜೆಗಳ ತೀರ್ಪಿನ ಹಿನ್ನಲೆಯಲ್ಲಿ, ಭಾರತೀಯ ಸಂವಿಧಾನದ ಅನುಚ್ಛೇದ 311(2) ರ ಪ್ರವರ್ಗ, ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 14 ಹಾಗೂ 10(2) ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95 ದಿನಾಂಕ : 26–06–1996, ಸರ್ವೋಚ್ಛ ನ್ಯಾಯಾಲಯದ ಕ್ರಿಮಿನಲ್ ಮೇಲ್ಮನವಿ ಸಂಖ್ಯೆ : 770/2001 ರ ತೀರ್ಪಿನಲ್ಲಿ ಆರೋಪಿತರನ್ನು ಕೂಡಲೇ ಸೇವೆಯಿಂದ ವಜಾಗೊಳಿಸಲು ಅಗತ್ಯ ಕ್ರಮವನ್ನು ಶೀಘ್ರದಲ್ಲಿ ಕೈಗೊಳ್ಳಬೇಕೆಂದು ಕೋರಿರುತ್ತಾರೆ.

ಹೆಚ್ಚುವರಿ ಆರಕ್ಷಕ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಕೋರಿಕೆಯಂತೆ, ಶ್ರೀ ಎಂ. ಕೃಷ್ಣಪ್ಪ, ತಹಶೀಲ್ದಾರ್ ಇವರನ್ನು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ಸಚಿವ ಸಂಪುಟದ ಅನುಮೋದನೆ ಕೋರಲಾಗಿತ್ತು. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ : (7) ರಂತೆ, ಸಚಿವ ಸಂಪುಟದ ಸಭೆಯ ಪ್ರಕರಣ ಸಂಖ್ಯೆ : ಸಿ/212/2006 ದಿನಾಂಕ : 20–07–2006ರ ನಿರ್ಣಯದಲ್ಲಿ, ಸಚಿವ ಸಂಪುಟ ಟಿಪ್ಪಣಿಯ ಕಂಡಿಕೆ–5 ರಲ್ಲಿ ಒಳಗೊಂಡಿರುವ ಪ್ರಸ್ತಾವಗಳನ್ನು ಸಚಿವ ಸಂಪುಟವು ಅನುಮೋದಿಸಿತು. ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ : (8) ರ ದಿನಾಂಕ : 3–8–2006 ರ ಸರ್ಕಾರದ ಆದೇಶದಲ್ಲಿ, ಶ್ರೀ ಎಂ. ಕೃಷ್ಣಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿದೆ ಹಾಗೂ ಶ್ರೀ ಎಂ. ಕೃಷ್ಣಪ್ಪ ರವರು ದಿನಾಂಕ : 28–10–2000 ರಿಂದ 2–6–2002 ರವರೆಗೆ ಕಳೆದ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100(1)(ಬಿ) ರನ್ವಯ Period not spent on duty ಎಂದು ಪರಿಗಣಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (9) ರ ದಿನಾಂಕ : 21–9–2011 ರ ಅರ್ಜಿಯಲ್ಲಿ ವಜಾಗೊಂಡ ಅಧಿಕಾರಿಗಳಾದ ಶ್ರೀ ಎಂ. ಕೃಷ್ಣಪ್ಪ ರವರು ಬೆಂಗಳೂರು ನಗರ ಜಿಲ್ಲೆಯ ವಿಶೇಷ ನ್ಯಾಯಾಧೀಶರ ವಿಶೇಷ ಸಂಖ್ಯೆ : 194/2002 ರಲ್ಲಿನ ಆದೇಶದ ವಿರುದ್ಧ ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ : 2009/2005 ನ್ನು ದಾಖಲಿಸಿದ್ದು, ರಾಜ್ಯ ಉಚ್ಛ ನ್ಯಾಯಾಲಯವು ದಿನಾಂಕ : 3–8–2011 ರಂದು ನೀಡಿದ ತೀರ್ಪಿನಲ್ಲಿ, ಕೆಳಗಿನ ನ್ಯಾಯಾಲಯದ ಆದೇಶವನ್ನು ಸೆಟ್ ಅಸೈಡ್ ಮಾಡಿ, ಆಪಾದಿತರ ವಿರುದ್ಧದ ಎಲ್ಲಾ ಆರೋಪಗಳಿಂದ ಬಿಡುಗಡೆ ಮಾಡಿ ಆದೇಶಿಸಿರುವುದರಿಂದ, ಅವರು ಸೇವೆಯಿಂದ ವಜಾಗೊಳಿಸಿರುವ ಆದೇಶವನ್ನು ಪರಿಷ್ಕರಿಸಿ, ಸೇವೆಯಲ್ಲಿ ಮುಂದುವರೆದಿದ್ದರೆ ಅರ್ಹನಾಗುತ್ತಿದ್ದ ಎಲ್ಲಾ ಸೌಲಭ್ಯಗಳನ್ನು ಕೊಡಿಸಿಕೊಡಬೇಕೆಂದು ಮತ್ತು ಅವರು ಸೇವೆಯಲ್ಲಿ ಮುಂದುವರೆದಿದ್ದರೆ ದಿನಾಂಕ : 30–4–2008 ಕ್ಕೆ ವಯೋನಿವೃತ್ತನಾಗಿದ್ದು ಅವರಿಗೆ ಎಲ್ಲ್ಲಾ ಸೌಲಭ್ಯಗಳನ್ನು ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (10) ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95 ದಿನಾಂಕ : 26–6–96 ಹಾಗೂ ಸಿಆಸುಇ 8 ಸೇಇವಿ 2000 ದಿನಾಂಕ 29–8–2000 ಗಳಲ್ಲಿ ಇಂತಹ ಪ್ರಕರಣಗಳಲ್ಲಿ

ಸರ್ಕಾರಿ ನೌಕರರ ವಿರುದ್ಧ ಯಾವ ರೀತಿ ಕ್ರಮ ಜರುಗಿಸಬಹುದು ಎಂಬ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಿದ್ದು, ದಿನಾಂಕ : 26-6-1996 ರ ಸುತ್ತೋಲೆಯ ಕಂಡಿಕೆ-3 ರಲ್ಲಿ ಈ ಕೆಳಗಿನಂತೆ ಸ್ಪಷ್ಟಪಡಿಸಿದೆ.

> ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿನ ಎರಡನೇ ಪರಂತುಕದ ಖಂಡ (Clause)(ಎ) ಯು ಕ್ರಿಮಿನಲ್ ಆರೋಪದ ಮೇಲೆ ದೋಷಸಿದ್ಧಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ಧಿಯಾಗಿರುವುದನ್ನು ನಿಲಂಬನೆಯಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ, ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರ ವ್ಯವಹರಣೆ ಹೂಡಿದ್ದಾರೆ; ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾರೆ ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮ 1957 ರ ನಿಯಮ 14(1) ರನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲ. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾಗದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಬಹುದಾದ ಮೇಲ್ಮನಿ ಇತ್ಯರ್ಥವಾಗುವವರೆಗೂ ಕಾಯದೇ ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿರುವ ಎರಡನೇ ಪರಂತುಕ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರ ನಿಯಮ 14(1) ರ ಅನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದು. ಇಲ್ಲವಾದಲ್ಲಿ, ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ಧಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರೆಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ, ಮೆಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ. ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ಆದೇಶವನ್ನು ಪರಿಷ್ಕರಿಸಬಹುದು. ಒಂದು ವೇಳೆ ಸರ್ಕಾರಿ ನೌಕರರನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ, ಆತನ ಸೇವೆಯಲ್ಲಿ ಮುಂದುವರೆದಿದ್ದರೆ ಅರ್ಹನಾಗಿರುತ್ತಿದಂತ ಎಲ್ಲಾ ಸೌಲಭ್ಯಗಳಿಗೂ ಹಕ್ಕುಳವನಾಗುತ್ತಾನೆ.

ಶ್ರೀ ಎಂ. ಕೃಷ್ಣಪ್ಪ ರವರು ಸಲ್ಲಿಸಿರುವ ಮನವಿಯಲ್ಲಿ ಕೋರಿರುವಂತೆ, ಕರ್ನಾಟಕ ಉಚ್ಛ ನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂಖ್ಯೆ : 2009/2005 ರ ದಿನಾಂಕ : 3-8-2011 ರ ತೀರ್ಪು ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95 ದಿನಾಂಕ : 26-6-96 ಹಾಗೂ ಸಿಆಸುಇ 8 ಸೇಇವಿ 2000 ದಿನಾಂಕ : 29-8-2000 ಗಳಲ್ಲಿ ಇಂತಹ ಪ್ರಕರಣಗಳಲ್ಲಿ ಸರ್ಕಾರಿ ನೌಕರರ ವಿರುದ್ಧ ಯಾವ ರೀತಿ ಕ್ರಮ ಜರುಗಿಸಬಹುದು ಎಂಬ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಿರುವ ಹಿನ್ನಲೆಯಲ್ಲಿ, ಶ್ರೀ ಎಂ. ಕೃಷ್ಣಪ್ಪ, ತಹಶೀಲ್ದಾರ್ (ವಜಾಗೊಂಡ) ಇವರನ್ನು ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಾವಳಿಗಳು 1957 ರ ನಿಯಮ 14(1)ನ್ನು ಓದಿಕೊಂಡಂತೆ 8(viii) ರನ್ವಯ ಸೇವೆಯಿಂದ ವಜಾ ಮಾಡಿ ಆದೇಶಿಸಿರುವ ಸರ್ಕಾರದ ಆದೇಶ ಸಂಖ್ಯೆ : ಕಂಇ 47 ಎಡಿಇ 2000 ದಿನಾಂಕ : 3-8-2005 ರ ಆದೇಶವನ್ನು ಹಿಂತೆಗೆದುಕೊಂಡು, ಘನ ನ್ಯಾಯಾಯಾಲಯದ ಆದೇಶದಂತೆ ಈಗಾಗಲೇ ಇವರು ಸೇವೆಯಿಂದ ದಿನಾಂಕ : 30-4-2008 ರಂದು ವಯೋನಿವೃತ್ತಿ ಹೊಂದಿರುವುದರಿಂದ, ಅವರಿಗೆ ಲಭ್ಯವಾಗಬಹುದಾದ ಎಲ್ಲ ಸವಲತ್ತುಗಳನ್ನು ಮಂಜೂರು ಮಾಡಲು ಸರ್ಕಾರವು ತೀಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 72 ಎಡಿಇ 2011, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2012**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಉಚ್ಛ ನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂಖ್ಯೆ : 2009/2005 ರ ದಿನಾಂಕ : 3-8-2011 ರ ತೀರ್ಪು ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95 ದಿನಾಂಕ : 26-6-96 ಹಾಗೂ ಸಿಆಸುಇ 8 ಸೇಇವಿ 2000 ದಿನಾಂಕ : 29-8-2000 ರಲ್ಲಿ ನೀಡಿರುವ ಮಾರ್ಗದರ್ಶನದನ್ವಯ, ಶ್ರೀ ಎಂ. ಕೃಷ್ಣಪ್ಪ, ತಹಶೀಲ್ದಾರ್ (ವಜಾಗೊಂಡ) ಇವರನ್ನು ಸೇವೆಯಿಂದ ವಜಾ ಮಾಡಿ ಆದೇಶಿಸಿರುವ ಸರ್ಕಾರದ ಆದೇಶ ಸಂಖ್ಯೆ : ಕಂಇ 47 ಎಡಿಇ 2000 ದಿನಾಂಕ : 3-8-2005 ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಗಿದೆ. ಘನ ನ್ಯಾಯಾಲಯದ ಆದೇಶದಂತೆ, ಶ್ರೀ ಎಂ. ಕೃಷ್ಣಪ್ಪ, ತಹಶೀಲ್ದರ್ (ವಜಾಗೊಂಡ) ಇವರು ಸೇವೆಯಿಂದ ವಜಾಗೊಳ್ಳದೇ, ಮುಂದುಬರೆದಿದ್ದಲ್ಲಿ ಪಡೆಯುತ್ತಿದ್ದ ವೇತನ ಭತ್ಯೆ ಹಾಗೂ ವಯೋ ನಿವೃತ್ತಿ ಹೊಂದಿದಾಗ ನೀಡಬೇಕಿದ್ದ ನಿವೃತ್ತಿ ಸೌಲಭ್ಯಗಳನ್ನು ಪಾವತಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಪಿ.ಆರ್.1010

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

**ಕಂದಾಯ ಸಚಿವಾಲಯ**

**ವಿಷಯ:** ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2009-10ರ ವಾಸ್ತವಿಕ ಆಯವ್ಯಯ ಪತ್ರ ಮತ್ತು 2010-11ರ ಅಂದಾಜು ಆಯವ್ಯಯ ಪತ್ರಕ್ಕೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ: ಆ/ಕೂಸಮ/ಆಯವ್ಯಯ/2010-11/178. ದಿನಾಂಕ: 20-09-2010 ಇದರೊಂದಿಗೆ ಅಂತ್ಯಗೊಂಡ ಪತ್ರ ವ್ಯವಹಾರ.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 20-09-2010 ರ ಪತ್ರದಲ್ಲಿ ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2009-10ರ ವಾಸ್ತವಿಕ ಆಯವ್ಯಯ ಪತ್ರ ಮತ್ತು 2010-11ನೇ ಸಾಲಿನ ಅಂದಾಜು ಆಯವ್ಯಯ ಪತ್ರಕ್ಕೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಪ್ರಸ್ತಾವನೆಯ ವಿವರಗಳು ಈ ಕೆಳಕಂಡಂತಿವೆ.

**ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2009-10ನೇ ಸಾಲಿನ ಆಯವ್ಯಯ (ವಾಸ್ತವಿಕ)**

**(ರೂಪಾಯಿ ಲಕ್ಷಗಳಲ್ಲಿ)**

| ಕ್ರ. ಸಂ | ವಿವರಗಳು | ಪ್ರಾರಂಭದ ಶಿಲ್ಕು | ಆದಾಯ | ಒಟ್ಟು | ವೆಚ್ಚ | ಉಳಿತಾಯ |
|---|---|---|---|---|---|---|
| 1 | ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನ ಖಾತೆ | 191.42 | 127.42 | 318.84 | 120.58 | 198.26 |
| 2 | ಶ್ರೀ ಬಸವೇಶ್ವರ ದೇವಸ್ಥಾನ, ಬಸವನ ಬಾಗೇವಾಡಿ ಖಾತೆ | 29.26 | 49.41 | 78.67 | 43.93 | 34.74 |
| 3 | ಕಾಮಗಾರಿಗಳ ಖಾತೆ | 777.09 | 253.93 | 1031.02 | 509.51 | 521.51 |
| 4 | ಸಿಬ್ಬಂದಿ ಖಾತೆ | 36.98 | 27.72 | 64.70 | 21.16 | 43.54 |
| | **ಒಟ್ಟು ರೂ.** | **1034.75** | **458.48** | **1493.23** | **695.18** | **798.05** |

**ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2010-11ನೇ ಸಾಲಿನ ಆಯವ್ಯಯ (ಅಂದಾಜು)**

**(ರೂಪಾಯಿ ಲಕ್ಷಗಳಲ್ಲಿ)**

| ಕ್ರ. ಸಂ | ವಿವರಗಳು | ಪ್ರಾರಂಭದ ಶಿಲ್ಕು | ಆದಾಯ | ಒಟ್ಟು | ವೆಚ್ಚ | ಉಳಿತಾಯ |
|---|---|---|---|---|---|---|
| 1 | ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನ ಖಾತೆ | 198.26 | 115.00 | 313.26 | 294.53 | 18.73 |
| 2 | ಶ್ರೀ ಬಸವೇಶ್ವರ ದೇವಸ್ಥಾನ, ಬಸವನ ಬಾಗೇವಾಡಿ ಖಾತೆ | 34.74 | 47.30 | 82.04 | 64.10 | 17.94 |
| 3 | ಕಾಮಗಾರಿಗಳ ಖಾತೆ | 521.51 | 89.21 | 610.72 | 607.11 | 03.61 |
| 4 | ಸಿಬ್ಬಂದಿ ಖಾತೆ | 43.54 | 27.95 | 71.49 | 28 | 43.49 |
| | **ಒಟ್ಟು ರೂ.** | **798.05** | **279.46** | **1077.51** | **993.74** | **83.77** |

ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಅಧಿನಿಯಮ 1994ರ ಕಲಂ 26(1) ಮತ್ತು (2)ರ ಪ್ರಕಾರ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ ಆಯವ್ಯಯಕ್ಕೆ ಸರ್ಕಾರದ ಅನುಮೋದನೆ ಅಗತ್ಯವಿರುತ್ತದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 213 ಆರ್‌ಇಹೆಚ್ 2010, ಬೆಂಗಳೂರು, ದಿನಾಂಕ 08-03-2012**

ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ ಈ ಕೆಳಕಂಡ ಆಯವ್ಯಯ ಪತ್ರಗಳಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1. 2009-10ನೇ ಸಾಲಿನ ಹಿಂದಿನ ವರ್ಷದ ಉಳಿತಾಯ ಮೊತ್ತ ರೂ. 1034.75 ಲಕ್ಷ ಇದ್ದು ಆದಾಯ ರೂ. 458.48 ಲಕ್ಷ ಸೇರಿ ಒಟ್ಟಾರೆ ರೂ. 1493.23 ವಾಸ್ತವಿಕ ಆದಾಯ ಮತ್ತು ರೂ. 695.18 ಲಕ್ಷದ ವಾಸ್ತವಿಕ ವೆಚ್ಚದ ಆಯವ್ಯಯ ಪತ್ರ.
2. 2010-11ನೇ ಸಾಲಿನ ಹಿಂದಿನ ವರ್ಷದ ಉಳಿತಾಯ ರೂ. 798.05 ಉಳಿತಾಯ ಮೊತ್ತ ರೂ. 279.46 ಅಂದಾಜು ಆದಾಯ ಸೇರಿ ಒಟ್ಟು ರೂ. 1077.51 ಲಕ್ಷಗಳಲ್ಲಿ ರೂ. 993.74 ಲಕ್ಷದ ಅಂದಾಜು ವೆಚ್ಚ ಆಯವ್ಯಯ ಪತ್ರ.
3. ಈ ಮೇಲಿನ ಆಯವ್ಯಯ ಪತ್ರಗಳಿಗೆ ನೀಡಿರುವ ಅನುಮೋದನೆಯನ್ನು ಯಾವುದೇ ವೆಚ್ಚಕ್ಕೆ ಅಥವಾ ಸ್ವೀಕೃತಿಗೆ ನೀಡಲಾಗಿರುವ ಅನುಮೋದನೆಯೆಂದು ಪರಿಗಣಿಸಬಾರದು.
4. ಮಂಡಳಿಯ ಲೆಕ್ಕಪತ್ರಗಳ ಬಗ್ಗೆ ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಅಧಿನಿಯಮ, 1994ರ ಕಲಂ 27 ಮತ್ತು 28ರಂತೆ ಅಗತ್ಯ ಕ್ರಮ ಜರುಗಿಸುವಂತೆ ಸಹ ಆದೇಶಿಸಿದೆ.

5. ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 30–04–2011ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1011 ಕಂದಾಯ ಇಲಾಖೆ, (ಭೂಸ್ವಾ–2 ಮತ್ತು ಪುನರ್ವಸತಿ)

## ಕಂದಾಯ ಸಚಿವಾಲಯ

**ವಿಷಯ:** ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2010–11ರ ವಾಸ್ತವಿಕ ಆಯವ್ಯಯ ಪತ್ರ ಮತ್ತು 2011–12ರ ಅಂದಾಜು ಆಯವ್ಯಯ ಪತ್ರಕ್ಕೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:** ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ: ಆ/ ಕೂಸಮ/ ಆಯವ್ಯಯ/2011–12/226. ದಿನಾಂಕ: 20–10–2011 ಇದರೊಂದಿಗೆ ಅಂತ್ಯಗೊಂಡ ಪತ್ರ ವ್ಯವಹಾರ.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 20–10–2011 ರ ಪತ್ರದಲ್ಲಿ ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2010–11ರ ವಾಸ್ತವಿಕ ಆಯವ್ಯಯ ಪತ್ರ ಮತ್ತು 2011–12ನೇ ಸಾಲಿನ ಅಂದಾಜು ಆಯವ್ಯಯ ಪತ್ರಕ್ಕೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಪ್ರಸ್ತಾವನೆಯ ವಿವರಗಳು ಈ ಕೆಳಕಂಡಂತಿವೆ.

**ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2010–11ನೇ ಸಾಲಿನ ಆಯವ್ಯಯ (ವಾಸ್ತವಿಕ)**

**(ರೂಪಾಯಿ ಲಕ್ಷಗಳಲ್ಲಿ)**

| ಕ್ರ. ಸಂ | ವಿವರಗಳು | ಪ್ರಾರಂಭದ ಶಿಲ್ಕು | ಆದಾಯ | ಒಟ್ಟು | ವೆಚ್ಚ | ಉಳಿತಾಯ |
|---|---|---|---|---|---|---|
| 1 | ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನ ಖಾತೆ | 198.26 | 160.20 | 358.46 | 212.28 | 146.18 |
| 2 | ಕಾಮಗಾರಿಗಳ ಖಾತೆ | 521.51 | 781.55 | 1303.06 | 718.11 | 584.95 |
| 3 | ಶ್ರೀ ಬಸವೇಶ್ವರ ದೇವಸ್ಥಾನ, ಬಸವನ ಬಾಗೇವಾಡಿ ಖಾತೆ | 34.74 | 43.76 | 78.50 | 45.11 | 33.39 |
| 4 | ಸಿಬ್ಬಂದಿ ಖಾತೆ | 43.54 | 26.25 | 69.79 | 23.45 | 46.34 |
| | **ಒಟ್ಟು ರೂ.** | **798.05** | **1011.76** | **1809.01** | **998.95** | **810.86** |

**ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2011–12ನೇ ಸಾಲಿನ ಆಯವ್ಯಯ (ಅಂದಾಜು)**

**(ರೂಪಾಯಿ ಲಕ್ಷಗಳಲ್ಲಿ)**

| ಕ್ರ. ಸಂ | ವಿವರಗಳು | ಪ್ರಾರಂಭದ ಶಿಲ್ಕು | ಆದಾಯ | ಒಟ್ಟು | ವೆಚ್ಚ | ಉಳಿತಾಯ |
|---|---|---|---|---|---|---|
| 1 | ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನ ಖಾತೆ | 146.18 | 157.00 | 303.18 | 278.33 | 24.85 |
| 2 | ಕಾಮಗಾರಿಗಳ ಖಾತೆ | 584.95 | 254.25 | 839.20 | 846.57 | (–)7.37 |
| 3 | ಶ್ರೀ ಬಸವೇಶ್ವರ ದೇವಸ್ಥಾನ, ಬಸವನ ಬಾಗೇವಾಡಿ ಖಾತೆ | 33.39 | 47.30 | 80.69 | 66.00 | 14.69 |
| 4 | ಸಿಬ್ಬಂದಿ ಖಾತೆ | 46.34 | 27.95 | 74.29 | 31.00 | 43.29 |
| | **ಒಟ್ಟು ರೂ.** | **810.86** | **486.50** | **1297.36** | **1221.90** | **75.46** |

ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಅಧಿನಿಯಮ 1994ರ ಕಲಂ 26(1) ಮತ್ತು (2)ರ ಪ್ರಕಾರ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ ಆಯವ್ಯಯಕ್ಕೆ ಸರ್ಕಾರದ ಅನುಮೋದನೆ ಅಗತ್ಯವಿರುತ್ತದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 98 ಆರ್‌ಇಹೆಚ್ 2011, ಬೆಂಗಳೂರು, ದಿನಾಂಕ 08–03–2012**

ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ ಈ ಕೆಳಕಂಡ ಆಯವ್ಯಯ ಪತ್ರಗಳಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1. 2010–11ನೇ ಸಾಲಿನ ಹಿಂದಿನ ವರ್ಷದ ಉಳಿತಾಯ ಮೊತ್ತ ರೂ. 798.05 ಲಕ್ಷ ಇದ್ದು ಆದಾಯ ರೂ. 1011.76 ಲಕ್ಷ ಸೇರಿ ಒಟ್ಟಾರೆ ರೂ. 1809.81 ವಾಸ್ತವಿಕ ಆದಾಯ ಮತ್ತು ರೂ. 998.95 ಲಕ್ಷದ ವಾಸ್ತವಿಕ ವೆಚ್ಚದ ಆಯವ್ಯಯ ಪತ್ರ.
2. 2011–12ನೇ ಸಾಲಿನ ಹಿಂದಿನ ವರ್ಷದ ಉಳಿತಾಯ ರೂ. 810.86 ಉಳಿತಾಯ ಮೊತ್ತ ರೂ. 486.50 ಅಂದಾಜು ಆದಾಯ ಸೇರಿ ಒಟ್ಟು ರೂ. 1297.36 ಲಕ್ಷಗಳಲ್ಲಿ ರೂ. 1221.90 ಲಕ್ಷದ ಅಂದಾಜು ವೆಚ್ಚ ವೆಚ್ಚದ ಆಯವ್ಯಯ ಪತ್ರ.
3. ಈ ಮೇಲಿನ ಆಯವ್ಯಯ ಪತ್ರಗಳಿಗೆ ನೀಡಿರುವ ಅನುಮೋದನೆಯನ್ನು ಯಾವುದೇ ವೆಚ್ಚಕ್ಕೆ ಅಥವಾ ಸ್ವೀಕೃತಿಗೆ ನೀಡಲಾಗಿರುವ ಅನುಮೋದನೆಯೆಂದು ಪರಿಗಣಿಸಬಾರದು.
4 ಮಂಡಳಿಯ ಲೆಕ್ಕಪತ್ರಗಳ ಬಗ್ಗೆ ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಅಧಿನಿಯಮ, 1994ರ ಕಲಂ 27 ಮತ್ತು 28ರಂತೆ ಅಗತ್ಯ ಕ್ರಮ ಜರುಗಿಸುವಂತೆ ಸಹ ಆದೇಶಿಸಿದೆ.
5 ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 30–04–2011ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1012 ಕಂದಾಯ ಇಲಾಖೆ, (ಭೂಸ್ವಾ–2 ಮತ್ತು ಪುನರ್ವಸತಿ)

## ಕಂದಾಯ ಸಚಿವಾಲಯ

**ವಿಷಯ:** ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2008–09ರ ವಾಸ್ತವಿಕ ಆಯವ್ಯಯ ಪತ್ರ ಮತ್ತು 2009–10ರ ಅಂದಾಜು ಆಯವ್ಯಯ ಪತ್ರಕ್ಕೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:** ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ: ಆ/ ಕೂಸಮ/ ಆಯವ್ಯಯ/2009–10/460. ದಿನಾಂಕ: 15–02–2010 ಇದರೊಂದಿಗೆ ಅಂತ್ಯಗೊಂಡ ಪತ್ರ ವ್ಯವಹಾರ.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 15–02–2010 ರ ಪತ್ರದಲ್ಲಿ ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2008–09ರ ವಾಸ್ತವಿಕ ಆಯವ್ಯಯ ಪತ್ರ ಮತ್ತು 2009–10ನೇ ಸಾಲಿನ ಅಂದಾಜು ಆಯವ್ಯಯ ಪತ್ರಕ್ಕೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಪ್ರಸ್ತಾವನೆಯ ವಿವರಗಳು ಈ ಕೆಳಕಂಡಂತಿವೆ.

**ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2008–09ನೇ ಸಾಲಿನ ಆಯವ್ಯಯ (ವಾಸ್ತವಿಕ)**

**(ರೂಪಾಯಿ ಲಕ್ಷಗಳಲ್ಲಿ)**

| ಕ್ರ. ಸಂ | ವಿವರಗಳು | ಪ್ರಾರಂಭದ ಶಿಲ್ಕು | ಆದಾಯ | ಒಟ್ಟು | ವೆಚ್ಚ | ಉಳಿತಾಯ |
|---|---|---|---|---|---|---|
| 1 | ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನ ಖಾತೆ | 163.38 | 108.06 | 271.44 | 80.84 | 190.60 |
| 2 | ಶ್ರೀ ಬಸವೇಶ್ವರ ದೇವಸ್ಥಾನ, ಬಸವನ ಬಾಗೇವಾಡಿ ಖಾತೆ | 27.77 | 42.56 | 70.33 | 36.78 | 33.55 |
| 3 | ಕಾಮಗಾರಿಗಳ ಖಾತೆ | 996.84 | 180.98 | 1177.82 | 375.96 | 801.86 |
| 4 | ಸಿಬ್ಬಂದಿ ಖಾತೆ | 33.84 | 25.75 | 59.59 | 22.61 | 36.98 |
| | **ಒಟ್ಟು ರೂ.** | **1221.83** | **357.35** | **1579.18** | **516.19** | **1062.99** |

**ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2009–10ನೇ ಸಾಲಿನ ಆಯವ್ಯಯ (ಅಂದಾಜು)**

**(ರೂಪಾಯಿ ಲಕ್ಷಗಳಲ್ಲಿ)**

| **ಕ್ರ. ಸಂ** | **ವಿವರಗಳು** | **ಪ್ರಾರಂಭದ ಶಿಲ್ಕು** | **ಆದಾಯ** | **ಒಟ್ಟು** | **ವೆಚ್ಚ** | **ಉಳಿತಾಯ** |
|---|---|---|---|---|---|---|
| 1 | ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನ ಖಾತೆ | 190.60 | 115.47 | 306.07 | 261.03 | 45.04 |

| | | | | | | |
|---|---|---|---|---|---|---|
| 2 | ಶ್ರೀ ಬಸವೇಶ್ವರ ದೇವಸ್ಥಾನ, ಬಸವನ ಬಾಗೇವಾಡಿ ಖಾತೆ | 33.55 | 43.17 | 76.72 | 31.23 | 45.49 |
| 3 | ಕಾಮಗಾರಿಗಳ ಖಾತೆ | 801.86 | 139.02 | 940.88 | 380.85 | 560.03 |
| 4 | ಸಿಬ್ಬಂದಿ ಖಾತೆ | 36.98 | 27.91 | 64.89 | 42.00 | 22.89 |
| | **ಒಟ್ಟು ರೂ.** | **1062.99** | **325.57** | **1388.56** | **715.11** | **673.45** |

ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಅಧಿನಿಯಮ 1994ರ ಕಲಂ 26(1) ಮತ್ತು (2)ರ ಪ್ರಕಾರ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ ಆಯವ್ಯಯಕ್ಕೆ ಸರ್ಕಾರದ ಅನುಮೋದನೆ ಅಗತ್ಯವಿರುತ್ತದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 213 ಆರ್‌ಇಹೆಚ್ 2010, ಬೆಂಗಳೂರು, ದಿನಾಂಕ 08–03–2012**

ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ ಈ ಕೆಳಕಂಡ ಆಯವ್ಯಯ ಪತ್ರಗಳಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1. 2008–09ನೇ ಸಾಲಿನ ಹಿಂದಿನ ವರ್ಷದ ಉಳಿತಾಯ ಮೊತ್ತ ರೂ. 1221.83 ಲಕ್ಷ ಇದ್ದು ಆದಾಯ ರೂ. 357.35 ಲಕ್ಷ ಸೇರಿ ಒಟ್ಟಾರೆ ರೂ. 1579.18 ವಾಸ್ತವಿಕ ಆದಾಯ ಮತ್ತು ರೂ. 516.19 ಲಕ್ಷದ ವಾಸ್ತವಿಕ ವೆಚ್ಚದ ಆಯವ್ಯಯ ಪತ್ರ.
2. 2009–10ನೇ ಸಾಲಿನ ಹಿಂದಿನ ವರ್ಷದ ಉಳಿತಾಯ ರೂ. 1062.99 ಉಳಿತಾಯ ಮೊತ್ತ ರೂ. 325.57 ಆದಾಯ ಸೇರಿ ಒಟ್ಟು ರೂ. 1388.56 ಲಕ್ಷಗಳಲ್ಲಿ ರೂ. 715.11 ಲಕ್ಷದ ಅಂದಾಜು ವೆಚ್ಚ ಆಯವ್ಯಯ ಪತ್ರ.
3. ಈ ಮೇಲಿನ ಆಯವ್ಯಯ ಪತ್ರಗಳಿಗೆ ನಿಡಿರುವ ಅನುಮೋದನೆಯನ್ನು ಯಾವುದೇ ವೆಚ್ಚಕ್ಕೆ ಅಥವಾ ಸ್ವೀಕೃತಿಗೆ ನೀಡಲಾಗಿರುವ ಅನುಮೋದನೆಯೆಂದು ಪರಿಗಣಿಸಬಾರದು.
4 ಮಂಡಳಿಯ ಲೆಕ್ಕಪತ್ರಗಳ ಬಗ್ಗೆ ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಅಧಿನಿಯಮ, 1994ರ ಕಲಂ 27 ಮತ್ತು 28ರಂತೆ ಅಗತ್ಯ ಕ್ರಮ ಜರುಗಿಸುವಂತೆ ಸಹ ಆದೇಶಿಸಿದೆ.
5 ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 30–04–2011ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1013 ಕಂದಾಯ ಇಲಾಖೆ, (ಭೂಸ್ವಾ–2 ಮತ್ತು ಪುನರ್ವಸತಿ)

## COMMERCE AND INDUSTRIES SECRETARIAT

**Sub:** Administrative sanction for procurement of Consultant for Event Management services for conducting Global Investors Meet 2012

**Ref :** File KUM/EM-GIM/Ez/436/2011-12

**Preamble:**

Encouraged by the resounding success of GIM 2010, it is a proposed to conduct GIM 2012 in June 2012 at Bangalore.

An important component of the programme is the appointment of consultants for the event. The following consultants are to be appointed-

- Branding & Communication
- Knowledge Partner & Trasaction Advisor
- Event Management Agency

The Commissioner, Industrial Development and Director, Commerce and Industries Department has sent a proposal in this regard stating that, Rs. 5.00 lakh crores investment is proposed to be mobilized during GIM 2012. It is also proposed to have seminars, B2B and B2G networking meetings, partner country sessions, thematic conventions and exhibition over an extent of 40,000 sq. mtrs it is felt that it is a mega event and the services of event management agency is required to make all necessary arrangements on behalf of KUM to make GIM-2012 as successful event.

The scope of services of EMA will broadly include undertaking of pre-event activities, activities during the event and post event activities such as concept & planning, venue development, participation arrangements, marketing & promotion, staffing & others for effective and successful conduct of the event.

The main aspects covered are exhibition area, inaugural hall, seating arrangements, registration, delegate kits construction of CMs lounge, Ministers lounge media enclosure, B2B meetings MOU signing area, green rooms, networking venue, branding, photography & video-graphy audiovisuals hall management, dinning- VIP, delegates & service staff, transportation, cultural programmes, infrastructure, CCTV, LCD screens, sponsorship invitations, MC, compere, conference rooms, event structure, cultural programmes, crowd management, security, necessary approvals etc.

Hence, advertisement calling for RFP was released in leading newspapers by C&I Department through KUM. A selection Committee was constituted under the Chairmanship of Commissioner for Industrial Development and Director of Industries and Commerce for technical and financial evaluation of the bids received.

After following due process under the KTPP act M/s MM Activ Pvt. Ltd., who had indicated a grant of Rs. 3.7 cr. Inclusive of all taxes including service tax has been shortlisted as the qualified bidder to be appointed to provide the services of event management agency for GIM 2012 at a cost of 3.7cr (Rs. Three crore Seventy lakhs only)

Commissioner for Industrial Development and Director of Industries Commerce Department has requested The Government for administrative approval for procurement of services of event management agency at a cost of Rs. 3.7 cr. (Rs. Three crore Seventy lakhs only) inclusive of all taxes including service tax as the expenditure to be incurred for engaging the services of the event management agency for GIM 2012.

The proposal has been examined in all aspects and hence the following order.

**Government Order No. CI 88 SPI 2012, Bangalore, dated 24-03-2012**

In the circumstances explained in the preamble, administrative approval of the Government is hereby accorded for the procurement of event management services for GIM-2012 from M/s MM Activ Pvt. Ltd., an event management agency, at a cost of Rs. 3.7 cr. (Rs. Three crore Seventy lakhs only) inclusive of all taxes including service tax.

By Order and in the name of the Governor of Karnataka

**Jyothi. R.J.**

Desk Officer (Technical cell)

P.R. 1014

Commerce & Industries Department

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಾಜ್ಯ ಉಚ್ಚ ನ್ಯಾಯಾಲಯದ ನಿವೃತ್ತ/ರಾಜೀನಾಮೆ ನೀಡಿರುವ ನೌಕರರನ್ನು ಗುತ್ತಿಗೆ ಆಧಾರದ ಮೇಲೆ ಪುನರ್ ನೇಮಕಾತಿ ಮಾಡುವ ಕುರಿತು.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಇವರ ಪತ್ರದ ಸಂಖ್ಯೆ: HCE 601/2011, ದಿನಾಂಕ: 30–06–2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್ ರವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನಿವೃತ್ತರಾದ 10 ಹಿರಿಯ ತೀರ್ಪುಬರಹಗಾರರು, 10 ತೀರ್ಪುಬರಹಗಾರರು ಮತ್ತು 10 ಶೀಘ್ರಲಿಪಿಗಾರರನ್ನು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಮರು ನೇಮಕಾತಿಗೊಳಿಸುವ ಅವಶ್ಯಕತೆ ಇದ್ದು, ಸದರಿ ಮರು ನೇಮಕಾತಿಗೆ ವಾರ್ಷಿಕವಾಗಿ ರೂ. 50.40 ಲಕ್ಷಗಳ ಆರ್ಥಿಕ ವೆಚ್ಚ ಉಂಟಾಗುತ್ತದೆ ಎಂದು ತಿಳಿಸಿರುವರು. ಆದ್ದರಿಂದ ನಿವೃತ್ತ/ರಾಜೀನಾಮೆ ನೀಡಿರುವ ಕರ್ನಾಟಕ ಉಚ್ಚ ನ್ಯಾಯಾಲಯದ ನೌಕರರನ್ನು ಗುತ್ತಿಗೆ ಆಧಾರದ ಮೇಲೆ ಅವರ ಪತ್ರದಲ್ಲಿ ತಿಳಿಸಿರುವ ಷರತ್ತುಗಳನ್ವಯ ಪುನರ್ ನೇಮಕ ಮಾಡುವ ಕುರಿತು ಸಹಮತಿಯನ್ನು ಹಾಗೂ ಸದರಿ ಪುನರ್ ನೇಮಕಾತಿಗೆ ಆರ್ಥಿಕ ಅನುದಾನವನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 290 ಎಲ್ಎಸಿ 2011, ಬೆಂಗಳೂರು, ದಿನಾಂಕ 17–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಒಟ್ಟು 30 ಸಂಖ್ಯೆಯ ನಿವೃತ್ತ ಕರ್ನಾಟಕ ಉಚ್ಚ ನ್ಯಾಯಾಲಯದ ನೌಕರರ ಸೇವೆಯನ್ನು ಈ ಕೆಳಕಂಡಂತೆ ವಿಧಿಸಿರುವ ಷರತ್ತುಗಳನ್ವಯ ಶೀಘ್ರಲಿಪಿಗಾರರು ಮತ್ತು ತೀರ್ಪುಬರಹಗಾರರ ಹುದ್ದೆಗಳಿಗೆ ಗುತ್ತಿಗೆ ಆಧಾರದ ಮೇಲೆ ಒಂದು ವರ್ಷದ ಅವಧಿಗೆ ಇವರ ಸೇವೆಯನ್ನು ಪಡೆಯಲು ಸರ್ಕಾರವು ಮಂಜೂರಾತಿ ನೀಡಿದೆ.

1) ಸದರಿ ಗುತ್ತಿಗೆ ನೇಮಕಾತಿಯನ್ನು ಪ್ರಾರಂಭಿಕವಾಗಿ ಎರಡು ವರ್ಷಗಳವರೆಗೆ ಅಥವಾ ನೇರ ನೇಮಕಾತಿಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ.
2) ಹಿರಿಯ ತೀರ್ಪು ಬರಹಗಾರರಿಗೆ ಮಾಸಿಕ ರೂ. 15,000/– ತೀರ್ಪು ಬರಹಗಾರರಿಗೆ ಮಾಸಿಕ ರೂ. 14,000/– ಹಾಗೂ ಶೀಘ್ರಲಿಪಿಗಾರರಿಗೆ ಮಾಸಿಕ ರೂ. 13,000/–ಗಳ ಸಂಚಿತ ಸಂಭಾವನೆಯನ್ನು ನೀಡುವುದು.

3) ಸದರಿ ನೌಕರರಿಗೆ ಸಂಚಿತ ವೇತನದ ಹೊರತಾಗಿ ಯಾವುದೇ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳನ್ನು ನೀಡಲಾಗುವುದಿಲ್ಲ.

4) ಸದರಿ ನೌಕರರು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಹೊರತಾಗಿ ಬೇರೆ ಯಾವುದೇ ರಜೆಯನ್ನು ಪಡೆಯಲು ಅರ್ಹರಿರುವುದಿಲ್ಲ ಹಾಗೂ ಸಾರ್ವಜನಿಕ, ರಾಜ್ಯ ಮತ್ತು ರಾಷ್ಟ್ರೀಯ ರಜೆಗಳನ್ನು ಮಾತ್ರ ಉಪಯೋಗಿಸಿಕೊಳ್ಳಲು ಅವಕಾಶವಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1128 ವೆಚ್ಚ–12/2011, ದಿನಾಂಕ: 03–02–2002ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ.ಎ. ಗೌರೀಶ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಪಿ.ಆರ್. 1015 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ,

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2011–12ನೇ ಸಾಲಿನ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 69 ಯೋವಿವಿ 2011 ದಿನಾಂಕ: 04–06–2011.
2. ಸರ್ಕಾರಿ ಆದೇಶ ಸಂಖ್ಯೆ: ಯೋಇ 69 ಯೋವಿವಿ 2011 ದಿನಾಂಕ: 06–06–2011.
3. ಸರ್ಕಾರಿ ಆದೇಶ ಸಂಖ್ಯೆ: ಯೋಇ 69 ಯೋವಿವಿ 2011 ದಿನಾಂಕ: 10–10–2011.
4. ಸರ್ಕಾರಿ ಆದೇಶ ಸಂಖ್ಯೆ: ಯೋಇ 69 ಯೋವಿವಿ 2011 ದಿನಾಂಕ: 07–03–2012

**ಪ್ರಸ್ತಾವನೆ :**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2011–12 ನೇ ಸಾಲಿನ ಲೆಕ್ಕಶೀರ್ಷಿಕೆ "4575–60–800–0–01" (ಯೋಜನೆ) ಅಡಿಯಲ್ಲಿ ರೂ. 300.00 ಕೋಟಿಗಳನ್ನು ಒದಗಿಸಲಾಗಿದೆ. ಈ ಯೋಜನೆಯನ್ನು ಮೇಲೆ ಓದಲಾದ (1) ಮತ್ತು (2)ರ ಆದೇಶದಲ್ಲಿ ಮೊದಲನೆಯ ಕಂತಾಗಿ ರೂ. 99.83 ಕೋಟಿಗಳನ್ನು ಮತ್ತು ಮೇಲೆ ಓದಲಾದ (3)ರ ಆದೇಶದಲ್ಲಿ ಎರಡನೇ ಕಂತಾಗಿ ರೂ. 99.99 ಕೋಟಿಗಳನ್ನು ಹಾಗೂ ಮೂರನೆಯ ಕಂತಾಗಿ ರೂ. 98.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ದಿನಾಂಕ 07.03.2012 ರಂದು ನೀತಿ ಸಂಹಿತೆ ಚಾಲ್ತಿಯಲ್ಲಿದ್ದ ಕಾರಣ ಉಡುಪಿ ಚಿಕ್ಕಮಗಳೂರು ಜಿಲ್ಲೆಯ ವಿಧಾನ ಸಭೆ ಹಾಗೂ ವಿಧಾನ ಪರಿಷತ್ ಸದಸ್ಯರುಗಳಿಗೆ 3ನೇಯ ಕಂತಿನ ಅನುದಾನವನ್ನು ಬಿಡುಗಡೆ ಮಾಡಲಾಗಿಲ್ಲ. ಈಗ ನೀತಿ ಸಂಹಿತೆ ಮುಗಿದಿರುವುದರಿಂದ ಚಿಕ್ಕಮಗಳೂರು ಹಾಗೂ ಉಡುಪಿ ಜಿಲ್ಲೆಯ ಕ್ಷೇತ್ರಗಳಿಗೆ ಅನುದಾನ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 69 ಯೋವಿವಿ 2011 ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2012.**

2011–12ನೇ ಸಾಲಿನ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುಷ್ಠಾನಕ್ಕಾಗಿ ಲೆಕ್ಕಶೀರ್ಷಿಕೆ "4575–60–800–0–01–132 (ಬಂಡವಾಳ ವೆಚ್ಚಗಳು) (ಯೋಜನೆ)" ಅಡಿಯಲ್ಲಿ ತಲಾ ರೂ. 20,25,000 ಗಳು (ಇಪ್ಪತ್ತು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ "4575–60–800–0–01–422 (ವಿಶೇಷ ಘಟಕ ಯೋಜನೆ)" ಅಡಿಯಲ್ಲಿ ತಲಾ ರೂ. 8,82,000 (ಎಂಟು ಲಕ್ಷದ ಎಂಬತ್ತೆರಡು ಸಾವಿರ ರೂಪಾಯಿಗಳು ಮಾತ್ರ), ಹಾಗೂ ಲೆಕ್ಕಶೀರ್ಷಿಕೆ "4575–60–800–0–01–423 (ಗಿರಿಜನ ಉಪಯೋಜನೆ)" ಅಡಿಯಲ್ಲಿ ತಲಾ ರೂ. 3,59,000–00 (ಮೂರು ಲಕ್ಷದ ಐವತ್ತೊಂಬತ್ತು ಸಾವಿರ ರೂಪಾಯಿಗಳು ಮಾತ್ರ) ರಂತೆ ಒಟ್ಟು ತಲಾ ರೂ. 32,66,000 ಗಳು (ಮೂವತ್ತೆರಡು ಲಕ್ಷದ ಅರವತ್ತಾರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು **ಅನುಬಂಧ–1 ರಲ್ಲಿ** ಸೂಚಿಸಿರುವ ವಿಧಾನ ಸಭಾ ಕ್ಷೇತ್ರಗಳಿಗೆ ಒಟ್ಟು ರೂ. 3,26,60,000–00 (ಮೂರು ಕೋಟಿ ಇಪ್ಪತ್ತಾರು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ವಿಧಾನ ಪರಿಷತ್ ಸದಸ್ಯರಿಗೆ **ಅನುಬಂಧ–2** ರಲ್ಲಿ ಸೂಚಿಸಿರುವಂತೆ ಒಟ್ಟು ರೂ. 1,95,96,000–00 (ಒಂದು ಕೋಟಿ ತೊಂಬತ್ತೈದು ಲಕ್ಷದ ತೊಂಬತ್ತಾರು ಸಾವಿರ ರೂಪಾಯಿಗಳು ಮಾತ್ರ) ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ. ಒಟ್ಟು ಬಿಡುಗಡೆ ಮಾಡಿದ ಮೊತ್ತ ರೂ. 5,22,56,000–00 (ಐದು ಕೋಟಿ ಇಪ್ಪತ್ತೆರಡು ಲಕ್ಷದ ಐವತ್ತಾರು ಸಾವಿರ ರೂಪಾಯಿಗಳು ಮಾತ್ರ).

(2) ಈ ಬಿಡುಗಡೆಯಾದ ಮೊತ್ತವನ್ನು ಸರ್ಕಾರದ ಪತ್ರ ಸಂಖ್ಯೆ: ಪಿಡಿ 250 ಪಿಎಂಎಂ 2002, ದಿನಾಂಕ: 05–03–2002ರ ಪ್ರಕಾರ ಜಿಲ್ಲಾಧಿಕಾರಿಗಳ ವೈಯಕ್ತಿಕ ಖಾತೆ (ಪಿಡಿ ಅಕೌಂಟ್) ಯಲ್ಲಿ ಮೊದಲು ಜಮಾ ಮಾಡಿ ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು.

(3) ಈ ಬಿಡುಗಡೆಯಾದ ಮೊತ್ತಕ್ಕೆ ಜಿಲ್ಲಾಧಿಕಾರಿಗಳು ಆಯಾ ಶಾಸಕರಿಂದ ಕ್ರಿಯಾ ಯೋಜನೆಯನ್ನು ಪಡೆದು, ಸರ್ಕಾರದ ಆದೇಶ ಸಂಖ್ಯೆ: ಪಿಡಿ 486 ಪಿಎಂಎಂ 2001, ದಿನಾಂಕ: 6–07–2001 ರಲ್ಲಿ ಹಾಗೂ ತದನಂತರ ಹೊರಡಿಸಿದ ಪರಿಷ್ಕೃತ ಮಾರ್ಗಸೂಚಿಗಳಲ್ಲಿ ನೀಡಿರುವ ಸೂಚನೆಗಳಂತೆ ಅನುಷ್ಠಾನಗೊಳಿಸತಕ್ಕದ್ದು.

(4) ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು ಆಯಾ ಜಿಲ್ಲಾಧಿಕಾರಿಗಳ ಮೇಲು ಸಹಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದೆ ಹಾಗೂ ಬಿಡುಗಡೆ ಮಾಡಿದ ಅನುದಾನವನ್ನು ನಿಗದಿತ ಅವಧಿಯಲ್ಲಿ ಬಳಕೆ ಮಾಡಿಕೊಳ್ಳದಿದ್ದಲ್ಲಿ ಮುಂದಿನ ಕಂತಿನ ಹಣವನ್ನು ಬಿಡುಗಡೆ ಮಾಡಲಾಗುವುದಿಲ್ಲವೆಂದು ಸೂಚಿಸಿದೆ.

(5) ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4575–60–800–0–01–132 (ಬಂಡವಾಳ ವೆಚ್ಚಗಳು), "4575–60–800–0–01–422 (ವಿಶೇಷ ಘಟಕ ಯೋಜನೆ), ಹಾಗೂ "4575–60–800–0–01–423 (ಗಿರಿಜನ ಉಪಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

(6) ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 271 ವೆಚ್ಚ–6/2011 ದಿನಾಂಕ: 1–3–2012 ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರವೀಂದ್ರ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2(ಪ್ರ),

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಅನುಬಂಧ–1

**ಸರ್ಕಾರಿ ಆದೇಶ ಸಂಖ್ಯೆ: ಯೋಇ 69 ಯೋವಿವಿ 2012 ದಿನಾಂಕ: 21–03–2012**

| | ವಿಧಾನಸಭಾ ಕ್ಷೇತ್ರಗಳು | ಲೆಕ್ಕ ಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|
| | | 132–ಬಂಡವಾಳ ವೆಚ್ಚ | 422–ಎಸ್.ಸಿ.ಪಿ | 423–ಟಿ.ಎಸ್.ಪಿ | |
| 1) | **ಉಡುಪಿ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | |
| | ಕಾಪು | 2025000.00 | 882000.00 | 359000.00 | **3266000.00** |
| | ಉಡುಪಿ | 2025000.00 | 882000.00 | 359000.00 | **3266000.00** |
| | ಕುಂದಾಪುರ | 2025000.00 | 882000.00 | 359000.00 | **3266000.00** |
| | ಬೈಂದೂರು | 2025000.00 | 882000.00 | 359000.00 | **3266000.00** |
| | ಕಾರ್ಕಳ | 2025000.00 | 882000.00 | 359000.00 | **3266000.00** |
| | **ಒಟ್ಟು** | **10125000.00** | **4410000.00** | **1795000.00** | **16330000.00** |
| 2) | **ಚಿಕ್ಕಮಗಳೂರು ಜಿಲ್ಲೆಯ ವಿಧಾನ ಸಭಾ ಕ್ಷೇತ್ರಗಳು** | | | | |
| | ಶೃಂಗೇರಿ | 2025000.00 | 882000.00 | 359000.00 | **3266000.00** |
| | ಮೂಡಗೆರೆ | 2025000.00 | 882000.00 | 359000.00 | **3266000.00** |
| | ಚಿಕ್ಕಮಗಳೂರು | 2025000.00 | 882000.00 | 359000.00 | **3266000.00** |
| | ಕಡೂರು | 2025000.00 | 882000.00 | 359000.00 | **3266000.00** |
| | ತರೀಕೆರೆ | 2025000.00 | 882000.00 | 359000.00 | **3266000.00** |
| | **ಒಟ್ಟು** | **10125000.00** | **4410000.00** | **1795000.00** | **16330000.00** |
| | **ಒಟ್ಟು (1+2)** | **20250000.00** | **8820000.00** | **3590000.00** | **32660000.00** |

## ಅನುಬಂಧ–2

| | ವಿಧಾನಪರಿಷತ್ ಸದಸ್ಯರ ಹೆಸರುಗಳು | ಲೆಕ್ಕ ಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|
| | | 132–ಬಂಡವಾಳ ವೆಚ್ಚ | 422–ಎಸ್.ಸಿ.ಪಿ | 423–ಟಿ.ಎಸ್.ಪಿ | |
| 1) | **ಉಡುಪಿ ಜಿಲ್ಲೆ** | | | | |
| | ಕೆ. ಪ್ರತಾಪಚಂದ್ರ ಶೆಟ್ಟಿ | 2025000.00 | 882000.00 | 359000.00 | **3266000.00** |
| | ಡಾ: ವಿ. ಎಸ್. ಆಚಾರ್ಯ | 0.00 | 0.00 | 0.00 | **0.00** |
| | ಕೋಟ ಶ್ರೀನಿವಾಸ ಪೂಜಾರಿ | 2025000.00 | 882000.00 | 359000.00 | **3266000.00** |
| | **ಒಟ್ಟು** | 4050000.00 | 1764000.00 | 718000.00 | **6532000.00** |
| 2) | **ಚಿಕ್ಕಮಗಳೂರು ಜಿಲ್ಲೆ** | | | | |
| | ಮೋಟಮ್ಮ | 2025000.00 | 882000.00 | 359000.00 | **3266000.00** |
| | ವೈ.ಎಸ್.ವಿ. ದತ್ತ | 2025000.00 | 882000.00 | 359000.00 | **3266000.00** |
| | ಎ.ವಿ. ಗಾಯಿತ್ರಿ ಶಾಂತೇಗೌಡ | 2025000.00 | 882000.00 | 359000.00 | **3266000.00** |
| | ಎಂ. ಶ್ರೀನಿವಾಸ | 2025000.00 | 882000.00 | 359000.00 | **3266000.00** |
| | **ಒಟ್ಟು** | **8100000.00** | **3528000.00** | **1436000.00** | **13064000.00** |
| | **ಒಟ್ಟು (1+2)** | **12150000.00** | **5292000.00** | **2154000.00** | **19596000.00** |

(ಎಸ್. ರವೀಂದ್ರ ಕುಮಾರ್)

ಸರ್ಕಾರದ ಅಧೀನ ಕಾರ್ಯದರ್ಶಿ 1 &2,

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್. 1016

## ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಸಚಿವಾಲಯ

**ವಿಷಯ :** ಹೊಸ ನ್ಯಾಯಬೆಲೆ ಅಂಗಡಿಗಳನ್ನು ನಡೆಸಲು ಪ್ರಾಧಿಕಾರ ಮಂಜೂರು ಮಾಡಲು ಅರ್ಜಿ ಆಹ್ವಾನಿಸುವ ಬಗ್ಗೆ.

**ಸರ್ಕಾರದ ಆದೇಶ ಸಂ: ಆನಾಸ 11 ಎಫ್‌ಸಿಎಸ್ 2012, ಬೆಂಗಳೂರು, ದಿನಾಂಕ: 26ನೇ ಮಾರ್ಚಿ 2012.**

ಅನರ್ಹ ಪಡಿತರ ಚೀಟಿಗಳನ್ನು ಗುರುತಿಸಿ ರದ್ದುಪಡಿಸುವ ಪ್ರಕ್ರಿಯೆ ಜಾರಿಯಲ್ಲಿದ್ದ ಕಾರಣ, ಸರ್ಕಾರದ ಪತ್ರ ಸಂಖ್ಯೆ, ಆನಾಸ 04 ಎಫ್‌ಸಿಎಸ್ 2010, ದಿನಾಂಕ: 7.2.2011 ರಿಂದ ಹೊಸ ನ್ಯಾಯಬೆಲೆ ಅಂಗಡಿಗಳನ್ನು ಮಂಜೂರು ಮಾಡುವುದನ್ನು ನಿಲ್ಲಿಸಲಾಗಿತ್ತು. ಈಗ ಅನರ್ಹ ಪಡಿತರ ಚೀಟಿಗಳನ್ನು ಗುರುತಿಸುವ ಮತ್ತು ರದ್ದುಪಡಿಸುವ ಪ್ರಕ್ರಿಯೆ ಒಂದು ನಿರ್ಣಾಯಕ ಘಟ್ಟ ತಲುಪಿರುವುದರಿಂದ, ಹೊಸ ನ್ಯಾಯಬೆಲೆ ಅಂಗಡಿಗಳನ್ನು ಮಂಜೂರು ಮಾಡಲು ಜಿಲ್ಲಾಧಿಕಾರಿಗಳಿಗೆ ಅವಕಾಶ ಮಾಡಿಕೊಡಬೇಕೆಂದು ಉದ್ದೇಶಿಸಲಾಗಿರುತ್ತದೆ. ಆದರೆ, ಈ ರೀತಿ ಹೊಸ ನ್ಯಾಯಬೆಲೆ ಅಂಗಡಿಗಳನ್ನು ಮಂಜೂರು ಮಾಡುವ ಸಂದರ್ಭದಲ್ಲಿ ಮುಂಜಾಗ್ರತೆ ಕ್ರಮಗಳನ್ನು ವಹಿಸುವುದು ಸೂಕ್ತ ಹಾಗೂ ನ್ಯಾಯಬೆಲೆ ಅಂಗಡಿಗಳ ಮಂಜೂರಾತಿಗಾಗಿ ಆಹ್ವಾನಿಸಿದ ಅರ್ಜಿಗಳ ಪರಿಶೀಲನೆ ಮತ್ತು ಆಯ್ಕೆ ಪ್ರಕ್ರಿಯೆಗಳು ಕಾನೂನುಬದ್ಧವಾಗಿ ಮತ್ತು ಸಮಂಜಸವಾಗಿ ನಡೆಯುವಂತೆ ಸೂಕ್ತ ಮಾರ್ಗದರ್ಶನ ನೀಡುವುದು ಅಗತ್ಯ ಎಂದು ಪರಿಗಣಿಸಲಾಗಿದೆ.

ಯಾವುದೇ ಒಂದು ನ್ಯಾಯಬೆಲೆ ಅಂಗಡಿ ಆರ್ಥಿಕವಾಗಿ ಸಫಲ ಆಗಬೇಕಾದರೆ ಕನಿಷ್ಠ 500 ಬಿಪಿಎಲ್ ಪಡಿತರ ಚೀಟಿಗಳು ಇದ್ದಲ್ಲಿ ಮಾತ್ರ ಸಾಧ್ಯವಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ, ಮೂರು ಕಿ.ಮೀ ಅಂತರದಲ್ಲಿ ಅಷ್ಟು ಸಂಖ್ಯೆಯ ಪಡಿತರ ಚೀಟಿದಾರರು ಇಲ್ಲದೆ ಇದ್ದಲ್ಲಿ, ಸಂಖ್ಯೆಯನ್ನು ಅನಿವಾರ್ಯವಾಗಿ 300 ಕ್ಕೆ ಇಳಿಸಬಹುದು.

ರಾಜ್ಯದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿ ಇರುವ ನ್ಯಾಯಬೆಲೆ ಅಂಗಡಿಗಳಿಗೆ ಜೋಡಿಸಿರುವ ಪಡಿತರ ಚೀಟಿಗಳ ಸಂಖ್ಯೆಯನ್ನು ಪರಿಶೀಲಿಸಲಾಗಿ ಈ ಕೆಳಗಿನಂತೆ ವೈವಿಧ್ಯತೆಗಳನ್ನು ಗಮನಿಸಲಾಗಿದೆ:

1. ಒಬ್ಬ ವ್ಯಕ್ತಿಗೆ ಪ್ರಾಧಿಕಾರ ನೀಡಿದ ಹೆಚ್ಚಿನಾಂಶ ನ್ಯಾಯಬೆಲೆ ಅಂಗಡಿಗಳಿಗೆ ಆರ್ಥಿಕ ದೃಷ್ಟಿಯಿಂದ ಅಗತ್ಯವಿದ್ದಷ್ಟು ಅಥವಾ ಕಡಿಮೆ ಪಡಿತರ ಚೀಟಿಗಳು ಜೋಡಿಸಲ್ಪಟ್ಟಿರುತ್ತದೆ. ಅಂತಹ ಕಡೆಗಳಲ್ಲಿ ಹೊಸದಾಗಿ ನ್ಯಾಯಬೆಲೆ ಅಂಗಡಿ ತೆರೆಯಲು ಆಸ್ಪದವಿರುವುದಿಲ್ಲ.
2. ಕೆಲವು ಗ್ರಾಮ ಮತ್ತು ಪ್ರದೇಶಗಳಲ್ಲಿ ಒಂದಕ್ಕಿಂತ ಹೆಚ್ಚು ನ್ಯಾಯಬೆಲೆ ಅಂಗಡಿಗಳಿದ್ದು, ಅವುಗಳ ಪೈಕಿ, ಒಂದಕ್ಕೆ ಸಾಕಷ್ಟು ಸಂಖ್ಯೆಯಲ್ಲಿ ಪಡಿತರ ಚೀಟಿಗಳು ಜೋಡಿಸಲ್ಪಟ್ಟಿದ್ದರೂ, ಇನ್ನೊಂದಕ್ಕೆ ಸಾಕಷ್ಟು ಪಡಿತರ ಚೀಟಿಗಳು ಜೋಡಿಸಲ್ಪಟ್ಟಿರುವುದಿಲ್ಲ. ಅಂತಹ ಪ್ರಸಂಗಗಳಲ್ಲಿ ಹೆಚ್ಚಿಗೆ ಇರುವ ಅಂಗಡಿಯಿಂದ ಪಡಿತರ ಚೀಟಿಗಳನ್ನು ತೆಗೆದು ಕಡಿಮೆ ಇರುವ ಅಂಗಡಿಗೆ ಜೋಡಿಸುವುದು ಸೂಕ್ತವಾಗಿರುತ್ತದೆ. ಅಂತಹ ಕಡೆಗಳಲ್ಲಿಯೂ ಹೊಸದಾಗಿ ನ್ಯಾಯಬೆಲೆ ಅಂಗಡಿಗಳನ್ನು ತೆರಯುವುದು ಸೂಕ್ತವಲ್ಲ.
3. ಬಹಳ ಸಂಖ್ಯೆಯ ಗ್ರಾಮಗಳಲ್ಲಿ ವ್ಯವಸಾಯ ಸೇವಾ ಸಹಕಾರ ಸಂಘಗಳಿಗೆ ನ್ಯಾಯಬೆಲೆ ಅಂಗಡಿಗಳನ್ನು ನೀಡಲಾಗಿದ್ದು, ಗ್ರಾಮದ ರೈತರು ವ್ಯವಸಾಯ ಸೇವಾ ಸಹಕಾರ ಸಂಘಗಳ ಸದಸ್ಯರಾಗಿರುವುದರಿಂದಲೂ, ಅಂತಹ ಸಹಕಾರ ಸಂಘಗಳು ಬಹಳ ಸಂಖ್ಯೆಯಲ್ಲಿ ಸದಸ್ಯರನ್ನು ಹೊಂದಿ ಪಡಿತರ ವ್ಯವಸ್ಥೆಯಲ್ಲದೇ, ರಾಸಾಯನಿಕ ಗೊಬ್ಬರ, ಕೃಷಿ ಸಾಲ ಇತ್ಯಾದಿ ವ್ಯವಹಾರಗಳನ್ನು ಮಾಡುವುದರಿಂದಲೂ, ನ್ಯಾಯಬೆಲೆ ಅಂಗಡಿಯೂ ಸಹ ಸಮಂಜಸವಾಗಿ ನಡೆಯುತ್ತದೆ. ಆದ ಕಾರಣ, ವ್ಯವಸಾಯ ಸೇವಾ ಸಹಕಾರ ಸಂಘಗಳು ನಡೆಸುವ ನ್ಯಾಯಬೆಲೆ ಅಂಗಡಿಗಳಿಂದ ಬಲವಾದ ಕಾರಣ ಇಲ್ಲದೆ, ಪಡಿತರ ಚೀಟಿಗಳನ್ನು ತೆಗೆಯಬಾರದು ಅಥವಾ ಪ್ರತ್ಯೇಕಿಸಬಾರದು.
4. ವ್ಯವಸಾಯ ಸೇವಾ ಸಹಕಾರ ಸಂಘಗಳಿಗೆ ನೀಡಿದ ಸ್ಥಾನಮಾನವನ್ನು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿರುವ ಗ್ರಾಹಕರ ಸಹಕಾರ ಸಂಘಗಳಿಗೆ ನೀಡಲಾಗದು. ಕಾರಣ, ಹೆಚ್ಚಿನಾಂಶ ಗ್ರಾಹಕ ಸಹಕಾರ ಸಂಘಗಳು ಕನಿಷ್ಠ ಅಂದರೆ, 15–20 ಸದಸ್ಯರುಗಳನ್ನು ಒಳಗೊಂಡಿರುತ್ತದೆ. ಅಂತಹ ಸದಸ್ಯರು ಒಬ್ಬರಿಗೊಬ್ಬರು ಸಂಬಂಧಿಕರು ಅಥವಾ ಸ್ನೇಹಿತರಾಗಿರುತ್ತಾರೆ ಮತ್ತು ನ್ಯಾಯಬೆಲೆ ಅಂಗಡಿ ಬಿಟ್ಟರೆ ಬೇರೆ ವ್ಯವಹಾರ ಇರುವುದಿಲ್ಲ. ಅಂತಹ ಗ್ರಾಹಕರ ಸಹಕಾರ ಸಂಘಗಳನ್ನು ಒಬ್ಬ ವ್ಯಕ್ತಿಗೆ ನೀಡಿದ ಪ್ರಾಧಿಕಾರಕ್ಕೆ ಸಮಾನಾಂತರ ಎಂದು ಪರಿಗಣಿಸತಕ್ಕದ್ದು.
5. ಗ್ರಾಮೀಣ ಪ್ರದೇಶವಾಗಿದ್ದು 3 ಕಿ.ಮೀ. ವ್ಯಾಪ್ತಿಯಲ್ಲಿ ನ್ಯಾಯಬೆಲೆ ಅಂಗಡಿಗಳು ಇರದೆ ಇರುವ ಪ್ರಕರಣಗಳನ್ನು ಹೊರತುಪಡಿಸಿ, ಯಾವುದೇ ಗ್ರಾಮ ಅಥವಾ ನಗರ ಪ್ರದೇಶದಲ್ಲಿ 800 ಬಿ.ಪಿ.ಎಲ್ ಪಡಿತರ ಚೀಟಿಗಳು ಜೋಡಣೆಯಾಗದ ಹೊರತು ಹೊಸ ನ್ಯಾಯಬೆಲೆ ಅಂಗಡಿ ನೀಡಲು ಪರಿಗಣಿಸತಕ್ಕದ್ದಲ್ಲ. ಪಡಿತರ ಚೀಟಿಗಳ ಸಂಖ್ಯೆ 800 ದಾಟಿದಲ್ಲಿ ಹೊಸ ನ್ಯಾಯಬೆಲೆ ಅಂಗಡಿ ತೆರೆಯಬಹುದು. ಅಂತಹ ಸಂಧರ್ಭದಲ್ಲಿ ಹಳೆಯ ನ್ಯಾಯಬೆಲೆ ಅಂಗಡಿಯಲ್ಲಿ 500 ಪಡಿತರ ಚೀಟಿಗಳನ್ನು ಉಳಿಸಿ, ಮೀರಿದ ಪಡಿತರ ಚೀಟಿಗಳನ್ನು ಹೊಸ ಅಂಗಡಿಗೆ ಜೋಡಿಸಬೇಕು. ಉದಾಹರಣೆಗೆ, ಒಂದು ನ್ಯಾಯಬೆಲೆ ಅಂಗಡಿಯಲ್ಲಿ 850 BPL ಪಡಿತರ ಚೀಟಿಗಳು ಇದ್ದಲ್ಲಿ, ಹಳೆಯ ನ್ಯಾಯಬೆಲೆ ಅಂಗಡಿಯಲ್ಲಿ 500 ಪಡಿತರ ಚೀಟಿಗಳನ್ನು ಉಳಿಸಬೇಕು ಮತ್ತು ಹೊಸ ನ್ಯಾಯಬೆಲೆ ಅಂಗಡಿಗೆ 350 ಪಡಿತರ ಚೀಟಿಗಳನ್ನು ನೀಡಬೇಕು. APL ಪಡಿತರ ಚೀಟಿಗಳನ್ನು ಸಮನಾಗಿ ಹಂಚಿ ಹಾಕಬಹುದು. BPL ಪಡಿತರ ಚೀಟಿಗಳ ಸಂಖ್ಯೆ 1000 ಕ್ಕೂ ಮೀರಿ ಇದ್ದಲ್ಲಿ, ಸಮನಾಗಿ ಹಂಚಿ ಹಾಕಬಹುದು.

ಅರ್ಜಿಗಳನ್ನು ಆಹ್ವಾನಿಸಿದ ನಂತರ ಅರ್ಹತೆಗಳನ್ನು ಕರ್ನಾಟಕ ಅಗತ್ಯ ವಸ್ತುಗಳ (ಸಾರ್ವಜನಿಕ ಪದ್ಧತಿ ವಿತರಣಾ) ನಿಯಂತ್ರಣ ಆದೇಶ. 1992ರ ಪ್ರಕಾರ clause 5ರ ಆದ್ಯತೆಯನ್ನು ನಿಗದಿಪಡಿಸಿರುವಾಗ ಈ ಕೆಳಗಿನಂತೆ ಕ್ರಮಗಳನ್ನು ಅನುಸರಿಸಬೇಕು:–

i) ಸ್ತ್ರೀಶಕ್ತಿ ಸ್ವಸಹಾಯ ಸಂಘ, ಸಹಕಾರ ಸಂಘ ಮತ್ತು ಸಂಘ–ಸಂಸ್ಥೆಗಳ ಅರ್ಜಿಗಳನ್ನು ಪರಿಗಣಿಸುವಾಗ ಆಡಿಟ್ ವರದಿಗಳ ಆಧಾರದ ಮೇಲೆ ಆರ್ಥಿಕ ಸ್ಥಿತಿಯನ್ನು ನಿರ್ಧರಿಸುವಂತಿಲ್ಲ. ಏಕೆಂದರೆ ಆಡಿಟ್ ವರದಿಗಳನ್ನು ಸಂದರ್ಭಕ್ಕೆ ಅನುಸಾರವಾಗಿ ಸಿದ್ಧಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಅರ್ಜಿಗಳನ್ನು ಆಹ್ವಾನಿಸಿ ನೀಡಿದ ಪ್ರಕಟಣೆಯ ಹಿಂದಿನ ಒಂದು ವರ್ಷದಲ್ಲಿ ಅರ್ಜಿದಾರ ಸ್ತ್ರೀಶಕ್ತಿ ಸ್ವಸಹಾಯ ಸಂಘ, ಸಹಕಾರ

ಸಂಘ ಮತ್ತು ಸಂಘ ಸಂಸ್ಥೆಗಳ ಬ್ಯಾಂಕ್ ಖಾತೆಯ ದೃಢೀಕೃತ ಪ್ರತಿಯನ್ನು ಪರಿಶೀಲನೆಗಾಗಿ ಪಡೆಯತಕ್ಕದ್ದು. ಸದರಿ ಖಾತೆಯಲ್ಲಿ ಇರಬಹುದಾದ ಮೊತ್ತಗಳನ್ನು ಪರಿಗಣಿಸತಕ್ಕದ್ದು. "ಕೈಯಲ್ಲಿ"ರುವ (cash on hand) ಹಣವನ್ನು ಲೆಕ್ಕಕ್ಕೆ ತೆಗೆದುಕೊಳ್ಳುವಂತಿಲ್ಲ. ಅರ್ಜಿ ಆಹ್ವಾನಿಸಿದ ದಿನಾಂಕ ಮತ್ತು ನಂತರದ ದಿನಗಳಲ್ಲಿ ಖಾತೆಗೆ ಸಂದಾಯ ಮಾಡಿದ ಹಣವನ್ನು ಆದ್ಯತೆ ನಿಗದಿಪಡಿಸಲೋಸ್ಕರ ಲೆಕ್ಕಕ್ಕೆ ತಗೆದುಕೊಳ್ಳುವಂತಿಲ್ಲ. ಅರ್ಜಿದಾರ ಸಂಘ–ಸಂಸ್ಥೆಗಳು ಹಬ್ಬ– ಹುಣ್ಣಿಮೆಗಳಿಗಾಗಿ ಅಥವಾ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಸದಸ್ಯರಿಂದ ಅಥವಾ ದಾನಿಗಳಿಂದ ನಗದು ರೂಪದಲ್ಲಿ ಸಂಗ್ರಹಿಸಿದ ಮತ್ತು ಖಾತೆಗೆ ಜಮಾ ಮಾಡದ ಖರ್ಚನ್ನು ಲೆಕ್ಕಕ್ಕೆ ತೆಗೆದುಕೊಳ್ಳುವಂತಿಲ್ಲ. ಅರ್ಜಿದಾರ ಸಂಘ–ಸಂಸ್ಥೆಗಳ ಮೂಲಭೂತ ಉದ್ದೇಶ ಏನು ಎನ್ನುವುದನ್ನು, ಅವುಗಳ ಬೈಲಾ ಅಥವಾ ನೋಂದಣಿ ಆದೇಶದಲ್ಲಿ ತಿಳಿದುಕೊಂಡು, ಸದರಿ ಉದ್ದೇಶಕ್ಕೆ ಮಾಡಿದ ಜಮಾ–ಖರ್ಚನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

ii) ಅರ್ಜಿದಾರನ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಇರುವುದಿಲ್ಲ ಎಂದು ಸಾಬೀತುಪಡಿಸಲು ಯಾವುದೇ ಪೊಲೀಸ್ ಠಾಣೆಯ ವರದಿಯನ್ನು ಅವಲಂಬಿಸತಕ್ಕದ್ದಲ್ಲ. ಅರ್ಜಿದಾರರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಇರುವುದಿಲ್ಲ. ಅಥವಾ ಶಿಕ್ಷೆಗೆ ಗುರಿಯಾಗಿರುವುದಿಲ್ಲ ಎಂದು ಯಾವುದೇ ಒಂದು ಪೊಲೀಸ್ ಠಾಣೆಯ ಅಧಿಕಾರಿಯು ಪ್ರಮಾಣ ಪತ್ರ ನೀಡಿದ್ದರೂ, ಬೇರೆ ಒಂದು ಊರಿನಲ್ಲಿ ಕ್ರಿಮಿನಲ್ ಮೊಕದ್ದಮೆ ಇರುವುದಿಲ್ಲ ಅಥವಾ ಶಿಕ್ಷೆ ವಿಧಿಸಲ್ಪಟ್ಟಿರುವುದಿಲ್ಲವೆಂದು ಹೇಳಲಾಗದು. ಈ ವಿಷಯವನ್ನು ಖಚಿತಪಡಿಸಿಕೊಳ್ಳುವುದು ಜಿಲ್ಲಾಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ಆದುದರಿಂದ, ಈ ಬಗ್ಗೆ ಯಾವುದೇ ಪೊಲೀಸ್ ಠಾಣೆಯಿಂದ ಪ್ರಮಾಣ ಪತ್ರ ಬಯಸತಕ್ಕದ್ದಲ್ಲ ಅಥವಾ ಅರ್ಜಿದಾರರು ಪ್ರಮಾಣ ಪತ್ರ ಹಾಜರುಪಡಿಸಿಲ್ಲ ಎನ್ನುವ ಕಾರಣಕ್ಕಾಗಿ ಅರ್ಜಿಯನ್ನು ತಿರಸ್ಕರಿಸತಕ್ಕದ್ದಲ್ಲ.

iii) ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕದವರೆಗೆ ಬಂದ ಅರ್ಜಿದಾರರ ಹೆಸರು ಮತ್ತು ವಿಳಾಸಗಳ ಪಟ್ಟಿಯನ್ನು ಮಾಡಿ, ಅವರುಗಳಿಗೆ ಹೊಸ ನ್ಯಾಯಬೆಲೆ ಅಂಗಡಿಗಳನ್ನು ಮಂಜೂರು ಮಾಡುವ ಬಗ್ಗೆ ತಕರಾರುಗಳು ಇದ್ದರೆ ಸಲ್ಲಿಸಬಹುದು ಎಂದು 30 ದಿನಗಳ ಕಾಲಾವಕಾಶ ನೀಡಿ ಸದರಿ ಪ್ರದೇಶದಲ್ಲಿ ಜನಪ್ರಿಯವಿರುವ ಎರಡು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ನೀಡತಕ್ಕದ್ದು.

iv) ಅರ್ಜಿಗಳನ್ನು ಇಲಾಖೆಯ ವೆಬ್‌ಸೈಟ್‌ನಲ್ಲಿ ಒದಗಿಸಿರುವ ಪುಟಗಳಲ್ಲಿ 'ಆನ್ ಲೈನ್' ಆಗಿ ಸಲ್ಲಿಸಲು ತಿಳಿಸತಕ್ಕದ್ದು ಹಾಗೂ ಲಗತ್ತುಗಳನ್ನು ಸ್ಕ್ಯಾನ್ ಮಾಡಿ ಸಲ್ಲಿಸತಕ್ಕದ್ದು. ಮೂಲ ದಾಖಲೆಗಳನ್ನು ಅರ್ಜಿಗಳ ಪರಿಶೀಲನೆ ಸಂದರ್ಭದಲ್ಲಿ ತರಿಸಿಕೊಂಡು ನೋಡತಕ್ಕದ್ದು.

v) ಹೊಸದಾಗಿ ನೀಡುವ ನ್ಯಾಯಬೆಲೆ ಅಂಗಡಿಗಳನ್ನು ಯಾವ ಗ್ರಾಮದಲ್ಲಿ ಸ್ಥಾಪಿಸಲಾಗುವುದು ಮತ್ತು ಯಾವ ಗ್ರಾಮಕ್ಕೆ ಅಥವಾ ಪ್ರದೇಶದ ಪಡಿತರ ಚೀಟಿಗಳನ್ನು ಹೊಂದಾಣಿಕೆ ಮಾಡಲಾಗುವುದು ಎಂದು ಪ್ರಕಟಣೆಯಲ್ಲಿಯೇ ತಿಳಿಸತಕ್ಕದ್ದು. ಹೊಸ ನ್ಯಾಯಬೆಲೆ ಅಂಗಡಿ ರಚನೆ ಬಗ್ಗೆ ಮಾಹಿತಿಯನ್ನು ಜಿಲ್ಲಾಧಿಕಾರಿಗಳು ಸಿದ್ಧಪಡಿಸಿ 'ಆನ್‌ಲೈನ್' ಆಗಿ ಸಲ್ಲಿಸಿ ಆಯುಕ್ತರ ಅನುಮೋದನೆಯನ್ನು 'ಆನ್‌ಲೈನ್' ಆಗಿಯೆ ಪಡೆಯತಕ್ಕದ್ದು.

vi) ಸ್ತ್ರೀಶಕ್ತಿ ಸ್ವಸಹಾಯ ಸಂಘ ಮತ್ತು ಸಹಕಾರ ಸಂಘ ಮತ್ತು ಸಂಘ–ಸಂಸ್ಥೆಗಳು ನ್ಯಾಯಬೆಲೆ ಅಂಗಡಿ ಪಡೆಯಲೋಸ್ಕರ ಕೆಲವೆ ಜನರ ಸದಸ್ಯತ್ವದೊಂದಿಗೆ ರಚನೆಯಾಗಿರುವುದು ಕಂಡು ಬಂದಿರುತ್ತದೆ. ಗ್ರಾಮದ ಎಲ್ಲಾ ಪಡಿತರ ಚೀಟಿದಾರರು ಸದಸ್ಯರಾಗಿರುವುದಿಲ್ಲ. ಆದಕಾರಣ, ಸಹಕಾರ ಸಂಘಗಳು ಅಥವಾ ಸಂಘ–ಸಂಸ್ಥಗಳಿಗೆ ಕನಿಷ್ಠ ಶೇಕಡಾ 60 ಬಿಪಿಎಲ್ ಪಡಿತರ ಚೀಟಿದಾರರನ್ನು ಸದಸ್ಯರನ್ನಾಗಿ ಕಡ್ಡಾಯವಾಗಿ ಮಾಡತಕ್ಕದ್ದು ಮತ್ತು ಅವರಿಗೆ ಮತದಾನದ ಹಕ್ಕನ್ನು ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಮಹಾದೇವ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ.

ಪಿ.ಆರ್. 1017

## COMMERCE & INDUSTRIES SECRETARIAT

## CORRIGENDUM

No: CI 6 SPI 2012 Bangalore Dated: 27.03.2012

**Sub :** Sanction of incentives and concessions to sugar industries as per New Industrial Policy 2009-14 reg.

**Read :** 1. Government Order No: CI 6 SPI 2012, dated: 05.08.2011.

In the order portion of Government Order No: CI 6 SPI 2011, dated: 05.08.2011, the lines with **"The terms and conditions will be issued separately with the approval of SLCC"** may please be read as **"The above incentive is subject to the terms and conditions to be issued separately with the approval of SLCC".**

The other terms and conditions remain the same as in the G.O read at (1) above.

By Order and in the name of the Governor of Karnataka,

**Jyothi R.J**

Desk Officer (Technical Cell)

Commerce & Industries Depatment.

P.R. 1018

## COMMERCE & INDUSTRIES SECRETARIAT

**Sub :** Formation of PPP Cell in the Commerce and Industries Department under the IDD engagement reg.

**Read :** Letter from the Manager, Crisil Infrastructure Advisory, dated 22.03.2012

**Preamble :**

The Manager, Crisil Infrastructure Advisory, in his letter has proposed for the formation of PPP Cell in the Commerce and Industries Department under the IDD engagement.

Industrial infrastructure projects are of very complex in nature and often require large investments. Often, the department or the State Government may not be in a position of fund such projects due to various competing demands on its financial resources. Hence, public private partnerships (PPPs) are increasingly being looked upon as the best suitable option to develop such projects and bring in value for money for the department as well as the State.

However, for any PPP project to succeed, it is imperative that the ground work for such a transaction is as astute as is possible and ensures that the risk sharing mechanisms are well balanced. Such ground work requires that any project being conceptualized is closely watched across its development lifecycle. This ensures that the contours of the project are set right from the inception and increases the chances of the project succeeding multi-fold.

In the light of the above it is proposed that a PPP is constituted within the department. The PPP Cell will become a Key instrument in ensuring that all major projects emanating from the department are carefully evaluated and an appropriate decision is taken on whether the project should be under the PPP mode.

The proposal of the Manager, Crisil Infrastructure advisory has been verified in all aspects and hence the Order.

**GOVERNMENT ORDER NO. CI 27 SPI 2012, BANGALORE DATED: 28.03.2012**

Government is Pleased to approve the formation of the PPP Cell in the Commerce and Industries Department to take up the infrastructure projects of the Department in PPP mode.

| | |
|---|---|
| 1. Commissioner for Industrial Development and Director for Industries Commerce | Chairman |
| 2. Director (Technical Cell),Commerce & Industries | Member Secretary |
| 3. Chief Executive Officer, TECSOK | Member |
| 4. Nominee of the CEO, KIADB | Member |
| 5. Mr. N.R. Simha, Deputy General Maneger, KSIIDC | Member |
| 6. Nominee of KSSIDC. | Member |
| 7. Joint Director, O/o Commissioner for Industrial Development and Director for Industries & Commerce | Member |

The PPP Cell shall have the following objectives:

- Create a shelf of PPP Projects within the C & I departments;
- Review the projects identified under the PPP mode;
- Oversee and scrutinize the projects unde development;
- Facilitate projects in accessing various government support mechanisms;
- Deliberate on the policy framework requisite to foster investments in the State through PPP mode.

The PPP Cell would report into the Chairman of the PPP Cell. The PPP Cell is expected to undertake the following activities:

1) Create a Shelf of projects and recommend projects under PPP mode.
2) The cell would deliberate on project ideas and would develop a shelf of projects that are either conceived at the PPP Cell or have been conceptualized by the line departments/ boards of C & I. The shelf of projects will help the department in ensuring a pipeline of projects is available for potential investors at any point in time.
3) Once the shelf has been created, the Cell would deliberate on the shelf and recommend projects that could be developed under the PPP mode. The deliberations would focus on the need for the projects, value addition likely from the project, benefit to state and people and any other aspect necessary for consideration. The Cell will also recommend the way forward for the project in terms of the requisite studies required to be carried out to give the project a firm shape.
4) Develop internal guidelines for evaluation of Projects. The cell shall develop guidelines for evaluating the projects placed before it. The guidelines should focus upon the assessing whether the projects are to be funded by the government or are to be taken under the PPP route.

5) All the studies carried out for any project under the PPP mode would be reviewed and cleared by the cell. These would include pre-feasibility analysis, value for money analysis, feasibility analysis, project structuring etc. the reviews would essentially focus upon the quality of studies, completeness of the analysis, risk sharing frameworks and any other relevant aspect of the proposed transaction.

6) The procurement plans for projects under the PPP mode would be reviewed and cleared by the cell. The review would include proposed procurement process, mode of tendering (whether e- tendering), timelines proposed for procurement and any other aspect of the procurement process being proposed. Terms of Reference for PPP Cell.

7) Facilitate project placement under appropriate government schemes. The cell would facilitate the placement of any project under appropriate government schemes like the Viability Gap Funding (centre or state), India Infrastructure Project Deveopment Fund (IIPDF), project approval by State and Centre under PPP mode etc.

8) To enable this facilitation, the members within the cell are identified and made responsible for coordinating on various government schemes. For instance, one of the members of the cell could be responsible for all projects under the VGF mode.

9) There may be instances where the success of a project would hinge on a supporting policy framework. The cell would deliberate on the necessary policy interventions that are required to ensure that the project proceeds for implementation without hurdles and supporting policy environment is developed.

10) Nominate officers for exposure visits and training. In order to streamline PPPs in the department, it is imperative that a host of officers dealing with projects are exposed to the fundamentals of PPP and are also aware of what is required for a PPP project to succeed. In order to build capacities of the officers across various line departments/ boards, the PPP cell would, from time to time, nominate officers to for exposure visits and training on PPPs.

11) In the initial phase of formation, the PPP Cell meets once every two weeks so that progress on existing projects can be tracked as well as shelf creation and other activities are taken up on a regular basis.

12) The PPP cell can internally deliberate and fix a schedule of meetings as it deems appropriate.Minutes of the meeting shall be recorded for every meeting and would be circulated to all members of the cell as well as to key officers of the department.

By Order and in the name of the Governor of Karnataka,

**Jyothi R.J**

Desk Officer (Technical Cell)

P.R. 1019

Commerce & Industries Depatment.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಜೂನ್ 2012 ರಲ್ಲಿ ನಡೆಸಲು ಉದ್ದೇಶಿಸಲಾಗಿರುವ ವಿಶ್ವ ಬಂಡವಾಳ ಹೂಡಿಕೆದಾರರ ಸಮ್ಮೇಳನದ ಸಂದರ್ಭದಲ್ಲಿ ಮೆಗಾ ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ಭೂಮಿ, ನೀರು, ವಿದ್ಯುತ್ ಹಾಗೂ ವಿಶೇಷ ಉತ್ತೇಜನ, ರಿಯಾಯಿತಿಗಳನ್ನು ಮಂಜೂರು ಮಾಡುವುದಕ್ಕಾಗಿ ಸಂಪುಟ ಉಪ ಸಮಿತಿಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ:**

2010 ರ ವಿಶ್ವ ಬಂಡವಾಳ ಹೂಡಿಕೆದಾರರ ಸಮ್ಮೇಳನವು ಅಭೂತಪೂರ್ವ ಯಶಸ್ಸು ಕಂಡಿದ್ದು ಆ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು ರೂ. ನಾಲ್ಕು ಲಕ್ಷ ಕೋಟಿಗಳ ಬಂಡವಾಳ ಹೂಡಿಕೆಯನ್ನು ಆಕರ್ಷಿಸಲು ಸಾಧ್ಯವಾಯಿತು. ಈ ಯಶಸ್ಸಿನಿಂದಾಗಿ 2012ರ ಜೂನ್ 07,08 ರಂದು ಬೆಂಗಳೂರಿನಲ್ಲಿ ಇನ್ನೊಂದು ವಿಶ್ವ ಬಂಡವಾಳ ಹೂಡಿಕೆದಾರರ ಸಮ್ಮೇಳನವನ್ನು ಆಯೋಜಿಸಲು ನಿರ್ಧರಿಸಲಾಗಿರುತ್ತದೆ. 2012ರ ವಿಶ್ವ ಬಂಡವಾಳ ಹೂಡಿಕೆದಾರರ ಸಮ್ಮೇಳನದ ಸಂದರ್ಭದಲ್ಲಿ ರೂ 5 ಲಕ್ಷ ಕೋಟಿಗಳ ಬಂಡವಾಳ ಹೂಡಿಕೆಯನ್ನು ಆಕರ್ಷಿಸುವ ಹಾಗೂ 10 ಲಕ್ಷ ಉದ್ಯೋಗಾವಾಕಾಶವನ್ನು ಸೃಷ್ಟಿಸುವ ಗುರಿ ಇಟ್ಟುಕೊಳ್ಳಲಾಗಿರುತ್ತದೆ.

ಈ ಸಮ್ಮೇಳನವನ್ನು ಏರ್ಪಡಿಸಲು ಈಗಾಗಲೇ ವಿವಿಧ ಸಮಿತಿಗಳನ್ನು ರಚಿಸಲಾಗಿದ್ದು, ನಾಲೆಡ್ಜ್ ಪಾರ್ಟನರ್‌ನ್ನು ನೇಮಿಸಲಾಗಿರುತ್ತದೆ. 2012 ರ ವಿಶ್ವ ಬಂಡವಾಳ ಹೂಡಿಕೆದಾರರ ಸಮ್ಮೇಳನದ ಸಂದರ್ಭದಲ್ಲಿ ಬೃಹತ್ ಬಂಡವಾಳ ಹೂಡಿಕೆದಾರರಿಂದ ಉತ್ತಮ ಪ್ರತಿಕ್ರಿಯೆ ಸಿಗುವ ನಿರೀಕ್ಷೆ ಇರುತ್ತದೆ. ಬೃಹತ್ ಬಂಡವಾಳ ಹೂಡಿಕೆದಾರರ ಪ್ರಸ್ತಾವನೆಗಳಿಗೆ ಭೂಮಿ, ನೀರು, ವಿದ್ಯುತ್ ಮುಂತಾದ ಪೂರಕ ಸೌಲಭ್ಯಗಳನ್ನು ಶೀಘ್ರಗತಿಯಲ್ಲಿ ಮಂಜೂರು ಮಾಡುವುದು ಹಾಗೂ ವಿಶೇಷ ರಿಯಾಯಿತಿ ಮತ್ತು ಉತ್ತೇಜನಗಳನ್ನು ಮಂಜೂರು ಮಾಡುವುದು ಅತಿ ಅವಶ್ಯಕವಾಗಿರುತ್ತದೆ. ವಿವಿಧ ಇಲಾಖೆಗಳ ಅನುಮತಿಗಳನ್ನು ವಿಶೇಷ ಆಸಕ್ತಿಯನ್ನು ವಹಿಸಿ ಬೇಗ ಕೊಡಿಸಿಕೊಡುವುದು ಮುಖ್ಯವಾಗಿರುತ್ತದೆ. ಇಂತಹ ವಿಷಯಗಳಲ್ಲಿ ಸರ್ಕಾರದ ಶೀಘ್ರ ಪ್ರತಿಕ್ರಿಯೆ ಮೇಲೆ ಬೃಹತ್ ಬಂಡವಾಳ ಹೂಡಿಕೆದಾರರ ನಿರ್ಧಾರವು ಅವಲಂಬಿಸಿರುತ್ತದೆ.

ಕರ್ನಾಟಕ ಸೌಲಭ್ಯ (ಕೈಗಾರಿಕೆ) ಅಧಿನಿಯಮ 2002 ರನ್ವಯ ಬೃಹತ್ ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ಮೂಲಭೂತ ಸೌಕರ್ಯಗಳಾದ ಭೂಮಿ, ನೀರು ಮತ್ತು ವಿದ್ಯುತ್‌ಗಳನ್ನು ಹಂಚಿಕೆ ಮಾಡಲು ಈಗಾಗಲೇ ರಾಜ್ಯ ಉನ್ನತ ಮಟ್ಟದ ಅನುಮೋದನೆ ಸಮಿತಿಯು

ಅಸ್ತಿತ್ವದಲ್ಲಿದ್ದು ಅದರ ನಿರ್ಧಾರದಂತೆ ಅನುಮೋದಿತ ಪ್ರಸ್ತಾವನೆಗಳಿಗೆ ಶೀಘ್ರಗತಿಯಲ್ಲಿ ವಿವಿಧ ಇಲಾಖೆಗಳಿಂದ ಅನುಮತಿ ಸಿಗುವಂತೆ ನೋಡಿಕೊಳ್ಳಲು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲು ಸಚಿವ ಸಂಪುಟವು ಅನುಮೋದನೆ ನೀಡಿರುತ್ತದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 74 ಎಸ್‌ಪಿಐ 2012, ಬೆಂಗಳೂರು, ದಿನಾಂಕ: 26.03.012.**

ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿಯಿಂದ ಅನುಮೋದಿತಗೊಂಡ ಪ್ರಸ್ತಾವನೆಗಳಿಗೆ ಶೀಘ್ರಗತಿಯಲ್ಲಿ ವಿವಿಧ ಇಲಾಖೆಗಳಿಂದ ಅನುಮತಿ ಸಿಗುವಂತೆ ನೋಡಿಕೊಳ್ಳಲು ಈ ಕೆಳಕಂಡಂತೆ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2. | ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗರಿಕೆ ಇಲಾಖೆ | ಸದಸ್ಯರು |
| 3. | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 4. | ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ | ಸದಸ್ಯರು |
| 5. | ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ | ಸದಸ್ಯರು |
| 6. | ಪ್ರಧಾನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಇಲಾಖೆ | ಸದಸ್ಯರು |
| 7. | ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 8. | ಕಾರ್ಯದರ್ಶಿ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯರು |
| 9. | ಕಾರ್ಯದರ್ಶಿ (ಸಪ್ರಕೈ, ಜವಳಿ ಮತ್ತು ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 10. | ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ | ಸದಸ್ಯರು |
| 11. | ಡಿಜಿ ಮತ್ತು ಐಜಿಪಿ, ಕರ್ನಾಟಕ ರಾಜ್ಯ ಅಗ್ನಿ ಶಾಮಕ ಮತ್ತು ತುರ್ತು ಸೇವೆಗಳು | ಸದಸ್ಯರು |
| 12. | ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹಾಗೂ ಕಾರ್ಯಕಾರಿ ಸದಸ್ಯರು ಕೆ.ಐ.ಎ.ಡಿ.ಬಿ, ಬೆಂಗಳೂರು | ಸದಸ್ಯರು |
| 13. | ಆಯುಕ್ತರು; ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | ಸದಸ್ಯ ಕಾರ್ಯದರ್ಶಿ |

ಇಲಾಖಾ ಮುಖ್ಯಸ್ಥರು, ನಿಗಮ, ಮಂಡಳಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಸಂವಿಧಾನಿಕ ಪ್ರಾಧಿಕಾರಿಗಳ ಮುಖ್ಯಸ್ಥರು, ಜಿಲ್ಲಾ ಪಂಚಾಯತ್ ಮುಖ್ಯಸ್ಥರನ್ನೊಳಗೊಂಡಂತೆ ಗ್ರಾಮೀಣಾಭಿವೃದ್ಧಿ ಇಲಾಖೆಯ ಅಧಿಕಾರಿಗಳನ್ನು ಕೂಡ ಈ ಸಮಿತಿಯು ಅವಶ್ಯಕತೆಗೆ ತಕ್ಕಂತೆ ಆಹ್ವಾನಿಸಬಹುದಾಗಿದೆ ಹಾಗೂ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಅನುಮೋದನೆಗಳನ್ನು ದೊರಕಿಸಲು ಕ್ರಮ ಕೈಗೊಳ್ಳಬಹುದಾಗಿದೆ. ಈ ಸಮಿತಿಯು ಮೂರು ತಿಂಗಳಿಗೆ ಒಂದು ಬಾರಿಯಾದರೂ, ಅವಶ್ಯಕತೆ ಇದ್ದಲ್ಲಿ ಒಂದಕ್ಕಿಂತ ಹೆಚ್ಚು ಸಲ ಸಭೆ ಸೇರಿ ಅನುಮೋದಿತ ಪ್ರಸ್ತಾವನೆಗಳ ಅನುಷ್ಠಾನವನ್ನು ಪರಿಶೀಲಿಸಿ ವಿವಿಧ ಇಲಾಖೆಗಳಿಂದ ಅನುಮತಿ ಸಿಗುವಂತೆ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1020

**ಜ್ಯೋತಿ. ಆರ್.ಜೆ**

ಪೀಠಾಧಿಕಾರಿ (ತಾಂತ್ರಿಕ ಕೋಶ),

ವಾಣಿಜ್ಯ ಮತು ಕೈಗಾರಿಕೆ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಉತ್ತರ ವಲಯ, ಇವರ ಕಚೇರಿಗೆ ಬದಲಿ ಸ್ಥಳಾವಕಾಶ ನೀಡುವ ಬಗ್ಗೆ ಹಾಗೂ ಕಟ್ಟಡದ ಬಾಡಿಗೆಯನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ವಿದ್ಯುತ್ ಪರಿವೀಕ್ಷಕರವರ ಪತ್ರ ಸಂಖ್ಯೆ: ಮುವಿಪ/ಸಿಸ4/37591/11-12 ದಿನಾಂಕ: 28.02.2012.

2. ಲೋಕೋಪಯೋಗಿ ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಇಂ/ರಮತ್ತುಕ/ವಿವಿ/ಬೆಂ/ಬಾಡಿಗೆ ನಿಗದಿ/11-12/9098-99 ದಿನಾಂಕ: 11.01.2012.

3. ಶ್ರೀಮತಿ ಎಸ್.ಜಿ. ವಿಜಯಲಕ್ಷ್ಮಿ, ಕಟ್ಟಡದ ಮಾಲೀಕರು ಇವರ ಪತ್ರ ದಿನಾಂಕ : 07-09-2011.

4. ಶ್ರೀಮತಿ ಎಸ್.ಜಿ. ವಿಜಯಲಕ್ಷ್ಮಿ, ಕಟ್ಟಡದ ಮಾಲೀಕರು, ಇವರ ಪತ್ರ ದಿನಾಂಕ: 21.09.2011 ಮತ್ತು 20.01.2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾ ಇಲಾಖೆ, ಬೆಂಗಳೂರು ಉತ್ತರ ವಲಯ ಇವರ ಕಚೇರಿಯ ದಿನಾಂಕ: 05.01.2009 ರಿಂದ ಮೈತ್ರಿ ಕಲ್ಯಾಣ ಮಂಟಪ, ಸಂಕೀರ್ಣ 1263/4, ಮಾಗಡಿ ರಸ್ತೆ, ಬೆಂಗಳೂರು ಇವರ

ಸ್ವಾಮ್ಯದ ಕಟ್ಟಡದ 2ನೇ ಮಹಡಿಯಲ್ಲಿ ದಿನಾಂಕ: 05.01.2009 ರಿಂದ ಕಾರ್ಯನಿರ್ವಹಿಸಿಕೊಂಡು ಬರಲಾಗುತ್ತಿದ್ದು, ಮೂರು ವರ್ಷಗಳ ಅವಧಿ ಬಾಡಿಗೆ ಕರಾರು ಒಪ್ಪಂದವಿದ್ದು, ಈ ಅವಧಿಯು ದಿನಾಂಕ: 04.01.2012 ಕ್ಕೆ ಪೂರೈಸಿದೆ ಎಂದು ತಿಳಿಸಿದ್ದಾರೆ. ಈ ಕಟ್ಟಡದಲ್ಲಿ ಲೀಸ್ ಅವಧಿಯು ಮುಗಿದಿರುವುದರಿಂದ ಕಟ್ಟಡವನ್ನು ತೆರವುಗೊಳಿಸುವಂತೆ ಕಟ್ಟಡದ ಮಾಲೀಕರು ಲೀಗಲ್ ನೋಟಿಸ್ ನೀಡಿರುತ್ತಾರೆ. ಡಾ॥ ರಾಜಕುಮಾರ್ ರಸ್ತೆ, ರಾಜಾಜಿನಗರ, ಇಲ್ಲಿ ಶ್ರೀಮತಿ ಎಸ್.ಜಿ. ವಿಜಯಲಕ್ಷ್ಮಿಯವರ ಒಡೆತನದಲ್ಲಿರುವ 1ನೇ ಮಹಡಿಯಲ್ಲಿರುವ 2/3 ಮತ್ತು 2/4 ನ್ನು ಗುರುತಿಸಿ ಕಚೇರಿ ಕೆಲಸಕ್ಕೆ ಅನುಕೂಲವಾಗಿರುವುದರಿಂದ ಕ್ರಮ ಸಂಖ್ಯೆ: 2 ರಲ್ಲಿ ಓದಲಾದ ಪತ್ರದಲ್ಲಿ ಲೋಕೋಪಯೋಗಿ ಇಲಾಖೆಯು ಪರಿವೀಕ್ಷಿಸಿ ಲೆಕ್ಕಾಚಾರ ಮಾಡಿ 1ನೇ ಮಹಡಿಯಲ್ಲಿರುವ ಸಂಖ್ಯೆ: 2/3 ರಲ್ಲಿರುವ 4003.00 ಚದರ ಅಡಿ ಇರುವ ಸ್ಥಳಕ್ಕೆ ರೂ. 59,900/– ಹಾಗೂ ಅದೇ ಮಹಡಿಯಲ್ಲಿರುವ 3722.38 ಚದರ ಅಡಿ ಇರುವ ಸಂಖ್ಯೆ 2/4 ರಲ್ಲಿ ರೂ. 53.500/– ಮಾಸಿಕ ಬಾಡಿಗೆಯನ್ನಾಗಿ ನಿಗದಿಪಡಿಸಿದ್ದಾರೆ. ಒಟ್ಟು ಕಚೇರಿಯ ಫ್ಲಿಂತ್ ಜಾಗವು 7725 ಚದರ ಅಡಿಗಳಾಗಿದ್ದು, ಮಾಸಿಕ ಬಾಡಿಗೆಯು ಒಟ್ಟು ರೂ. 1,13,400/–ಗಳಾಷ್ಟಗುತ್ತದೆ. ಉಲ್ಲೇಖಿತ ಕ್ರಮ ಸಂಖ್ಯೆ: 4 ರಲ್ಲಿ ಕಟ್ಟಡದ ಮಾಲೀಕರಾದ ಶ್ರೀಮತಿ ಎಸ್.ಜಿ. ವಿಜಯಲಕ್ಷ್ಮಿಯವರು ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸಿರುವ ಬೆಲೆಗೆ ಒಪ್ಪಿಗೆಯನ್ನು ಸೂಚಿಸಿದ್ದಾರೆ ಹಾಗೂ ಕ್ರಮ ಸಂಖ್ಯೆ 4 ರ ಪತ್ರದಲ್ಲಿ ಕಚೇರಿಗೆ ಪ್ರತ್ಯೇಕ ವಾಹನ ನಿಲುಗಡೆ ನೀರು, ಸರಬರಾಜು, ಜನರೇಟರ್ ಬ್ಯಾಕಪ್ ಮತ್ತು ಲಿಫ್ಟ್ ಸೌಲಭ್ಯ ನೀಡಲು ಸಹ ಸಮ್ಮತಿಸಿರುತ್ತಾರೆ.

ಸದರಿ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಉತ್ತರ, ಇವರ ಕಚೇರಿಗೆ ಹೆಚ್ಚುವರಿ ಅಧಿಕಾರಿ/ಸಿಬ್ಬಂದಿಗಳ ನೇಮಕಗೊಂಡಿದ್ದು, ಕಾರ್ಯನಿರ್ವಹಿಸಲು ಹಾಲಿ ಸ್ಥಳಾವಕಾಶ ಕಡಿಮೆ ಇರುತ್ತದೆ ಹಾಗೂ ಈಗ ಪ್ರಸ್ತಾಪಿಸಿರುವ ಪುನರ್‌ವಿಂಗಡನೆಯಲ್ಲಿ ಹೆಚ್ಚುವರಿ ಮಂಜೂರಾಗಿರುವ ಹುದ್ದೆಗಳನ್ನು ಸಹ ಹೊಸದಾಗಿ ಗುರುತಿಸಿರುವ ಕಟ್ಟಡದಲ್ಲಿ ಅಳವಡಿಸಬಹುದಾಗಿರುವುದರಿಂದ ಸದರಿ ಕಟ್ಟಡವು ಸೂಕ್ತವಾಗಿದೆ ಎಂದು ಮುಖ್ಯ ವಿದ್ಯುತ್ ಪರಿವೀಕ್ಷಕರು ಅಭಿಪ್ರಾಯ ಪಟ್ಟಿದ್ದಾರೆ ಮತ್ತು ಈ ಕಟ್ಟಡವನ್ನು ಬಾಡಿಗೆಗೆ ಪಡೆಯಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 49 ಇಬಿಎಸ್ 2012, ಬೆಂಗಳೂರು, ದಿನಾಂಕ: 24.03.2012**

ಹಾಲಿ ಮೈತ್ರಿ ಕಲ್ಯಾಣ ಮಂಟಪ, ಸಂಕೀರ್ಣ 1263/4, 2ನೇ ಮಹಡಿ, ಮಾಗಡಿ ರಸ್ತೆ, ಬೆಂಗಳೂರು, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು, ಇವರ ಕಚೇರಿಯನ್ನು ಡಾ॥ ರಾಜಕುಮಾರ್ ರಸ್ತೆ, ರಾಜಾಜಿನಗರದಲ್ಲಿ ಶ್ರೀಮತಿ ಎಸ್.ಜಿ. ವಿಜಯಲಕ್ಷ್ಮಿ ಇವರ ಸ್ವಾಮ್ಯದ ಕಟ್ಟಡಕ್ಕೆ (ಸಂಖ್ಯೆ: 2/3 ಮತ್ತು 2/4) ಸ್ಥಳಾಂತರಿಸಲು ಹಾಗೂ ಸದರಿ ಕಟ್ಟಡಕ್ಕೆ ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರು ನಿಗದಿಪಡಿಸಿರುವಂತೆ ಮೊದಲನೇ ಮಹಡಿಯಲ್ಲಿರುವ 4003.00 ಚದರ ಅಡಿ ಸಂಖ್ಯೆ 2/3 ರಲ್ಲಿ ಮಾಸಿಕ ರೂ. 59,900/– ಬಾಡಿಗೆ ಹಾಗೂ ಅದೇ ಮಹಡಿಯಲ್ಲಿರುವ ಸಂಖ್ಯೆ 2/4 ರಲ್ಲಿ 3722.38 ಚದರ ಅಡಿ ಜಾಗಕ್ಕೆ ರೂ. 53,500/– ಮಾಸಿಕ ಬಾಡಿಗೆಯನ್ನು ನಿಗದಿಪಡಿಸಿ ಪಾವತಿಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅನುಮತಿ ನೀಡಲಾಗಿದೆ.

1. ಸದರಿ ಕಟ್ಟಡದ ಸ್ಥಳಾವಕಾಶಕ್ಕೆ ಸೇವಾ ತೆರಿಗೆಯನ್ನು ಹಾಗೂ ಇತರೆ ವಿಧಿಸಲಾಗುವ ತೆರಿಗೆಯನ್ನು ಕಟ್ಟಡದ ಮಾಲೀಕರೇ ಭರಿಸತಕ್ಕದ್ದು.
2. ಸದರಿ ಕಚೇರಿಗೆ ನೀರು ಸರಬರಾಜು, ಲಿಫ್ಟ್, ಜನರೇಟರ್ ಹಾಗೂ ವಾಹನ ನಿಲುಗಡೆಯ ಸೌಲಭ್ಯವನ್ನು ಕಟ್ಟಡದ ಮಾಲೀಕರೇ ಉಚಿತವಾಗಿ ಒದಗಿಸತಕ್ಕದ್ದು.
3. ಬಾಡಿಗೆಗೆ ಸಂಬಂಧಿಸಿದಂತೆ ತಗಲುವ ವೆಚ್ಚವನ್ನು ವಿದ್ಯುತ್ ಪರಿವೀಕ್ಷಣಾ ಇಲಾಖೆಯು ಆಯವ್ಯಯದಲ್ಲಿ ಲಭ್ಯವಿರುವ ಅಂದಾಜು ಮಿತಿಯೊಳಗೆ ಭರಿಸತಕ್ಕದ್ದು ಹಾಗೂ ಈ ಪ್ರಸ್ತಾವನೆಗೆ ಹೆಚ್ಚುವರಿ ಅನುದಾನವನ್ನು ಕೋರುವಂತಿಲ್ಲ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.96 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1021

**ಸಮೀರ್ ಮಡಿಮನ್**

ಪೀಠಾಧಿಕಾರಿ

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಮಂಜೂರಾಗಿರುವ 43.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 150 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಅರವಿಂದ್ ವಿ ಜೋಷಿ ಮತ್ತು ಕಂಪನಿರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಡಿಇ 98 ಎನ್‌ಸಿಇ 2000 ದಿನಾಂಕ : 10–07–2000.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 102 ಎನ್‌ಸಿಇ 2005 ದಿನಾಂಕ : 21.4.2005.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಎನ್‌ಸಿಇ 2007 ದಿನಾಂಕ: 16.4.2007.

4)ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/AVJ & Co-1.50 MW (SEL-43.50 MW)/2012/861 ದಿನಾಂಕ: 15/16.03.2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶದಲ್ಲಿ ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಬೆಳಗಾವಿ, ಬಳ್ಳಾರಿ ಹಾಸನ ಮತ್ತು ಚಿತ್ರದುರ್ಗ ಜಿಲ್ಲೆಗಳ ವಿವಿಧ ಗ್ರಾಮಗಳಲ್ಲಿ ಈ ಕೆಳಕಂಡಂತೆ ಒಟ್ಟು 98 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

| Wind Zone and locations Dist. | & Locations | Allotted capacity in MW |
|---|---|---|
| Belgaum | 1. Chikodi | 19 |
| | 2. Hanumanahatti | 26 |
| Bellary | 1. Sogi (South) | 09 |
| | 2. Gujanur | 03 |
| Hassan | 1. Haradanahalli | 23 |
| Chitradurga | 1. Jogimatti-1 | 18 |
| Total Capacity | | 98 |

ಹಾಗೆ ಹಂಚಿಕೆ ಮಾಡಿದ ಪವನ ವಿದ್ಯುತ್ ಯೋಜನೆಯಲ್ಲಿ, ಹಾಸನ ಜಿಲ್ಲೆಯ ಹರದನಹಳ್ಳಿ ಗಾಳಿ ವಲಯ ಪ್ರದೇಶದಲ್ಲಿ ಹಂಚಿಕೆ ಮಾಡಿದ್ದ 23.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಈ ಕೆಳಗೆ ವಿವರಿಸಿರುವಂತೆ 84.9 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

| Sl. No. | Geographically Sanctioned areas | | Sanctioned capacities vide Government Order No. DE 98 NCE 2000 dated 10.7.2000 | Proposed rating of WTGs | Enhancement of capacity proposed in Stage-1 | Total capacity including proposed enchancement |
|---|---|---|---|---|---|---|
| 1 | Hassan Haradanahalli 23 | Madurgudda-57 D/1 with peaks 1068, 1008 & 1007M | 4.9 MW | 600 KW | 12.5 MW | 17.40 MW |
| 2 | | West of Billenahalli & east of Kodihalli 57 C/4 | 7.6 MW | 1500 KW | 13.4 MW | 21 MW |
| 3 | | Somarigudda & Southward ridge- 57 C/4 | 4.2 MW | 1500 KW | 21.3 MW | 25.5 MW |
| 4 | | Siege Gudda Southern Shoulder 57 C/4 | 4.9 MW | 1500 KW | 16.1 MW | 21 MW |
| 5 | | Kondali betta 57 C/4 | 1.4 MW | No Subject for enhancement | | |
| **TOTAL** | | | **23 MW** | | **63.3 MW** | **84.9 MW** |

ಮೇಲಿನಂತೆ ಹೆಚ್ಚಿಸಲಾದ ಸಾಮರ್ಥ್ಯದಲ್ಲಿ ಮದ್ದೂರುಗುಡ್ಡ ಪ್ರದೇಶದಲ್ಲಿ ಹೆಚ್ಚಿಸಿರುವ ಆಂಶಿಕ ಸಾಮರ್ಥ್ಯವಾದ 17.4 ಮೆಗಾ ವ್ಯಾಟ್ ಸಾಮರ್ಥ್ಯವನ್ನು 43.50 ಮೆಗಾ ವ್ಯಾಟ್‌ಗೆ ಸಾಮರ್ಥ್ಯಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಹಾಸನ ಜಿಲ್ಲೆಯ ಮದ್ದೂರ್‌ಗುಡ್ಡ ಪ್ರದೇಶದಲ್ಲಿ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಸಿರುವ 43.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 1.50 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ॥ ಅರವಿಂದ್ ವಿ ಜೋಷಿ ಮತ್ತು ಕಂಪನಿರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಜಮೀನು ಅರಣ್ಯ ಪ್ರದೇಶವಾಗಿದ್ದು, ಈ ಯೋಜನೆಯನ್ನು 31.03.2012ರೊಳಗೆ ಅನುಷ್ಠಾನಗೊಳಿಸಲಿದ್ದು, ಉತ್ಪಾದನೆ ಆಗುವ ವಿದ್ಯುತ್ತನ್ನು ಖರೀದಿ ಒಪ್ಪಂದದ ಮೂಲಕ ಎಸ್ಕಾಂಗೆ ಸರಬರಾಜು ಮಾಡಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 130 ಎನ್‌ಸಿಇ 2012, ಬೆಂಗಳೂರು, ದಿನಾಂಕ: 26.03.2012**

ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಹಾಸನ ಜಿಲ್ಲೆಯ, ಮದ್ದೂರ್‌ಗುಡ್ಡ ಪ್ರದೇಶದಲ್ಲಿ ಮಂಜೂರಾಗಿರುವ 43.50 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 1.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಅರವಿಂದ್ ವಿ ಜೋಷಿ ಮತ್ತು ಕಂಪನಿರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ.

**Land Details of the Project**

| Village Name | Taluk/District | MW | Land Survey Number | No of WTGs | Exent in Land (Acres) | WTG Number | Lattitude, Longitude and Ridge peaks |
|---|---|---|---|---|---|---|---|
| Sigaranahalli | Holenarasipura / Hassan | 1.5 | 53 | 1.No. | 0.25 Hectares per WTG | MG-18 | Latitude : $12^0$51'29.5" N – Longitude : $76^0$ 12'55.3" E Ridge peaks : 1007m. |

1. ಮೆ॥ ಅರವಿಂದ್ ವಿ ಜೋಷಿ ಮತ್ತು ಕಂಪೆನಿ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಮೆ॥ ಅರವಿಂದ್ ವಿ ಜೋಷಿ ಮತ್ತು ಕಂಪೆನಿ ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
3. ಸದರಿ ಯೋಜನೆಯನ್ನು ದಿನಾಂಕ 31.3.2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 1022

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಜನಸ್ಪಂದನ ಕೋಶ) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 51 ಸಸಿವಿ 03 ದಿನಾಂಕ: 17–06–2003.
2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 51 ಸಸಿವಿ 03 ದಿನಾಂಕ: 23–12–2003.
3) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 24 ಸಸಿವಿ 06 ದಿನಾಂಕ: 20–03–2006.
4) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 30 ಸಸಿವಿ 07 ದಿನಾಂಕ: 21–05–2007.
5) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 543 ಸಅಸೇ 2007 ದಿನಾಂಕ: 11–06–2008.
6) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 212 ಸಅಸೇ 2010 ದಿನಾಂಕ: 26.04.2010.
7) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 310 ಎಸ್‌ಎಎಸ್ 2008 ದಿನಾಂಕ: 16.09.2009.
8) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 212 ಸಅಸೇ 2010 ದಿನಾಂಕ: 15.04.2011.
9) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಜನಸ್ಪಂದನ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 183 ಜಸ್ಪಕೋ–ಎ 2010 ದಿನಾಂಕ: 19.07.2010 ಮತ್ತು 14.01.2011.

**ಪ್ರಸ್ತಾವನೆ :**

ಮೇಲೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ ದೂರುಗಳು) ಹುದ್ದೆಯನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಎರಡು ವರ್ಷಗಳ ಅವಧಿಗೆ ಸೃಜಿಸಲಾಗಿದ್ದು ಹಾಗೂ ಕಾಲಕಾಲಕ್ಕೆ ಈ ಹುದ್ದೆಗಳನ್ನು ಮುಂದುವರಿಸಿಕೊಂಡು ಬರಲಾಗಿದೆ. ಮೇಲೆ ಕ್ರಮ ಸಂಖ್ಯೆ: (8)ರಲ್ಲಿ ಓದಲಾದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 25–05–2011 ರಿಂದ 1 ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಮೇಲೆ (9) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜನಸ್ಪಂದನ) ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಆದೇಶದಲ್ಲಿ (Cader Post) (ವೃಂದ ಹುದ್ದೆ) ಎಂದು ಗುರುತಿಸಿ ಆದೇಶ ಹೊರಡಿಸಿರುವುದರಿಂದ, ಸದರಿ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆಯ ಪೂರಕ ಸಿಬ್ಬಂದಿ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಲಾಗಿದೆ. ಈ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 212 ಸಅಸೇ 2010 ಬೆಂಗಳೂರು, ದಿನಾಂಕ: 27ನೇ ಮಾರ್ಚ್ 2012**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನ ಕೋಶ) ಯವರ ಆಪ್ತ ಶಾಖೆಯಲ್ಲಿನ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 26–05–2011 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ | 1 |
| 2. | ಪತ್ರಾಂಕಿತ ಆಪ್ತ ಸಹಾಯಕ/ಹಿರಿಯ ಶೀಘ್ರಲಿಪಿಗಾರ | 1 |
| 3. | ಶಾಖಾಧಿಕಾರಿ/ಹಿರಿಯ ಸಹಾಯಕ | 1 |
| 4. | ಶೀಘ್ರಲಿಪಿಗಾರರು | 1 |
| 5. | ಕಿರಿಯ ಸಹಾಯಕ | 1 |
| 6. | ದಲಾಯತ್ | 2 |
| 7. | ವಾಹನ ಚಾಲಕ | 1 |
| | **ಒಟ್ಟು** | **08** |

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಆಇ 84 ವೆಚ್ಚ 12/2012 ದಿನಾಂಕ : 29–02–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್.1023

## ಒಳಾಡಳಿತ ಸಚಿವಾಲಯ

ವಿಷಯ : 13ನೇ ಆರ್ಥಿಕ ಹಣಕಾಸು ಆಯೋಗದಡಿ ಕೈಗೊಳ್ಳಬೇಕಾದ ಕಾಮಗಾರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

ಓದಲಾಗಿದೆ : 1) ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 7 ಪಿಎಫ್ಎಸ್ 20110, ದಿನಾಂಕ 14/03/2012.
2) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: F.11(22)/FCD/2010, Dated: 14/03/2012.
3) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ FD 01 FCC 2011, Dated: 21/03/2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 13ನೇ ಆರ್ಥಿಕ ಹಣಕಾಸು ಯೋಜನೆಯಡಿಯಲ್ಲಿ ಅನುಮೋದಿತ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು ರೂ. 10.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕೇಂದ್ರ ಸರ್ಕಾರವು 13ನೇ ಆರ್ಥಿಕ ಹಣಕಾಸು ಆಯೋಗದಡಿ ಅನುಮೋದನೆಗೊಂಡ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು 2011–12ನೇ ಸಾಲಿಗೆ ರೂ. 3750.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಿರುತ್ತದೆ.

ಮೇಲೆ ಓದಲಾದ (3)ರ ಅನಧಿಕೃತ ಟಿಪ್ಪಣಿಯಲ್ಲಿ 13ನೇ ಆರ್ಥಿಕ ಹಣಕಾಸು ಆಯೋಗದಡಿ ಅನುಮೋದನೆಗೊಂಡ ಪೋಲೀಸ್ ತರಬೇತಿ ಕಾರ್ಯಕ್ರಮಗಳಿಗೆ ಬಳಸಿಕೊಳ್ಳಲು ಕೇಂದ್ರ ವಿತ್ತ ಸಚಿವಾಲಯವು ರೂ. 37.50 ಕೋಟಿಗಳ ಅನುದಾನವನ್ನು ಮಂಜೂರು ಮಾಡಿರುತ್ತದೆ. ಆದ್ದರಿಂದ ಸದರಿ ಅನುದಾನದಲ್ಲಿ ಈಗಾಗಲೇ ಬಿಡುಗಡೆ ಮಾಡಿರುವ ರೂ. 10.00 ಕೋಟಿಗಳನ್ನು ಹೊರತುಪಡಿಸಿ ಉಳಿದ ಬಾಕಿ ರೂ. 27.50 ಕೋಟಿಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ 2055–00–003–0–06, XIII Finance Commission Grants-059 other expenditure (plan) ಅಡಿಯಲ್ಲಿ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಮಂಜೂರಾತಿ ನೀಡಿರುತ್ತದೆ.

ಆರ್ಥಿಕ ಇಲಾಖೆಯು ನೀಡಿರುವ ಅನುಮೋದನೆಯಂತೆ 2011–12ನೇ ಸಾಲಿನಲ್ಲಿ ಕಲ್ಪಿಸಿರುವ ರೂ. 37.50 ಕೋಟಿಗಳ ಅನುದಾನದಲ್ಲಿ ಈಗಾಗಲೇ ಬಿಡುಗಡೆ ಮಾಡಿರುವ ರೂ. 10.00 ಕೋಟಿಗಳನ್ನು ಹೊರತುಪಡಿಸಿ ಉಳಿದ ಬಾಕಿ ರೂ. 27.50 ಕೋಟಿಗಳನ್ನು ಬಿಡುಗಡೆ ಮಾಡಲು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 07 ಪಿಎಫ್‌ಎಸ್ 2010, ಬೆಂಗಳೂರು, ದಿನಾಂಕ: 27/03/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 13ನೇ ಆರ್ಥಿಕ ಹಣಕಾಸು ಯೋಜನೆಯಡಿಯಲ್ಲಿ 2011–12ನೇ ಸಾಲಿಗೆ ಸಂಬಂಧಿಸಿದ ಅನುಮೋದಿತ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು ರೂ. 27.50 ಕೋಟಿಗಳನ್ನು (ಇಪ್ಪತ್ತೇಳು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–003–0–06, XIII Finance Commission Grants-059 other expenditure (plan) ಇದರಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 01 ಎಫ್‌ಸಿಸಿ 11, ದಿನಾಂಕ: 21/03/2012ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಪಿ.ಆರ್.1024

## ಒಳಾಡಳಿತ ಸಚಿವಾಲಯ

ವಿಷಯ : ಕರಾವಳಿ ಕಾವಲು ಪೊಲೀಸ್ ಠಾಣೆ/ಹೊರಠಾಣೆ ಹಾಗೂ ಚೆಕ್‌ಪೋಸ್ಟ್‌ಗಳನ್ನು ಹಂತ–2 ರಲ್ಲಿ ಹೊಸದಾಗಿ ಸೃಜಿಸುವ ಬಗ್ಗೆ.

ಓದಲಾಗಿದೆ : (1) ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ 106 ಪಿಓಪಿ 2011 ದಿನಾಂಕ: 20–07–2011.

(2) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರದ ಸಂಖ್ಯೆ:ಆರ್.ಎಲ್.ಎನ್[3]3/2009–10 ದಿನಾಂಕ: 09–01–2012.

**ಪ್ರಸ್ತಾವನೆ :**

ಮೇಲೆ[1] ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಜಮಾಡಿ, ಗಂಗೊಳ್ಳಿ, ಹೊನ್ನಾವರ ಮತ್ತು ಬೇಲೇಕೇರಿ ಪೊಲೀಸ್ ಠಾಣೆಗಳಿಗೆ 52 ತಾಂತ್ರಿಕ ಹುದ್ದೆಗಳು (4 ಬೋಟುಗಳಿಗೆ) ಮತ್ತು 58 ಇತರೆ ಸಿಬ್ಬಂದಿ ಅಧಿಕಾರಿ ಹುದ್ದೆಗಳನ್ನು ಸೃಜಿಸಲು ಹಾಗೂ ಉಳಿದ 110 ಹುದ್ದೆಗಳನ್ನು ಮರು ನಿಯೋಜನೆ ಮೂಲಕ ತುಂಬಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಪತ್ರದಲ್ಲಿ ಮ.ನಿ. ಮತ್ತು ಆ.ಮ.ನಿಯವರು ಭಾರತ ಸರ್ಕಾರದ ಪತ್ರಸಂಖ್ಯೆ 5/10/2009–ಕೋಸ್ಟಲ್ ಸೆಕ್ಯೂರಿಟಿ, ದಿನಾಂಕ: 01–11–2010ರಲ್ಲಿ ಕರಾವಳಿ ಕಾವಲು ಪಡೆ ಯೋಜನೆಯ 2ನೇ ಹಂತದಲ್ಲಿ ಕರ್ನಾಟಕ ರಾಜ್ಯಕ್ಕೆ 4 ಕರಾವಳಿ ಕಾವಲು ಪೊಲೀಸ್ ಠಾಣೆಗಳಾದ ಹೆಜಮಾಡಿ, ಗಂಗೊಳ್ಳಿ (ಕುಂದಾಪುರ), ಹೊನ್ನಾವರ ಮತ್ತು ಅಂಕೋಲ (ಬೇಲೆಕೇರಿ) ಗಳಿಗೆ 12 ಟನ್ ಸಾಮರ್ಥ್ಯದ 12 ಬೋಟುಗಳು, 2 ಜೆಟ್ಟಿಗಳು, ನಾಲ್ಕು ಚಕ್ರದ ವಾಹನಗಳು ಮತ್ತು 8 ಮೋಟಾರ್ ಸೈಕಲ್‌ಗಳಿಗೆ ಮಂಜೂರಾತಿ ನೀಡಿದೆಯೆಂದು ತಿಳಿಸಿ, ವಿವರಗಳನ್ನು ಈ ಕೆಳಕಂಡಂತೆ ನೀಡಿರುತ್ತಾರೆ.

| ಕ್ರ.ಸಂ. | ವಿವರ | ಸಂಖ್ಯೆ | ವೆಚ್ಚ | ಒಟ್ಟು ಮೊತ್ತ |
|---|---|---|---|---|
| 1. | ಕರಾವಳಿ ಕಾವಲು ಪೊಲೀಸ್ ಠಾಣೆ (ಹಂತ–2) ಹೆಜಮಾಡಿ, ಗಂಗೊಳ್ಳಿ (ಕುಂದಾಪುರ), ಹೊನ್ನಾವರ ಮತ್ತು ಅಂಕೋಲ (ಬೇಲೆಕೇರಿ) | 04 | ರೂ. 48 ಲಕ್ಷ (ಪ್ರತಿ ಠಾಣೆಯ ನಿರ್ಮಾಣದ ವೆಚ್ಚ) | ರೂ. 1.92 ಕೋಟಿ |
| 2 | 12 ಟನ್ ಸಾಮರ್ಥ್ಯದ ಬೋಟುಗಳು | 12 | ರೂ. 4.00 ಕೋಟಿ (ಪ್ರತಿ ಬೋಟಿನ ನಿರ್ಮಾಣ ವೆಚ್ಚ) | ರೂ. 48.00 ಕೋಟಿ |
| 3. | ಜೆಟ್ಟಿಗಳು | 02 | ರೂ. 50.00 ಲಕ್ಷ (ಪ್ರತಿ ಜೆಟ್ಟಿಯ ನಿರ್ಮಾಣ) | ರೂ. 1.00 ಕೋಟಿ |
| 4. | ನಾಲ್ಕು ಚಕ್ರದ ವಾಹನಗಳು | 04 | ರೂ. 7.00 ಲಕ್ಷಗಳು (ಪ್ರತಿ ವಾಹನಕ್ಕೆ) | ರೂ. 28.00 ಲಕ್ಷಗಳು |
| 5. | ದ್ವಿಚಕ್ರ ವಾಹನಗಳು | 08 | ರೂ. 60,000/–00 (ಪ್ರತಿ ವಾಹನಕ್ಕೆ) | ರೂ. 4.80 ಲಕ್ಷಗಳು |

**ii) ಭದ್ರತಾ ಸಾಮಾಗ್ರಿ ಮತ್ತು ಇತರೆ ಉಪಕರಣಗಳ ಖರೀದಿ:** ಭದ್ರತಾ ಸಾಮಾಗ್ರಿ ಮತ್ತು ಇತರೆ ಉಪಕರಣಗಳ ಖರೀದಿಗೆ ಪ್ರತಿ ಠಾಣೆಗೆ ರೂ. 15.00 ಲಕ್ಷಗಳ ನೆರವು ನೀಡಿದ್ದು, ವಿವರ ಈ ಕೆಳಕಂಡಂತಿದೆಯೆಂದು ತಿಳಿಸಿರುತ್ತಾರೆ.

| ಪ್ರತಿ ಠಾಣೆಗೆ ನೀಡಿದ ಒಟ್ಟಾರೆ ನೆರವು | ಪೊಲೀಸ್ ಠಾಣೆಗಳ ಸಂಖ್ಯೆ | ಒಟ್ಟು ಮೊತ್ತ |
|---|---|---|
| ರೂ. 15.00 ಲಕ್ಷ | 04 | ರೂ. 60.00 ಲಕ್ಷ |

**iii) ಬೋಟುಗಳ ಇಂಧನ ವೆಚ್ಚ :** 12 ಟನ್ ಸಾಮರ್ಥ್ಯದ 12 ಬೋಟುಗಳಿಗೆ ಇಂಧನ ವೆಚ್ಚದ ವಿವರ ಈ ಕೆಳಕಂಡಂತಿದೆ.

| ಪ್ರತಿ ತಿಂಗಳ 1 ಬೋಟಿನ ಇಂಧನ ವೆಚ್ಚ | ಪ್ರತಿ ವರ್ಷಕ್ಕೆ 1 ಬೋಟಿನ ಇಂಧನ ವೆಚ್ಚ | ಬೋಟುಗಳ ಸಂಖ್ಯೆ | ಒಟ್ಟು ವಾರ್ಷಿಕ ಇಂಧನ ವೆಚ್ಚ |
|---|---|---|---|
| ರೂ. 5.00 ಲಕ್ಷ | ರೂ. 60.00 ಲಕ್ಷ | 12 | ರೂ. 720.00 ಲಕ್ಷ |

**iv) ಸಿಬ್ಬಂದಿಗಳ ತರಬೇತಿ ವೆಚ್ಚ :** ಕರಾವಳಿ ಕಾವಲು ಪೊಲೀಸ್ ಘಟಕದ ಅಧಿಕಾರಿ/ಸಿಬ್ಬಂದಿಯವರಿಗೆ ನೀಡುವ ತರಬೇತಿ ವೆಚ್ಚವನ್ನು ಭಾರತ ಸರ್ಕಾರವೇ ಭರಿಸುವುದರಿಂದ ತರಬೇತಿ/ವೆಚ್ಚದ ವಿವರಗಳು ಈ ಕೆಳಕಂಡಂತಿದೆಯೆಂದು ತಿಳಿಸಿರುತ್ತಾರೆ.

| ಕ್ರ.ಸಂ. | ತರಬೇತಿಯ ಹೆಸರು | ತರಬೇತಿ ನೀಡುವ ಸಂಸ್ಥೆ | ತರಬೇತಿ ಅವಧಿ | ಒಂದು ವರ್ಷಕ್ಕೆ |
|---|---|---|---|---|
| 1. | ಮರೈನ್ ಓರಿಯಂಟೇಶನ್ ತರಬೇತಿ | ಇಂಡಿಯನ್ ಕೋಸ್ಟ್‌ಗಾರ್ಡ್, ನವಮಂಗಳೂರು | 4 ವಾರಗಳು | 2 ಬಾರಿ |
| 2. | ಸೀ ಫೆರಿಂಗ್ ಮತ್ತು ಫೆಮಿಲಿಯರೈಜೇಶನ್ ತರಬೇತಿ | ಸೀ ಬರ್ಡ್ ನೌಕಾನೆಲೆ ಕಾರವಾರ | 4 ವಾರಗಳು | 1 ಬಾರಿ |
| 3. | ಬೋಟ್ ಚಾಲನಾ ಮತ್ತು ನಿರ್ವಹಣಾ ತರಬೇತಿ | ಗೋವಾ ಶಿಫ್ ಯಾರ್ಡ್ ಲಿ. ಗೋವಾ | 1 ವಾರ | 3 ಬಾರಿ |
| 4. | ಸಿಎಸ್‌ಪಿ. ಕ್ಯಾಪ್ಸೂಲ್ ಕೋರ್ಸ್ | ಸೀ ಬರ್ಡ್ ನೌಕಾನೆಲೆ ಕಾರವಾರ | 1 ವಾರ | 3 ಬಾರಿ |

ಇವುಗಳಲ್ಲದೇ ಸಂದರ್ಭಕ್ಕನುಗುಣವಾಗಿ ನೀಡುವ ವಿಶೇಷ ತರಬೇತಿಯೂ ಸೇರಿದಂತೆ ವಾರ್ಷಿಕವಾಗಿ ಅಂದಾಜು ವೆಚ್ಚ ರೂ. 10.00 ಲಕ್ಷ ಆಗುತ್ತದೆಯೆಂದು ತಿಳಿಸಿರುತ್ತಾರೆ.

**v) ಭೂಸ್ವಾಧೀನ ವೆಚ್ಚ :** ಕರಾವಳಿ ಕಾವಲು ಪೊಲೀಸ್ ಠಾಣೆಗಳನ್ನು ನಿರ್ಮಿಸಲು ಈ ಕೆಳಗಿನಂತೆ ಜಮೀನುಗಳನ್ನು ಗುರುತಿಸಲಾಗಿದೆ. ವಿವರ ಈ ಕೆಳಕಂಡಂತಿದೆಯೆಂದು ತಿಳಿಸಿರುತ್ತಾರೆ.

| ಕ್ರ.ಸಂ. | ಠಾಣೆಯ ಹೆಸರು | ಗುರುತಿಸಲಾದ ಜಮೀನಿನ ವಿವರ | ವಿಸ್ತೀರ್ಣ |
|---|---|---|---|
| 1 | ಹೆಜಮಾಡಿ ಸಿ.ಎಸ್.ಪಿ. ಠಾಣೆ | ಮುಲ್ಕಿ ಗ್ರಾಮ ಸರ್ವೆ ನಂ. 58 | 2.29 ಎಕರೆ |
| 2 | ಗಂಗೊಳ್ಳಿ ಸಿ.ಎಸ್.ಪಿ. ಠಾಣೆ | ಕುಂದಾಪುರ ಗ್ರಾಮ ಸರ್ವೆ ನಂ. 269 | 1.2 ಎಕರೆ |
| 3 | ಹೊನ್ನಾವರ ಸಿ.ಎಸ್.ಪಿ. ಠಾಣೆ | ಹೊನ್ನಾವರ ಗ್ರಾಮ ಸರ್ವೆ ನಂ. 162 | 2.26 ಎಕರೆ |
| 4 | ಬೆಲೆಕೇರಿ ಸಿ.ಎಸ್.ಪಿ. ಠಾಣೆ | ಬೆಲೆಕೇರಿ ಗ್ರಾಮ ಸರ್ವೆ ನಂ. 193 | 10 ಎಕರೆ |

ಆದುದರಿಂದ ಈ ಮೇಲೆ ವಿವರಿಸಿರುವ ಕರಾವಳಿ ಕಾವಲು ಪೊಲೀಸ್ ಠಾಣೆಗಳು ನಿರ್ಮಾಣ ವೆಚ್ಚ 12 ಬೋಟುಗಳು ನಿರ್ಮಾಣ ವೆಚ್ಚ, ಜೆಟ್ಟಿಗಳು ನಿರ್ಮಾಣ ವೆಚ್ಚ ಮತ್ತು ನಾಲ್ಕು ಚಕ್ರ ಮತ್ತು ದ್ವಿಚಕ್ರ ವಾಹನಗಳ ಖರೀದಿ ಮತ್ತು ಭದ್ರತಾ ಸಾಮಾಗ್ರಿ ಮತ್ತು ಇತರೆ ಉಪಕರಣಗಳ ಖರೀದಿ, ಬೋಟುಗಳ ಇಂಧನ ವೆಚ್ಚ, ಸಿಬ್ಬಂದಿಗಳ ತರಬೇತಿ ವೆಚ್ಚ ಇತ್ಯಾದಿ ಅಂಶಗಳಿಗೆ ಸರ್ಕಾರದ ಮಂಜೂರಾತಿ ಆದೇಶ ಪಡೆದು ಕಳುಹಿಸಲು ಕೋರಿರುತ್ತಾರೆ.

ಕರಾವಳಿ ಕಾವಲು ತೀರ ಪ್ರದೇಶದ ಭದ್ರತೆಗಾಗಿ ಕೋಸ್ಟಲ್ ಸೆಕ್ಯೂರಿಟಿ ಸ್ಕೀಂ ಹಂತ-2 ರಲ್ಲಿ 4 ಪೊಲೀಸ್ ಠಾಣೆಗಳಾದ ಹೆಜಮಾಡಿ, ಗಂಗೊಳ್ಳಿ, ಹೊನ್ನಾವರ ಮತ್ತು ಅಂಕೋಲಾ ಪ್ರತಿ ಪೊಲೀಸ್ ಠಾಣೆಗಳಿಗೆ 55 ರಂತೆ ವಿವಿಧ ದರ್ಜೆಯ ಒಟ್ಟು 220 ಹುದ್ದೆಗಳನ್ನು ಸೃಜಿಸಲು ಪ್ರಸ್ತಾವನೆ ಸಲ್ಲಿಸಲಾಗಿತ್ತು. ಆದರೆ ಸರ್ಕಾರದ ಆದೇಶ ದಿನಾಂಕ: 20-07-2011 ರಲ್ಲಿ ಈ ನಾಲ್ಕು ಪೊಲೀಸ್ ಠಾಣೆಗಳಿಗೆ 52 ತಾಂತ್ರಿಕ ಹುದ್ದೆಗಳು (4 ಬೋಟುಗಳಿಗೆ) ಮತ್ತು 58 ಇತರೆ ಸಿಬ್ಬಂದಿ ಅಧಿಕಾರಿ ಹುದ್ದೆಗಳನ್ನು ಸೃಜಿಸಲು ಸರ್ಕಾರ ಮಂಜೂರಾತಿ ನೀಡಿದೆ. ಉಳಿದ 110 ಹುದ್ದೆಗಳನ್ನು ಮರು ನಿಯೋಜನೆ ಮೂಲಕ ತುಂಬಲು ಆದೇಶಿಸಿದೆ. ಸದರಿ ಆದೇಶದಲ್ಲಿ ಹೊಸದಾಗಿ ಸೃಜಿಸಿರುವ 110 ಹುದ್ದೆಗಳಲ್ಲಿ 58 ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳು ಯಾವ ಯಾವ ದರ್ಜೆಯ ಹುದ್ದೆಗಳು ಸೃಜನಗೊಂಡಿರುತ್ತದೆ ಎಂಬುದರ ಬಗ್ಗೆ ನಮೂದಿಸಿರುವುದಿಲ್ಲ. ಆದ್ದರಿಂದ ಈ 58 ಹುದ್ದೆಗಳನ್ನು ಈ ಕೆಳಕಂಡಂತೆ ವಿವಿಧ ದರ್ಜೆಯ ಹುದ್ದೆಗಳನ್ನಾಗಿ ನಮೂದಿಸಿ ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

| ಕ್ರ.ಸಂ | ಠಾಣೆಗಳು | ಪಿಐ | ಪಿಎಸ್‌ಐ | ಎಎಸ್‌ಐ | ಸಿಹೆಚ್‌ಸಿ | ಸಿಪಿಸಿ | ಎಪಿಸಿ (ಚಾ) | ಫಾಲೋಯರ್ಸ್ | ಒಟ್ಟು |
|---|---|---|---|---|---|---|---|---|---|
| 1 | ಹೆಜಮಾಡಿ | 1 | 2 | 2 | 2 | 6 | 1 | 1 | 15 |
| 2 | ಗಂಗೊಳ್ಳಿ | 1 | 2 | 2 | 2 | 6 | 1 | 1 | 15 |
| 3 | ಹೊನ್ನಾವರ | 1 | 2 | 2 | 2 | 6 | 1 | 0 | 14 |
| 4 | ಬೇಲೇಕೇರಿ | 1 | 2 | 2 | 2 | 6 | 1 | 0 | 14 |
| | ಒಟ್ಟು | 4 | 8 | 8 | 8 | 24 | 4 | 2 | 58 |

ಮುಂದುವರೆದು ಉಲ್ಲೇಖಿತ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ/106/ಪಿಒಪಿ/2011, ದಿನಾಂಕ: 20-07-2011, ರಲ್ಲಿಯೇ 110 ಹುದ್ದೆಗಳನ್ನು ಮರು ನಿಯೋಜನೆ ಮೂಲಕ ತುಂಬುವಂತೆ ಆದೇಶಿಸಲಾಗಿದೆ ಆದರೆ ಸದರಿ 4 ಕರಾವಳಿ ಕಾವಲು ಪೊಲೀಸ್ ಠಾಣೆಗಳು ಪೂರ್ಣ ಪ್ರಮಾಣದಲ್ಲಿ ಕಾರ್ಯಾರಂಭ ಮಾಡಲು ಕೋರಿರುವ ಎಲ್ಲಾ ಅಧಿಕಾರಿ ಮತ್ತು ಸಿಬ್ಬಂದಿಗಳ ಅವಶ್ಯಕತೆ ಇರುವುದರಿಂದ ಪ್ರಸಕ್ತ ಸಾಲಿನಲ್ಲಿ ಪೊಲೀಸ್

ಠಾಣೆಗಳನ್ನು ಪ್ರಾರಂಭಿಸಲು ಕಾಲಮಿತಿಯನ್ನು ಹಾಕಿಕೊಂಡಿರುವುದರಿಂದ ಮರು ನಿಯೋಜನೆಗೆ ಆದೇಶಿಸಿರುವ 110 ಹುದ್ದೆಗಳನ್ನು ಹೊಸದಾಗಿ ಸೃಜಿಸುವುದು ಇಲಾಖೆಗೆ ಅವಶ್ಯಕವಾಗಿದೆ. ಹೊಸದಾಗಿ ಸೃಜಿಸಬೇಕಾದ ಹುದ್ದೆಗಳ ವಿವರ ಈ ಕೆಳಕಂಡಂತಿದೆ ಎಂದು ತಿಳಿಸಿರುತ್ತಾರೆ.

**ಹೊಸದಾಗಿ ಸೃಜಿಸಬೇಕಾದ ಅಧಿಕಾರಿ/ಸಿಬ್ಬಂದಿ ಹುದ್ದೆಗಳ ವಿವರ:**

| ಕ್ರ.ಸಂ | ಠಾಣೆಗಳು | ಪಿಐ | ಪಿಎಸ್‌ಐ | ಎಎಸ್‌ಐ | ಸಿಹೆಚ್‌ಸಿ | ಸಿಪಿಸಿ | ಎಪಿಸಿ (ಚಾ) | ಫಾಲೋಯರ್ಸ್ | ಒಟ್ಟು |
|---|---|---|---|---|---|---|---|---|---|
| 1 | ಹೆಜಮಾಡಿ | – | 3 | 2 | 5 | 15 | 1 | 1 | 27 |
| 2 | ಗಂಗೊಳ್ಳಿ | – | 3 | 2 | 5 | 15 | 1 | 1 | 27 |
| 3 | ಹೊನ್ನಾವರ | – | 3 | 2 | 5 | 15 | 1 | 2 | 28 |
| 4 | ಬೇಲೇಕೇರಿ | – | 3 | 2 | 5 | 15 | 1 | 2 | 28 |
| | ಒಟ್ಟು | – | 12 | 8 | 20 | 60 | 4 | 6 | 110 |

ಆದುದರಿಂದ ಈ ಮೇಲ್ಕಂಡ 110 ವಿವಿಧ ದರ್ಜೆಯ ಹುದ್ದೆಗಳನ್ನು ಹೊಸದಾಗಿ ಸೃಜಿಸಲು ತಗಲುವ ಅಂದಾಜು ಆವರ್ತಕ ವೆಚ್ಚ ರೂ. 2,76,25,752–00 ಮತ್ತು ಅನಾವರ್ತಕ ವೆಚ್ಚ ರೂ. 59,14,80,000–00 ಒಟ್ಟು ರೂ. 61,91,05,752–00 ಗಳಿಗೆ ಸರ್ಕಾರದ ಮಂಜೂರಾತಿ ಆದೇಶ ಪಡೆದು ಕಳುಹಿಸಲು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪ್ರಾಥಮಿಕವಾಗಿ ಹೆಜಮಾಡಿ, ಗಂಗೊಳ್ಳಿ, ಹೊನ್ನಾವರ ಮತ್ತು ಬೇಲೇಕೇರಿ ಪೊಲೀಸ್ ಠಾಣೆಗಳಿಗೆ 52 ತಾಂತ್ರಿಕ ಹುದ್ದೆಗಳು (4 ಬೋಟುಗಳಿಗೆ) ಮತ್ತು 58 ಇತರೆ ಸಿಬ್ಬಂದಿ ಅಧಿಕಾರಿ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಿದೆ ಹಾಗೂ ಇನ್ನುಳಿದ 110 ಹುದ್ದೆಗಳನ್ನು ಮರುನಿಯೋಜನೆ ಮೂಲಕ ತುಂಬಲು ಆದೇಶಿಸಿದೆ. ಆದರೆ ಕರಾವಳಿ ಕಾವಲು ಪೊಲೀಸ್ ಪಡೆ ಯೋಜನೆಯಡಿ ಕಟ್ಟಡಗಳನ್ನು ಕಟ್ಟಲು ಹಾಗೂ ಬೋಟು, ವಾಹನ ಮತ್ತು ಸಲಕರಣೆಗಳನ್ನು ಖರೀದಿಸಲು ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಸಾಕಷ್ಟು ಅನುದಾನ ದೊರೆಯುತ್ತಿರುವುದರಿಂದ ಸರ್ಕಾರವು ಈ ಹಿಂದೆ 52 ತಾಂತ್ರಿಕ ಹುದ್ದೆಗಳು (4 ಬೋಟುಗಳಿಗೆ) ಮತ್ತು 58 ಇತರೆ ಸಿಬ್ಬಂದಿ ಅಧಿಕಾರಿ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಿದೆ ಹಾಗೂ ಇನ್ನುಳಿದ 110 ಹುದ್ದೆಗಳನ್ನು ಮರುನಿಯೋಜನೆ ಮೂಲಕ ತುಂಬಲು ಆದೇಶಿಸಿರುವುದನ್ನು ಪುನರ್ ಪರಿಶೀಲಿಸಿ ಸದರಿ 110 ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಭರ್ತಿಮಾಡುವ ಬಗ್ಗೆ ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 106 ಪಿಓಪಿ 2011, ಬೆಂಗಳೂರು, ದಿನಾಂಕ: 13–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈಗಾಗಲೇ ಉಲ್ಲೇಖ (1)ರಲ್ಲಿನ ಆದೇಶದಲ್ಲಿ ಹೆಜಮಾಡಿ, ಗಂಗೊಳ್ಳಿ, ಹೊನ್ನಾವರ ಮತ್ತು ಬೇಲೇಕೇರಿ ಪೊಲೀಸ್ ಠಾಣೆಗಳಿಗೆ ಮಂಜೂರು ಮಾಡಿದ 52 ತಾಂತ್ರಿಕ ಹುದ್ದೆಗಳು (4 ಬೋಟುಗಳಿಗೆ) ಮತ್ತು 58 ಇತರೆ ಸಿಬ್ಬಂದಿ ಅಧಿಕಾರಿ ಹುದ್ದೆಗಳೊಂದಿಗೆ ಈ ಕೆಳಕಂಡ ವಿವಿಧ ವರ್ಗಗಳ 110 ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಭರ್ತಿ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

| ಕ್ರ.ಸಂ | ಠಾಣೆಗಳು | ಪಿಐ | ಪಿಎಸ್‌ಐ | ಎಎಸ್‌ಐ | ಸಿಹೆಚ್‌ಸಿ | ಸಿಪಿಸಿ | ಎಪಿಸಿ (ಚಾ) | ಫಾಲೋಯರ್ಸ್ | ಒಟ್ಟು |
|---|---|---|---|---|---|---|---|---|---|
| 1 | ಹೆಜಮಾಡಿ | – | 3 | 2 | 5 | 15 | 1 | 1 | 27 |
| 2 | ಗಂಗೊಳ್ಳಿ | – | 3 | 2 | 5 | 15 | 1 | 1 | 27 |
| 3 | ಹೊನ್ನಾವರ | – | 3 | 2 | 5 | 15 | 1 | 2 | 28 |
| 4 | ಬೇಲೇಕೇರಿ | – | 3 | 2 | 5 | 15 | 1 | 2 | 28 |
| | ಒಟ್ಟು | – | 12 | 8 | 20 | 60 | 4 | 6 | 110 |

ಮೇಲಿನ ಹೊಸ ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಭರ್ತಿ ಮಾಡತಕ್ಕದ್ದು.

ಮುಂದುವರೆದು ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 58 ಹುದ್ದೆಗಳನ್ನು ಈ ಕೆಳಕಂಡಂತೆ ವಿವಿಧ ದರ್ಜೆಯ ಹುದ್ದೆಗಳನ್ನಾಗಿ ನಮೂದಿಸಿ ಈ ಕೆಳಕಂಡಂತೆ ಸರ್ಕಾರದ ಆದೇಶ ಹೊರಡಿಸಿದೆ.

| ಕ್ರ.ಸಂ | ಠಾಣೆಗಳು | ಪಿಐ | ಪಿಎಸ್‌ಐ | ಎಎಸ್‌ಐ | ಸಿಹೆಚ್‌ಸಿ | ಸಿಪಿಸಿ | ಎಪಿಸಿ (ಚಾ) | ಫಾಲೋಯರ್ಸ್ | ಒಟ್ಟು |
|---|---|---|---|---|---|---|---|---|---|
| 1 | ಹೆಜಮಾಡಿ | 1 | 2 | 2 | 2 | 6 | 1 | 1 | 15 |
| 2 | ಗಂಗೊಳ್ಳಿ | 1 | 2 | 2 | 2 | 6 | 1 | 1 | 15 |
| 3 | ಹೊನ್ನಾವರ | 1 | 2 | 2 | 2 | 6 | 1 | 0 | 14 |
| 4 | ಬೇಲೇಕೇರಿ | 1 | 2 | 2 | 2 | 6 | 1 | 0 | 14 |
| | ಒಟ್ಟು | 4 | 8 | 8 | 8 | 24 | 4 | 2 | 58 |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2055–00–109–1–01–District Head- ವೇತನಗಳು ಗಳಡಿಯಲ್ಲಿ ಒದಗಿಸಿದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 57 ವೆಚ್ಚ 11/2012 ದಿನಾಂಕ: 05/03/2012ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಜಮ್ಮ**

ಪಿ.ಆರ್.1025

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

ವಿಷಯ : ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಚಿಕ್ಕಬಳ್ಳಾಪುರ ಜಿಲ್ಲೆಯ 5 ತಾಲ್ಲೂಕಿನ 338 ಜನ ಜೀತವಿಮುಕ್ತರಿಗೆ 2011-12ನೇ ಸಾಲಿನಲ್ಲಿ ಪೂರ್ಣ ಸಹಾಯಧನ ಬಿಡುಗಡೆ ಮಾಡುವ ಕುರಿತು.

ಓದಲಾಗಿದೆ : 1. ಸರ್ಕಾರದ ಆದೇಶ ಸಂ.ಗ್ರಾಅಪ.15.ಆರ್‌ಬಿಎಲ್. 2004 ದಿನಾಂಕ: 21.01.2006.

2. ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಜಿಲ್ಲಾ ಪಂಚಾಯಿತಿಗೆ ವರದಿ ಮಾಡಿರುವ ಪತ್ರ ಸಂಖ್ಯೆ: ಜೀವಿಕಾ/ಸಿಆರ್-06/2011-12 ದಿನಾಂಕ: 08.12.2011, 02.03.2012 ಹಾಗೂ 16.01.2012.

3. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ ಇವರ ಪತ್ರ ಸಂ:ಜಿಪಂಚಿ/ಅಭಿವೃದ್ಧಿ/ಜೀವಿಕ/ಪು.ಅ/ಅನುದಾನ/ಸಿಆರ್-01/11-12 ದಿ: 31.01.2012 ಹಾಗೂ 06.03.2012.

**ಪ್ರಸ್ತಾವನೆ :**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ: 21.01.2006ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ: 21.01.2006ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನವನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.

ಮೇಲೆ ಓದಲಾದ ಕ್ರ.ಸಂ: (2)ರ ಪತ್ರದಲ್ಲಿ ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು, ಚಿಕ್ಕಬಳ್ಳಾಪುರ ಜಿಲ್ಲೆಯ, 5 ತಾಲ್ಲೂಕಿನ ಒಟ್ಟು 338 ಜೀತದಾಳುಗಳನ್ನು (ಅನುಬಂಧದಲ್ಲಿ ತೋರಿಸಿರುವ) ಒತ್ತೆಯಾಳಾಗಿರುವುದನ್ನು ಪತ್ತೆ ಹಚ್ಚಿ, ಜೀತ ಕಾರ್ಮಿಕ ಪದ್ಧತಿ (ನಿಷೇಧ) ಕಾಯಿದೆ 1976ರ ಕಲಂ 12 ರನ್ವಯ ಪ್ರದತ್ತವಾದ ಅಧಿಕಾರದ ಪ್ರಕಾರ ಜೀತದಾಳುಗಳನ್ನು ಜೀತಪದ್ಧತಿಯಿಂದ ವಿಮುಕ್ತಿಗೊಳಿಸಿ ಜೀತವಿಮುಕ್ತ ದೃಢೀಕರಣ ಪತ್ರಗಳನ್ನು ವಿವಿಧ ದಿನಾಂಕಗಳಂದು ಅನುಬಂಧದಲ್ಲಿ ತೋರಿಸಿರುವಂತೆ 2010-11 ನೇ ಸಾಲಿನಲ್ಲಿ ವಿತರಿಸಿರುತ್ತಾರೆ. ಈ ಸಂಬಂಧ ಉಲ್ಲೇಖ (3)ರ ಪತ್ರದಲ್ಲಿ ಜಿಲ್ಲಾ ಪಂಚಾಯಿತಿಯ ಮುಖ್ಯಕಾರ್ಯನಿರ್ವಾಹಕ ಅಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಸದರಿ ಜೀತ ವಿಮುಕ್ತರಿಗೆ ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಮಾಶಾಸನ ಸಹಾಯಧನವನ್ನು ಮಂಜೂರು ಮಾಡಲು ಕೋರಿರುತ್ತಾರೆ. ಉಲ್ಲೇಖ (3)ರ ಪತ್ರದೊಂದಿಗೆ ಸಲ್ಲಿಸಲಾದ ಜೀತ ವಿಮುಕ್ತ ಬಿಡುಗಡೆ ಪ್ರಮಾಣ ಪತ್ರಗಳನ್ನು ಆದರಿಸಿ ಸದರಿ 338 ಜನ ಜೀತ ವಿಮುಕ್ತರಿಗೆ 24 ತಿಂಗಳುಗಳವರೆಗೆ, ರೂ. 300/-ಗಳ ಮಾಶಾಸನ ಮಂಜೂರು ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಪ್ರತಿಯೊಬ್ಬರಿಗೆ ತಿಂಗಳಿಗೆ ರೂ. 300/-ರಂತೆ 24 ತಿಂಗಳ ಅವಧಿಗೆ ಒಟ್ಟು 338 ಜನ ದೇಶ ವಿಮುಕ್ತರಿಗೆ ರೂ. 24.336 ಲಕ್ಷಗಳನ್ನು ಬಿಡುಗಡೆ ಮಾಡಲು ಈ ಯೋಜನೆಯಡಿ ಪ್ರಸಕ್ತ ಸಾಲಿನ ಲೆಕ್ಕ ಶೀರ್ಷಿಕೆ 2230-01-198-06-01-300 ಅಡಿಯಲ್ಲಿ ಲಭ್ಯವಿರುವ ಅನುದಾನವನ್ನು ಅನುಬಂಧದಲ್ಲಿ ತೋರಿಸಿರುವಂತೆ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಆದೇಶ.

**ಸರ್ಕಾರದ ಆದೇಶ ಸಂ : ಗ್ರಾಅಪ.05.ಆರ್‌ಬಿಎಲ್ 2012 ಬೆಂಗಳೂರು, ದಿನಾಂಕ: 20.03.2012**

ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅಡಿ ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ತಾಲ್ಲೂಕಿನ 338 ಜನ ಜೀತವಿಮುಕ್ತರಿಗೆ 2011-12ನೇ ಸಾಲಿನಲ್ಲಿ ಅನುಬಂಧದಲ್ಲಿ ತೋರಿಸಿರುವಂತೆ ಒಟ್ಟು 24 ತಿಂಗಳ ಅವಧಿಗೆ ತಗಲುವ ಒಟ್ಟು ರೂ. 24,336 ಲಕ್ಷಗಳು (ಇಪ್ಪತ್ತ ನಾಲ್ಕು ಲಕ್ಷದ ಮೂವತ್ತಾಮೂರು ಸಾವಿರದ ಆರುನೂರು ರೂಪಾಯಿಗಳು ಮಾತ್ರ)ಗಳನ್ನು ಈ ಸಾಲಿನಲ್ಲಿಯೇ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಅನುಬಂಧ**

| ಕ್ರ.ಸಂ. | ತಾಲ್ಲೂಕಿನ ಹೆಸರು | ಒಟ್ಟು ಜೀತ ವಿಮುಕ್ತರ ಸಂಖ್ಯೆ | ಉಪ ವಿಭಾಗಾಧಿಕಾರಿ, ಚಿಕ್ಕಬಳ್ಳಾಪುರ ಉಪವಿಭಾಗ, ಇವರು ಜೀತವಿಮುಕ್ತ ಬಿಡುಗಡೆ ಪ್ರಮಾಣ ಪತ್ರವನ್ನು ವಿತರಿಸಿರುವ ದಿನಾಂಕ | 24 ತಿಂಗಳಿಗೆ ಅನ್ವಯವಾಗುವ ಅವಧಿ | ಪ್ರಸ್ತುತ ಆದೇಶ ಸಂ:ಗ್ರಾಅಪ:05:ಆರ್‌ಬಿಎಲ್: 2012 ದಿನಾಂಕ: 20-03-2012ರಲ್ಲಿ ಬಿಡುಗಡೆಗೊಳಿಸುತ್ತಿರುವ ಒಟ್ಟು ಅನುದಾನ ರೂ.ಗಳಲ್ಲಿ |
|---|---|---|---|---|---|
| 1. | ಚಿಕ್ಕಬಳ್ಳಾಪುರ | 45 | 5-8-2010 | (ಆಗಸ್ಟ್-2010 ರಿಂದ ಜುಲೈ 2012ರವರೆಗೆ) | 3,24,000 |
| 2. | ಗೌರಿಬಿದನೂರು | 66 | 5-8-2010 | (ಆಗಸ್ಟ್-2010 ರಿಂದ ಜುಲೈ 2012ರವರೆಗೆ | 4.75,200 |
| 3. | ಶಿಡ್ಲಘಟ್ಟ | 19 | 5-8-2010 | (ಆಗಸ್ಟ್-2010 ರಿಂದ ಜುಲೈ 2012ರವರೆಗೆ | 1,36,800 |

| | | | | | |
|---|---|---|---|---|---|
| 4. | ಗುಡಿಬಂಡೆ | 102 | 20–10–2010 | (ಅಕ್ಟೋಬರ್–2010 ರಿಂದ ಸೆಪ್ಟೆಂಬರ್ 2012ರವರೆಗೆ | 7,34,400 |
| 5. | ಬಾಗೇಪಲ್ಲಿ | 106 | 11–12–2010 | (ಡಿಸೆಂಬರ್–2010 ರಿಂದ ನವೆಂಬರ್–2012ರವರೆಗೆ) | 7,63,200 |
| | | | | | **24,33,600** |

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ–198–ಗ್ರಾಮ ಪಂಚಾಯಿತಿಗಳಿಗೆ ಸಹಾಯ–6–ಗ್ರಾಮ ಪಂಚಾಯಿತಿಗಳು–ಕೇಂದ್ರ ಪುರಸ್ಕೃತ ಯೋಜನೆ ( ಜೀತದಾಳುಗಳ ಪುನರ್ವಸತಿ)–01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ) ಗೆ ಜಮಾ ಮಾಡತಕ್ಕದ್ದು.

3. ಈ ಆದೇಶದಲ್ಲಿ ನಮೂದಿಸಿರುವ ಜೀತ ವಿಮುಕ್ತರ ವಿವರಗಳನ್ನು ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ರವರ ವರದಿಯ ಆಧಾರದಂತೆ ಪರಿಗಣಿಸಿ ಜೀತ ವಿಮುಕ್ತರಿಗೆ ತಕ್ಷಣದಿಂದಲೇ ಪರಿಹಾರ ನೀಡುವ ಅಗತ್ಯತೆ ಹಿನ್ನೆಲೆಯಲ್ಲಿ ಮಾಶಾಸನ ಮೊತ್ತವನ್ನು ಮಂಜೂರು ಮಾಡಲಾಗಿದ್ದು, ಸದರಿ ಜೀತ ವಿಮುಕ್ತರ ಇರುವಿಕೆಯ ಬಗ್ಗೆ ತಮ್ಮ ಜಿಲ್ಲೆಯ ಜಿಲ್ಲಾಧಿಕಾರಿ/ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಮುಖಾಂತರ, ಖಾತರಿ ಮಾಡಿಕೊಳ್ಳುವ ಮೂಲಕ ಮೊತ್ತವನ್ನು ಪಾವತಿಸಲು ಕ್ರಮ ಕೈಗೊಳ್ಳುವುದು ಹಾಗೂ ಈ ಜೀತವಿಮುಕ್ತರ ಪೂರ್ಣ ಮಾಹಿತಿಯನ್ನು ಹಾಗೂ ಹಣ ಪಾವತಿಸಿರುವ ಕುರಿತು ಪ್ರತ್ಯೇಕ ವಹಿಯನ್ನು ನಿರ್ವಹಿಸಿ, ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ದೃಡೀಕರಣ ಪತ್ರವನ್ನು ಒಂದು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಸರ್ಕಾರದ ಆದೇಶ ಸಂ.ಗ್ರಾಅಪ.15.ಆರ್‌ಬಿಎಲ್.2004 ದಿನಾಂಕ: 21.01.2006 ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

5. ಈ ಅದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ 11 ಪಿಬಿಎಸ್.2012 ದಿನಾಂಕ: 14.3.2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೀಪಾ**
ನಿರ್ದೇಶಕರು, ಸ್ವಉ.ಕಾ
ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್.1026

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

ವಿಷಯ : ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬಳ್ಳಾರಿ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

ಓದಲಾಗಿದೆ : 1. ಸರ್ಕಾರದ ಆದೇಶ ಸಂಖ್ಯೆ:ಯೋಇ:309:ಪಿಟಿಪಿ:94, ದಿನಾಂಕ: 07–08–1995
2. ಉಪಮಹಾನಿರ್ದೇಶಕರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರ ಸಂಖ್ಯೆ:ರಾಕಾ/ನಾನಿ/194/2012, ದಿ:08.02.2012

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ(2)ರ ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರು ಸೂಚಿಸಿರುವ ಸದಸ್ಯರುಗಳನ್ನು ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವ ಮೇರೆಗೆ ಬಳ್ಳಾರಿ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ. ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 105 ಯೋವಿವಿ 2011 ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬಳ್ಳಾರಿ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಹಿಂದೆ ಹೊರಡಿಸಲಾದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಐದು ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲಾಗಿದೆ.

**ಬಳ್ಳಾರಿ ಜಿಲ್ಲೆಯ ಜಿಲ್ಲಾ ಕೆ.ಡಿ.ಪಿ.ಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ಕೆ. ಗೋವಿಂದರೆಡ್ಡಿ, ಸೊಪ್ಪಿನ ಕಾಳಮ್ಮ ಬಡಾವಣೆ, ಹೂವಿನ ಹಡಗಲಿ, ಬಳ್ಳಾರಿ ಜಿಲ್ಲೆ | ಸಾಮಾನ್ಯ |

| | | |
|---|---|---|
| 2. | ಶ್ರೀಮತಿ ಸವಿತಾ ನಾಯಕ್, ಬೆಳಗಲ್ ತಾಂಡ, ಬಳ್ಳಾರಿ | ಎಸ್.ಸಿ. ಮಹಿಳೆ |
| 3. | ಶ್ರೀಮತಿ ಮಂಜಮ್ಮ ಕೋಂ ಮಲ್ಲೇಶ್, ಬಳ್ಳಾರಿ | ಮಹಿಳೆ |
| 4. | ಶ್ರೀ ಫಜೀಲ್ ಸಾಬ್, ಶಿರಗುಪ್ಪ, ಬಳ್ಳಾರಿ | ಅ.ಸಂ |
| 5. | ಶ್ರೀ ಶ್ರೀಕಾಂತ, ಸಂಡೂರು, ಬಳ್ಳಾರಿ | ಹಿಂ.ವರ್ಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರವೀಂದ್ರಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ 1&2(ಪ್ರ)

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್.1027

## HORTICULTURE SECRETARIAT

**Sub:** Release of State Share for National Horticulture Mission (NHM) programme during 2011-12-reg.

**Read:** Letter of Director of Horticulture No. ಮಿನಿ/ಕರಾತೋಮಿಏ/ವಿನಿ–1/48/2011-12, dated 17-03-2012

**Preamble:**

The Director of Horticulture has informed that under National Horticulture Mission an Annual Action Plan for Rs. 2500.00 lakhs has been approved and Government of India share of Rs. 10625.00 lakhs has been received from Government of India. The matching State share works out of Rs. 1875.00 lakhs and out of this an amount of Rs. 1484.62 lakhs has been released by the State Government. A balance of Rs. 390.38 lakhs has been requested to be released by the Director of Horticulture vide letter read above. Further, under the Head of Account 2401-00-800-2-30-059 a target of Rs. 175.00 lakhs has been earmarked while Rs. 475.08 lakhs has been released and hence, the difference of Rs. 300.08 lakhs will be utilized at the Directorate for the purpose of the object codes SDP Rs. 33.00 lakhs, SCP-Rs. 176.00 lakhs and TSP – Rs. 91.08 lakhs.

2. The proposal of the Director of Horticulture has been examined and hence this order;

**Government Order No. HCD 30 HPP 2011, Bangalore, dated 28-03-2012**

Government is pleased to release to the Director of Horticulture an amount of Rs 390.38 lakhs (Rupees Three Hundred Ninety Lakhs and Thirty Eight Thousand only) under the Head of Account 2401-00-800-2-30 towards the matching State Share of National Horticulture Mission Programme during 2011-12 as detailed below;

(Rs. In lakhs)

| Object Code | Amount Released |
|---|---|
| 133-Special Development Plan | 48.23 |
| 422-Special Component Plan | 230.12 |
| 423-Tribal Sub Plan | 112.03 |
| Total | 390.38 |

2. Rs. 300.08 lakhs available in excess under the object code – 059 other expenses will be utilized by the Director of Horticulture for the purpose of the object codes SDP 133-Rs. 33.00 lakhs, SCP 422-Rs. 176.00 lakhs and TSP 423-Rs. 91.08 lakhs.

3. This Order is issued with the concurrence of Finance Department vide Note No. ಆಇ 413 ವೆ:4/2011, dated 27-03-2012.

By Order and in the name of the Governor of Karnataka

**B. C. Prakash**

Under Secretary to Government

Horticulture Department

P.R. 1028

## ಶಿಕ್ಷಣ ಸಚಿವಾಲಯ

### ತಿದ್ದುಪಡಿ

ಸಂಖ್ಯೆ: ಇಡಿ 137 ಯುಪಿಸಿ 2012, ಬೆಂಗಳೂರು, ದಿನಾಂಕ 28–03–2012

ಶ್ರೀ ಜಿ. ಚಿತ್ತಪ್ಪ, ಇತಿಹಾಸ ಉಪನ್ಯಾಸಕರು, ಎಸ್.ಜೆ.ಎಂ. ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು, ಚಿತ್ರದುರ್ಗ ಇವರನ್ನು ವೇತನಾನುದಾನಕ್ಕೆ ಒಳಪಡಿಸಿ ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ: ಇಡಿ 14 ಯುಪಿಸಿ 2010, ದಿನಾಂಕ 11–03–2010ರಲ್ಲಿ ಸದರಿಯವರ ನೇಮಕಾತಿ ದಿನಾಂಕವನ್ನು "07–07–1998" ಎಂಬುದನ್ನು "ದಿನಾಂಕ 01–09–1998" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು. ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

ಪಿ.ಆರ್. 1029

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಎಂ. ಎನ್. ಶಿಂಧೆ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು ಹಾಗೂ ಇತರರ ಮೇಲಿನ ಭ್ರಷ್ಟಾಚಾರದ ಬಗ್ಗೆ ಶಿಸ್ತು ಕ್ರಮದ ಸಂಬಂಧ ಆದೇಶ.

**ಓದಲಾಗಿದೆ:**
1) ಸಹ ನಿರ್ದೇಶಕರು (ಆಡಳಿತ), ಅಪರ ಆಯುಕ್ತರ ಕಚೇರಿ, ಗುಲ್ಬರ್ಗಾ, ಇವರ ಪತ್ರ ಸಂಖ್ಯೆ: ಸಿ1(3):ಅ2:ಆಡಳಿತ:ಪದೂ:29:2004-05/2725, ದಿನಾಂಕ 06-07-2007.
2) ಆರೋಪ ಪಟ್ಟಿ ಜಾರಿ ಮಾಡಿದ ದಿನಾಂಕ 17/24-11-2008
3) ಅಪರ ಆಯುಕ್ತರು, ಸಾ.ಶಿ.ಇ., ಇವರ ಪತ್ರ ಸಂಖ್ಯೆ: ಸಿ2(4) ಸಿ1(3):ಶಿ.ಆ.ದೂರು:29:2004-05/10, ದಿನಾಂಕ 25-03-2009.
4) ಸರ್ಕಾರದ ಆದೇಶ ಸಂಖ್ಯೆ: ಇಡಿ 192 ಡಿಜಿಓ 2009, ದಿನಾಂಕ 31-08-2009
5) ಸರ್ಕಾರದ ಆದೇಶ ಸಂಖ್ಯೆ: ಇಡಿ 192 ಡಿಜಿಓ 2009, ದಿನಾಂಕ 05-10-2009
6) ಸರ್ಕಾರದ 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಇಡಿ 66 ಡಿಜಿಓ 2010, ದಿನಾಂಕ 22-03-2011.

**ಪ್ರಸ್ತಾವನೆ:**

ಶ್ರೀ ಎಂ. ಎನ್. ಶಿಂಧೆ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ಔರಾದ್ ತಾಲೂಕು, ಇಲ್ಲಿನ ಅಧಿಕಾರಿಗಳು/ನೌಕರರು ಸಮನ್ವಯಾಧಿಕಾರಿ, ಔರಾದ್ ತಾಲ್ಲೂಕು, ಪ್ರಭಾರ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಔರಾದ್ ತಾಲ್ಲೂಕು ಇವರುಗಳ ಮೇಲೆ ಮಾನ್ಯ ಮುಖ್ಯಮಂತ್ರಿಗಳ ಜನಸ್ಪಂದನ ಕಾರ್ಯಕ್ರಮದಲ್ಲಿ, ಶ್ರೀ ವಸಂತ ಕುಮಾರ, ಅಧ್ಯಕ್ಷರು, ತಾಲ್ಲೂಕು ನಾಗರೀಕ ಹೋರಾಟ ಸಮಿತಿ, ಔರಾದ್ ತಾಲ್ಲೂಕು ಹಾಗೂ ಇತರರು ಭ್ರಷ್ಟಾಚಾರ, ಹಣ ದುರುಪಯೋಗ ಮತ್ತು ಅಧಿಕಾರ ದುರ್ಬಳಕೆ ಸಂಬಂಧ ದೂರು ಸಲ್ಲಿಸಿರುತ್ತಾರೆ. ಈ ದೂರಿನಲ್ಲಿನ ಆರೋಪಗಳ ಬಗ್ಗೆ ಸಮಗ್ರ ತನಿಖೆ ನಡೆಸಿ, ಸಹ ನಿರ್ದೇಶಕರು (ಆಡಳಿತ), ಅಪರ ಆಯುಕ್ತರ ಕಚೇರಿ, ಗುಲ್ಬರ್ಗಾ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 06-07-2007ರಲ್ಲಿ ವರದಿ ಸಲ್ಲಿಸಿರುತ್ತಾರೆ.

1) ಶ್ರೀ ಎಂ. ಎನ್. ಶಿಂಧೆ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು
2) ಶ್ರೀ ಟಿ. ಆರ್. ದೊಡ್ಡೆ, ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು
3) ಶ್ರೀ ನಿವರ್ತಿ, ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು
4) ಶ್ರೀ ವೈಜನಾಥ್ ಶಿಂಧೆ, ಬಿ.ಆರ್.ಸಿ., ಸಮನ್ವಯಾಧಿಕಾರಿ ಔರಾದ್ ತಾಲ್ಲೂಕು
5) ಶ್ರೀ ಮೌರೆ ಪಿ.ಆರ್. ವ್ಯವಸ್ಥಾಪಕರು, ಬಿ.ಇ.ಓ. ಕಛೇರಿ, ಔರಾದ್ ತಾಲ್ಲೂಕು
6) ಶ್ರೀ ಅಬ್ದುಲ್ ರಜಾಕ್, ಅಧೀಕ್ಷಕರು, ಬಿ.ಇ.ಓ. ಕಛೇರಿ, ಔರಾದ್ ತಾಲ್ಲೂಕು
7) ಶ್ರೀ ಬಾಬುರಾವ್ ಕುಂಬಾರ, ಪ್ರ.ದ.ಸ., ಬಿ.ಇ.ಓ. ಕಚೇರಿ, ಔರಾದ್ ತಾಲ್ಲೂಕು
8) ಶ್ರೀ ಪ್ರಕಾಶ್ ಟಾಳೆ, ಪ್ರ.ದ.ಸ., ಬಿ.ಇ.ಓ. ಕಛೇರಿ, ಔರಾದ್ ತಾಲ್ಲೂಕು
9) ಶ್ರೀ ದಯಾನಂದ, ದ್ವಿ.ದ.ಸ., ಬಿ.ಇ.ಓ. ಕಛೇರಿ, ಔರಾದ್ ತಾಲ್ಲೂಕು

ಇವರುಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 17/24-11-2008ರಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಮತ್ತು 13ರನ್ವಯ ಶಿಸ್ತುಕ್ರಮ ಜರುಗಿಸಲು ಆರೋಪ ಪಟ್ಟಿ ಜಾರಿಗೊಳಿಸಲಾಗಿರುತ್ತದೆ.

ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ, ಇವರು ಆರೋಪ ಪಟ್ಟಿಯನ್ನು ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೀದರ್ ಜಿಲ್ಲೆ, ಇವರ ಮುಖಾಂತರ ಜಾರಿಗೊಳಿಸಿ, ಸ್ವೀಕೃತಿಯನ್ನು ಪಡೆದು ದಿನಾಂಕ 25-03-2009 ರಂದು ವರದಿ ಮಾಡಿರುತ್ತಾರೆ. 9 ಆಪಾದಿತರ ಪೈಕಿ ಶ್ರೀ ಎಂ. ಎನ್. ಶಿಂಧೆ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು, ಇವರು ನಿವೃತ್ತರಾಗಿದ್ದು, ದಿನಾಂಕ 27-12-2008 ರಂದು ನಿಧನ ಹೊಂದಿರುತ್ತಾರೆ ಎಂದು ವರದಿ ಮಾಡುತ್ತಾ, ಆರೋಪ ಪಟ್ಟಿಯನ್ನು ವಾಪಸ್ಸು ಮಾಡಿರುತ್ತಾರೆ.

ಆರೋಪ ಪಟ್ಟಿ ಜಾರಿಯಾದ ಉಳಿದ 8 ಜನ ಆಪಾದಿತರ ಪೈಕಿ 6 ಮಂದಿ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು, ಶ್ರೀ ಅಬ್ದುಲ್ ರಜಾಕ್, ಅಧೀಕ್ಷಕರು, ಹಾಗೂ ಶ್ರೀ ಬಾಬುರಾವ್ ಕುಂಬಾರ, ಪ್ರ.ದ.ಸ., ಅವರುಗಳಿಂದ ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಕೆಯಾಗಿರುವುದಿಲ್ಲ. 6 ಮಂದಿ ಆಪಾದಿತರು ಸಲ್ಲಿಸಿದ ಪ್ರತಿ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಿ, ಶ್ರೀ ನಿವರ್ತಿ, ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಪ್ರಕಾಶ್ ಟಾಳೆ, ಪ್ರ.ದ.ಸ., ಶ್ರೀ ದಯಾನಂದ, ದ್ವಿ.ದ.ಸ., ಬಿ.ಇ.ಓ. ಕಛೇರಿ, ಔರಾದ್ ತಾಲ್ಲೂಕು, ಇವರುಗಳ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲ ಎಂದು ತೀರ್ಮಾನಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ 31-08-2009ರ ಆದೇಶದಲ್ಲಿ ಅವರುಗಳ ವಿರುದ್ಧದ ಆರೋಪದಿಂದ ಅವರುಗಳನ್ನು ದೋಷಮುಕ್ತಗೊಳಿಸಲಾಗಿದೆ ಹಾಗೂ ಶ್ರೀ ಎಂ. ಎನ್. ಶಿಂಧೆ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು ಇವರು ಆರೋಪ ಪಟ್ಟಿ ಜಾರಿಗೆ ಮುಂಚೆ ನಿಧನರಾದ ಕಾರಣ ಅವರ ವಿರುದ್ಧ ಪ್ರಸ್ತಾಪಿಸಲಾದ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ 05-10-2009ರ ಆದೇಶದಲ್ಲಿ ಇನ್ನುಳಿದ 5, ಆರೋಪಿತರುಗಳಾದ ಶ್ರೀ ಟಿ. ಆರ್. ದೊಡ್ಡೆ, ಶ್ರೀ ವೈಜನಾಥ್ ಶಿಂಧೆ, ಶ್ರೀ ಮೌರೆ ಪಿ.ಆರ್. ಶ್ರೀ ಅಬ್ದುಲ್ ರಜಾಕ್, ಶ್ರೀ ಬಾಬುರಾವ್ ಕುಂಬಾರ ಇವರುಗಳ ವಿರುದ್ಧದ ಆರೋಪಗಳ ಸಂಬಂಧ ಹೆಚ್ಚಿನ ವಿಚಾರಣೆ ನಡೆಸಲು ತೀರ್ಮಾನಿಸಿ, ಶ್ರೀ ಎ. ವಿಜಯಮೂರ್ತಿ, ನಿವೃತ್ತ ಹೈಕೋರ್ಟ್, ರಿಜಿಸ್ಟ್ರಾರ್, ಬೆಂಗಳೂರು, ಇವರನ್ನು

ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶಿಕ್ಷಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಬೀದರ್ ಜಿಲ್ಲೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿರುತ್ತದೆ.

ವಿಚಾರಣಾಧಿಕಾರಿಗಳು ಈ ಕೆಳಕಂಡ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ದಿನಾಂಕ 09–12–2010ರಂದು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

**ಆರೋಪಗಳ ಸಂಕ್ಷಿಪ್ತ ವಿವರ:–**

1. **ಶ್ರೀ ಟಿ.ಆರ್. ದೊಡ್ಡೆ, ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ**

   **ಆರೋಪ–1:** ಪ್ರಾಥಮಿಕ ಶಾಲಾ ಶಿಕ್ಷಕರಿಗೆ (13 ಮಂದಿ) ಕನ್ನಡ ಭಾಷಾ ಪರೀಕ್ಷೆ ಪಾಸಾದ/ಪಾಸಾಗಿರುವರೆಂದು ಭಾವಿಸಿ, ಒಂದು ವಿಶೇಷ ವಾರ್ಷಿಕ ವೇತನ ಬಡ್ತಿ ಮಂಜೂರು ಮಾಡಿ ಸರ್ಕಾರಕ್ಕೆ ರೂ. 9776/–ಗಳನ್ನು ನಷ್ಟ ಮಾಡಿರುತ್ತೀರಿ.

   **ಆರೋಪ–2:** ಶ್ರೀ ನಾಗಶೆಟ್ಟಿ, ಶಿಕ್ಷಕರ ಹಕ್ಕಿನಲ್ಲಿ 12 ಗಳಿಕೆ ರಜೆ ಇದ್ದು, 112 ಎಂದು ಮಂಜೂರು ಮಾಡಿ, ರೂ. 33,092/–ಗಳನ್ನು ಗಳಿಕೆ ರಜೆ ನಗದೀಕರಣಗೊಳಿಸಿರುತ್ತೀರಿ, ರೂ. 29,546/–ಗಳನ್ನು ವಾಪಸ್ಸು ಕಟ್ಟಿ ರೂ. 3,548/– ಹಣ ದುರುಪಯೋಗ ಮಾಡಿರುತ್ತೀರಿ.

   **ಆರೋಪ–3:** ಶ್ರೀ ಅಪ್ಪಣ್ಣಾ, ದೈಹಿಕ ಶಿಕ್ಷಕರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿಂತಾಕಿ, ಇವರು ಕರ್ತವ್ಯಕ್ಕೆ ಗೈರು ಹಾಜರಾದ ಬಗ್ಗೆ ಮುಖ್ಯ ಗುರುಗಳು ವರದಿ ನೀಡಿದ್ದರೂ, ಗೈರು ಹಾಜರಿಯ ಅವಧಿಯ ಬಾಕಿ ವೇತನ ರೂ. 31,119/–ಗಳ ನಗದೀಕರಣಕ್ಕೆ ಕಾರಣರಾಗಿರುತ್ತೀರಿ.

2. **ಶ್ರೀ ವೈಜನಾಥ ಶಿಂಥೆ, ಬಿ.ಆರ್.ಸಿ. ಸಮನ್ವಯಾಧಿಕಾರಿ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ.**

   **ಆರೋಪ:** ಬೇಸಿಗೆ ರಜೆಯಲ್ಲಿ ನಡೆದ ವಸತಿ ಸಹಿತ ಚಿಣ್ಣರ ಅಂಗಳ ಕೇಂದ್ರ ಕಮಲಾನಗರ, ಇಲ್ಲಿ 54 ಮಕ್ಕಳಿದ್ದು, ಪ್ರತಿಶತ 90 ಹಾಜರಾತಿ ನಮೂದಿಸಿ ಹಣ ದುರುಪಯೋಗ ಪಡಿಸಿರುತ್ತೀರಿ.

3. **ಶ್ರೀ ಪಿ. ಆರ್. ಮೌರೆ, ವ್ಯವಸ್ಥಾಪಕರು, ಬಿಇಓ ಕಛೇರಿ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ.**

   **ಆರೋಪ:** 2004–05ನೇ ಸಾಲಿನ ಪ್ರಾಥಮಿಕ ಶಾಲಾ ಶಿಕ್ಷಕರು/ಮುಖ್ಯ ಶಿಕ್ಷಕರು ನಿಯೋಜನೆಯನ್ನು ಶಿಕ್ಷಕರ ಹಿತದೃಷ್ಟಿಯಿಂದ ನಿಯಮಬಾಹಿರವಾಗಿ ಮಾಡಿರುತ್ತೀರಿ.

4. **ಶ್ರೀ ಅಬ್ದುಲ್ ರಜಾಕ್, ಅಧೀಕ್ಷಕರು, ಬಿಇಓ ಕಛೇರಿ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ.**

   **ಆರೋಪ–1:** ಪ್ರಾಥಮಿಕ ಶಾಲಾ ಶಿಕ್ಷಕರಿಗೆ (13 ಮಂದಿ) ಕನ್ನಡ ಭಾಷಾ ಪರೀಕ್ಷೆ ಪಾಸಾಗಿರುವರೆಂದು ಭಾವಿಸಿ, ಒಂದು ವಿಶೇಷ ವೇತನ ಬಡ್ತಿ ಮಂಜೂರು ಮಾಡಿ ಸರ್ಕಾರಕ್ಕೆ ರೂ. 9776/–ಗಳನ್ನು ನಷ್ಟ ಮಾಡಿರುತ್ತೀರಿ.

   **ಆರೋಪ–2:** ಶ್ರೀ ನಾಗಶೆಟ್ಟಿ, ಶಿಕ್ಷಕರು, ಇವರ ಹಕ್ಕಿನಲ್ಲಿ 12 ಗಳಿಕೆ ರಜೆ ಇದ್ದು, 112 ಎಂದು ಮಂಜೂರು ಮಾಡಿ, ರೂ. 33,092/–ಗಳನ್ನು ಗಳಿಕೆ ರಜೆ ನಗದೀಕರಣಗೊಳಿಸಿರುತ್ತೀರಿ. ರೂ. 29,546/–ಗಳನ್ನು ವಾಪಸ್ಸು ಕಟ್ಟಿ ರೂ. 3,548/–ಗಳ ಹಣ ದುರುಪಯೋಗ ಮಾಡಿರುತ್ತೀರಿ.

   **ಆರೋಪ–3:** ಶ್ರೀಮತಿ ಇಂದುಮತಿ, ಸಹ ಶಿಕ್ಷಕಿ, ಇವರ 4ನೇ ಹೆರಿಗೆಗೆ ರಜೆ ಮಂಜೂರು ಮಾಡಿ ರೂ. 5,584/– ವೇತನ ಡ್ರಾ ಮಾಡಲು ಕಾರಣರಾಗಿರುತ್ತೀರಿ.

   **ಆರೋಪ–4:** ಶ್ರೀ ಅಪ್ಪಣ್ಣಾ, ದೈಹಿಕ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿಂತಾಕಿ, ಇವರು ಕರ್ತವ್ಯಕ್ಕೆ ಗೈರು ಹಾಜರಾದ ಬಗ್ಗೆ ಮುಖ್ಯ ಗುರುಗಳು ವರದಿ ನೀಡಿದ್ದರೂ, ಗೈರು ಹಾಜರಿಯ ಅವಧಿಯ ಬಾಕಿ ವೇತನ ರೂ. 31,119/–ಗಳ ನಗದೀಕರಣಕ್ಕೆ ಕಾರಣರಾಗಿರುತ್ತೀರಿ.

   **ಆರೋಪ–5:** 2004–05ನೇ ಸಾಲಿನಲ್ಲಿ ಶಿಕ್ಷಕರ ಹಿತದೃಷ್ಟಿಯಿಂದ ನಿಯಮಬಾಹಿರ ನಿಯೋಜನೆ ಮಾಡಿರುತ್ತೀರಿ.

5. **ಶ್ರೀ ಬಾಬುರಾವ್ ಕುಂಬಾರ, ಪ್ರ.ದ.ಸ., ಬಿಇಓ ಕಛೇರಿ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ.**

   **ಆರೋಪ–1:** ಪ್ರಾಥಮಿಕ ಶಾಲಾ ಶಿಕ್ಷಕರಿಗೆ (13 ಮಂದಿ) ಕನ್ನಡ ಭಾಷಾ ಪರೀಕ್ಷೆ ಪಾಸಾದ/ಪಾಸಾಗಿರುವರೆಂದು ಭಾವಿಸಿ, ಒಂದು ವಿಶೇಷ ವಾರ್ಷಿಕ ವೇತನ ಬಡ್ತಿ ಮಂಜೂರು ಮಾಡಿ ಸರ್ಕಾರಕ್ಕೆ ರೂ. 9776/–ಗಳನ್ನು ನಷ್ಟ ಮಾಡಿರುತ್ತೀರಿ.

   **ಆರೋಪ–2:** ಶ್ರೀ ವಿಜಯಾನಂದ, ಸಹ ಶಿಕ್ಷಕರು, ಇವರು ವೈದ್ಯಕೀಯ ರಜೆಯಲ್ಲಿದ್ದಾರೆಂದು ಫೆಬ್ರವರಿ–04 ಮತ್ತು ಮಾರ್ಚ–04ರ ವೇತನವನ್ನು ಡ್ರಾ ಮಾಡಿದ್ದು ಸದರಿಯವರು ಬ್ಯಾಕ್‌ಲಾಗ್ ಇಂಜಿನೀಯರ್ ಹುದ್ದೆಯಲ್ಲಿ ಹಾಜರಾಗಿ ಈ ಅವಧಿಯ ವೇತನವನ್ನು ಎರಡು ಕಡೆ ನಗದೀಕರಿಸಲು ಕಾರಣರಾಗಿರುತ್ತೀರಿ.

   **ಆರೋಪ–3:** ಶ್ರೀ ನಾಗಶೆಟ್ಟಿ, ಶಿಕ್ಷಕರು, ಇವರ ಹಕ್ಕಿನಲ್ಲಿ 12 ಗಳಿಕೆ ರಜೆ ಇದ್ದು 112 ಎಂದು ಮಂಜೂರು ಮಾಡಿ ರೂ. 33,092/–ಗಳನ್ನು ಗಳಿಕೆ ರಜೆ ನಗದೀಕರಣಗೊಳಿಸಿರುತ್ತೀರಿ. ರೂ. 29,546/–ಗಳನ್ನು ವಾಪಸ್ಸು ಕಟ್ಟಿ ರೂ. 3,548/–ಹಣ ದುರುಪಯೋಗ ಮಾಡಿರುತ್ತೀರಿ.

   **ಆರೋಪ–4:** ಶ್ರೀಮತಿ ಇಂದುಮತಿ, ಸಹ ಶಿಕ್ಷಕಿ, ಇವರ 4ನೇ ಹೆರಿಗೆಗೆ ರಜೆ ಮಂಜೂರು ಮಾಡಿ ರೂ. 5,584/– ವೇತನ ಡ್ರಾ ಮಾಡಲು ಕಾರಣರಾಗಿರುತ್ತೀರಿ.

   **ಆರೋಪ–5:** 2004–05ನೇ ಸಾಲಿನಲ್ಲಿ ಶಿಕ್ಷಕರ ಹಿತದೃಷ್ಟಿಯಿಂದ ನಿಯಮಬಾಹಿರ ನಿಯೋಜನೆ ಮಾಡಿರುತ್ತೀರಿ.

**ಆರೋಪ–6:** ಶ್ರೀ ಅಪ್ಪಣ್ಣಾ, ದೈಹಿಕ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿಂತಾಕಿ, ಇವರು ಕರ್ತವ್ಯಕ್ಕೆ ಗೈರು ಹಾಜರಾದ ಬಗ್ಗೆ ಮುಖ್ಯ ಗುರುಗಳು ವರದಿ ನೀಡಿದ್ದರೂ, ಗೈರು ಹಾಜರಿಯ ಅವಧಿಯ ಬಾಕಿ ವೇತನ ರೂ. 31,119/–ಗಳ ನಗದೀಕರಣಕ್ಕೆ ಕಾರಣರಾಗಿರುತ್ತೀರಿ.

**ವಿಚಾರಣಾಧಿಕಾರಿಗಳ ವರದಿಯ ಅಂಶಗಳು ಪ್ರತಿ ಆರೋಪಿತರ ಸಂಬಂಧ ಈ ಕೆಳಕಂಡಂತೆ ಇರುತ್ತವೆ**

1) ಶ್ರೀ ಟಿ.ಆರ್. ದೊಡ್ಡೆ, ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ, ಔರಾದ್ ತಾಲ್ಲೂಕು, ಇವರ ವಿರುದ್ಧದ ಎಲ್ಲಾ 3 ಆರೋಪಗಳು ಸಾಬೀತಾಗಿಲ್ಲ.
2) ಶ್ರೀ ವೈಜನಾಥ ಶಿಂಧೆ, ಬಿ.ಆರ್.ಸಿ. ಸಮನ್ವಯ ಅಧಿಕಾರಿ, ಔರಾದ್ ತಾಲ್ಲೂಕು, ಇವರ ವಿರುದ್ಧದ ಆರೋಪ ಭಾಗಶಃ ಸಾಬೀತಾಗಿದೆ.
3) ಶ್ರೀ ಪಿ. ಆರ್. ಮೌರೆ, ವ್ಯವಸ್ಥಾಪಕರು, ಬಿಇಓ ಕಛೇರಿ, ಔರಾದ್ ತಾಲ್ಲೂಕು, ಇವರ ವಿರುದ್ಧದ ಆರೋಪವು ಸಾಬೀತಾಗಿಲ್ಲ.
4) ಶ್ರೀ ಅಬ್ದುಲ್ ರಜಾಕ್, ಅಧೀಕ್ಷಕರು, ಬಿಇಓ ಕಛೇರಿ, ಔರಾದ್ ತಾಲ್ಲೂಕು, ಇವರ ವಿರುದ್ಧದ 5 ಆರೋಪಗಳ ಸಂಬಂಧ ಆರೋಪ 1 ಮತ್ತು 5 ಸಾಬೀತಾಗಿರುವುದಿಲ್ಲ, ಆರೋಪ 2, 3 ಮತ್ತು 4 ಸಾಬೀತಾಗಿದೆ.
5) ಶ್ರೀ ಬಾಬುರಾವ್ ಕುಂಬಾರ, ಪ್ರ.ದ.ಸ., ಬಿಇಓ ಕಛೇರಿ, ಔರಾದ್ ತಾಲ್ಲೂಕು, ಇವರ ವಿರುದ್ಧದ 6 ಆರೋಪಗಳ ಸಂಬಂಧ ಆರೋಪ 1, 2, 3 ಮತ್ತು 5 ಸಾಬೀತಾಗಿಲ್ಲ, ಆರೋಪ 4 ಮತ್ತು 6 ಸಾಬೀತಾಗಿವೆ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಲಗತ್ತಿಸಿ ಆಪಾದಿತರುಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿನಾಂಕ 22–03–2011 ರಂತೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿರುತ್ತದೆ. ಈ ಸಂಬಂಧ ಆಪಾದಿತ ಅಧಿಕಾರಿ/ನೌಕರರುಗಳಿಗೆ ವಿವಿಧ ದಿನಾಂಕಗಳೆಂದು ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಸಿ, ಈ ಕೆಳಕಂಡಂತೆ ಆರೋಪಗಳನ್ನು ನಿರಾಕರಿಸಿರುತ್ತಾರೆ.

**ಶ್ರೀ ಟಿ.ಆರ್. ದೊಡ್ಡೆ:–** ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರುತ್ತೇನೆ.

**ಶ್ರೀ ವೈಜನಾಥ ಶಿಂಧೆ:–** ವಿಚಾರಣಾಧಿಕಾರಿಗಳ ವರದಿಯಲ್ಲಿ ಆರೋಪ ಭಾಗಶಃ ಸಾಬೀತಾಗಿದೆ ಎಂದು ತಿಳಿಸಿರುವ ಅಂಶವನ್ನು ಒಪ್ಪಲು ಬರುವುದಿಲ್ಲ. ಕಾರಣ ಆರೋಪ ಸಾಬೀತು ಪಡಿಸುವ ಬಗ್ಗೆ ದಾಖಲೆಗಳನ್ನು ವಿಚಾರಣೆಯಲ್ಲಿ ಒದಗಿಸಿಲ್ಲ ಹಾಗೂ ಪಾಟೀ ಸವಾಲಿನಲ್ಲಿ ಆರೋಪ ಸಾಬೀತು ಪಡಿಸಿಲ್ಲ, ಬೀದರ್ ಜಿಲ್ಲೆಯ 2 ಚಿಣ್ಣರ ಅಂಗಳ ಕೇಂದ್ರಗಳಾದ ಔರಾದ್ ಹಾಗೂ ಕಮಲಪುರಗಳಲ್ಲಿ ಕಾರ್ಯಕ್ರಮ ನಡೆಸಲು ಉಪ ಯೋಜನಾ ಸಮನ್ವಯಾಧಿಕಾರಿಗಳು 2004–05 ರಲ್ಲಿ ಸೂಚಿಸಿದ್ದು, ಈ ಸಂಬಂಧ ಔರಾದ್ ಕೇಂದ್ರಕ್ಕೆ ಮಾತ್ರ ರೂ. 69,482/–ಗಳನ್ನು ಬಿಡುಗಡೆ ಮಾಡಿದ ಸಂಬಂಧ ಖರ್ಚು ಭರಿಸಿ ಉಳಿಕೆ ಮೊತ್ತ ರೂ. 15,666/–ಗಳನ್ನು ಉಪ ನಿರ್ದೇಶಕರ ಖಾತೆಗೆ ಜಮಾ ಮಾಡಿರುತ್ತೇನೆ. ಖರ್ಚು ಭರಿಸಿದ ದಾಖಲೆಗಳ ಜೆರಾಕ್ಸ್ ಪ್ರತಿಯನ್ನು ಅವಗಾಹನೆಗೆ ಸಲ್ಲಿಸಿರುತ್ತೇನೆ. ಕಮಲ ನಗರ ಚಿಣ್ಣರ ಅಂಗಳ ಕೇಂದ್ರಕ್ಕೆ ಯಾವುದೇ ಅನುದಾನ ಬಿಡುಗಡೆಯಾಗಿಲ್ಲ. ಆದ್ದರಿಂದ ಹಣ ದುರುಪಯೋಗವಾಗಿದೆ ಎಂಬ ಅಂಶ ಸಾಬೀತಾಗುವುದಿಲ್ಲ ಆದ್ದರಿಂದ ಆರೋಪದಿಂದ ಮುಕ್ತಗೊಳಿಸುವಂತೆ ಕೋರುತ್ತೇನೆ.

**ಶ್ರೀ ಪಿ. ಆರ್. ಮೌರೆ:–** ವಿಚಾರಣಾಧಿಕಾರಿಗಳು ಶ್ರಿ ಗಣಪತ ರಾವ್, ಮುಖ್ಯ ಶಿಕ್ಷಕರು, ಸ.ಹಿ.ಪ್ರಾ.ಶಾ. ಬಸವನಗಲ್ಲಿ, ಔರಾದ್ ಇವರ ನಿಯೋಜನೆ ಸಂಬಂಧ ವಿಚಾರಣಾ ವೇಳೆಯಲ್ಲಿ ಪರಿಶೀಲಿಸಿ, ಸದರಿ ನಿಯೋಜನೆಯ ಕಡತವನ್ನು ವಿಷಯ ನಿರ್ವಾಹಕರು ನೇರವಾಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಸಲ್ಲಿಸಿರುವ ಅಂಶವನ್ನು ಗಮನಿಸಿ, ಈ ಪ್ರಕರಣದಲ್ಲಿ ವ್ಯವಸ್ಥಾಪಕರಿಂದ ಕಡತ ನಿರ್ವಹಣೆ ಆಗಿಲ್ಲ ಎಂಬುದನ್ನು ದೃಢೀಕರಿಸಿರುತ್ತಾರೆ. ಆದ್ದರಿಂದ ಆರೋಪ ಸಾಬೀತಾಗಿಲ್ಲ ಎಂಬ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿರುತ್ತೇನೆ.

**ಶ್ರೀ ಅಬ್ದುಲ್ ರಜಾಕ್:–** ಶ್ರೀ ನಾಗಶೆಟ್ಟಿ, ಇವರ ಗಳಿಕೆ ರಜೆ ಮಂಜೂರಾತಿ ಸಂಬಂಧ ಮೇಲಾಧಿಕಾರಿಗಳಿಗೆ ನನ್ನ ಮೂಲಕ ಕಡತ ಸಲ್ಲಿಕೆಯಾಗಿರುವುದಿಲ್ಲ ಹಾಗೂ ಸೇವಾ ಪುಸ್ತಕದಲ್ಲಿ ರಜೆಯ ಮಂಜೂರಾತಿ ಬಗ್ಗೆ ನಾನು ನಮೂದಿಸಿರುವುದಿಲ್ಲ. ಆದ್ದರಿಂದ ಆರೋಪವು ಸತ್ಯಕ್ಕೆ ದೂರವಾಗಿದ್ದು, ಆರೋಪದಿಂದ ಮುಕ್ತಗೊಳಿಸಲು ಕೋರುತ್ತೇನೆ.

ಶ್ರೀಮತಿ ಇಂದುಮತಿ, ಶಿಕ್ಷಕಿಯವರಿಗೆ ಹೆರಿಗೆ ರಜೆ ಮಂಜೂರು ಮಾಡಿದ ಸಂಬಂಧ ನೀಡಿದ ಮನವಿ ಹಾಗೂ ಮಂಜೂರಾತಿ ಆದೇಶ ಇತ್ಯಾದಿಗಳು ನನ್ನ ಮೂಲಕ ನಿರ್ವಹಣೆ ಆಗಿರುವುದಿಲ್ಲ.

ಶ್ರೀ ಅಪ್ಪಣ್ಣ, ದೈಹಿಕ ಶಿಕ್ಷಕರು, ಇವರ ಗೈರು ಹಾಜರಿ ಬಗ್ಗೆ ಮುಖ್ಯ ಗುರುಗಳು ಬಿ.ಇ.ಓ. ರವರಿಗೆ ನೇರವಾಗಿ ಮಾಹಿತಿ ನೀಡಿರುತ್ತಾರೆ. ವಿಷಯ ನಿರ್ವಾಹಕರು ಹಾಗೂ ವ್ಯವಸ್ಥಾಪಕರು ಮಂಜೂರಾತಿಗೆ ಕಡತ ಸಲ್ಲಿಸಿರುತ್ತಾರೆ. ಆದ್ದರಿಂದ ಇಲ್ಲಿ ನನ್ನ ಪಾತ್ರ ಇರುವುದಿಲ್ಲ. ಆದ್ದರಿಂದ ಆರೋಪದಿಂದ ಮುಕ್ತಗೊಳಿಸಲು ಕೋರುತ್ತೇನೆ.

**ಶ್ರೀ ಬಾಬುರಾವ್ ಕುಂಬಾರ:–** ಶ್ರೀಮತಿ ಇಂದುಮತಿ, ಸಹ ಶಿಕ್ಷಕಿ, ಇವರು ಹೆರಿಗೆ ರಜೆ ಅರ್ಜಿ ಮನವಿ ಜೊತೆ ಎರಡು ಜೀವಂತ ಮಕ್ಕಳು ಇರುವುದಾಗಿ ಮುಚ್ಚಳಿಕೆ ಬರೆದು ಕೊಟ್ಟಿದ್ದು, ಮಂಜೂರಾತಿಗಾಗಿ ಟಿಪ್ಪಣಿ ಹಾಕಿ ಮೇಲಾಧಿಕಾರಿಗೆ ಸಲ್ಲಿಸಿರುತ್ತೇನೆ. ವೇತನ ಡ್ರಾ ಮತ್ತು ವಿತರಣೆ ಮಾಡುವ ವಿಭಾಗ ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ್ದು, ವೇತನ ಡ್ರಾ ಆದ ಬಗ್ಗೆ ಆಗಲೀ, ವೇತನ ನೀಡುವ ಬಗ್ಗೆ ಆಗಲೀ ನನಗೆ ಸಂಬಂಧ ಇರುವುದಿಲ್ಲ. ಆದ್ದರಿಂದ ಆರೋಪ ಕೈಬಿಡುವಂತೆ ಕೋರಿದೆ.

ಈ ಆರೋಪದ ಸಂಬಂಧ ವಿಚಾರಣೆ ವೇಳೆಯಲ್ಲಿ ನಾನು ನೀಡಿದ ಹೇಳಿಕೆ ದಾಖಲೆಗಳನ್ನು ವಿಚಾರಣಾಧಿಕಾರಿಗಳು ಪರಿಗಣಿಸಿರುವುದಿಲ್ಲ. ನಾನು ಕಛೇರಿ ಆಡಳಿತ ವಿಭಾಗದ ವಿಷಯ ನಿರ್ವಹಣೆ ಮಾಡುತ್ತಿದ್ದು, ವೇತನ ಡ್ರಾ ಮಾಡುವ ವಿಭಾಗ ಲೆಕ್ಕಪತ್ರ ಶಾಖೆಗೆ ಸಂಬಂಧಿಸಿರುತ್ತದೆ. ಶ್ರೀ ಅಪ್ಪಣ್ಣ ದೈಹಿಕ ಶಿಕ್ಷಕರ ಅನಧಿಕೃತ ಗೈರು ಹಾಜರಿ ಬಗ್ಗೆ ನನಗೆ ಯಾವುದೇ ಮಾಹಿತಿ ಬಂದಿರುವುದಿಲ್ಲ. ಆದ್ದರಿಂದ ನನ್ನ ಮೇಲಿನ ಆರೋಪ ಕೈಬಿಡುವಂತೆ ಕೋರುತ್ತೇನೆ.

ಸರ್ಕಾರವು ಪ್ರತಿ ಆಪಾದಿತರುಗಳು ನೀಡಿರುವ ಸಮಜಾಯಿಷಿ/ಹೇಳಿಕೆಗಳನ್ನು ಕೂಲಂಕಷವಾಗಿ ಈ ಕೆಳಕಂಡಂತೆ ಪರಿಶೀಲಿಸಿದೆ.

1) ಶ್ರೀ ಟಿ. ಆರ್. ದೊಡ್ಡೆ, ಹಿಂದಿನ ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ, ಔರದ್ ತಾಲ್ಲೂಕು ಇವರ ವಿರುದ್ಧದ 3 ಆರೋಪಗಳು ಸಾಬೀತಾಗುವುದಿಲ್ಲ ಎಂಬ ವಿಚಾರಣಾಧಿಕಾರಿಗಳ ಅಭಿಪ್ರಾಯ ಒಪ್ಪಿದೆ. 2) ಶ್ರೀ ವೈಜನಾಥ ಶಿಂಧೆ, ಹಿಂದಿನ ಬಿ.ಆರ್.ಸಿ. ಸಮನ್ವಯಾಧಿಕಾರಿ, ಔರದ್ ತಾಲ್ಲೂಕು, ಇವರು

ನೀಡಿರುವ ಸಮಜಾಯಿಷಿಯನ್ನು ಒಪ್ಪಿದೆ. 3) ಶ್ರೀ ಪಿ. ಆರ್. ಮೌರೆ, ಹಿಂದಿನ ವ್ಯವಸ್ಥಾಪಕರು, ಬಿಇಓ ಕಛೇರಿ, ಔರದ್ ತಾಲ್ಲೂಕು, ಇವರ ವಿರುದ್ಧದ 1 ಆರೋಪ ಸಾಬೀತಾಗಿಲ್ಲ ಎಂಬ ವಿಚಾರಣಾಧಿಕಾರಿಗಳ ಅಭಿಪ್ರಾಯ ಒಪ್ಪಿದೆ. 4) ಶ್ರೀ ಅಬ್ದುಲ್ ರಜಾಕ್, ಹಿಂದಿನ ಅಧೀಕ್ಷಕರು, ಬಿಇಓ ಕಛೇರಿ, ಔರದ್ ತಾಲ್ಲೂಕು, ಇವರ ವಿರುದ್ಧದ 3 ಆರೋಪಗಳು ಸಾಬೀತಾಗುತ್ತವೆ ಎಂಬ ವಿಚಾರಣಾಧಿಕಾರಿಗಳ ಅಭಿಪ್ರಾಯ ಒಪ್ಪಿ ಆಪಾದಿತರು ನೀಡಿರುವ ಸಮಜಾಹಿಷಿಗೆ ಪೂರಕ ದಾಖಲೆಗಳನ್ನು ಒದಗಿಸಿಲ್ಲದ ಕಾರಣ ಅವರ ಹೇಳಿಕೆ ಒಪ್ಪಿಲ್ಲ. ಹಾಗೂ 5) ಶ್ರೀ ಬಾಬುರಾವ್ ಕುಂಬಾರ, ಹಿಂದಿನ ಪ್ರ.ದ.ಸ., ಬಿಇಓ ಕಛೇರಿ, ಔರದ್ ತಾಲ್ಲೂಕು, ಇವರ ವಿರುದ್ಧದ 2 ಆರೋಪಗಳು ಸಾಬೀತಾಗುತ್ತವೆ ಎಂಬ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ ಆಪಾದಿತರು ಸಮಜಾಯಿಷಿ ಸಂಬಂಧ ಸಮರ್ಥನೀಯ ದಾಖಲೆಗಳನ್ನು ಒದಗಿಸಿಲ್ಲದ ಕಾರಣ ಅವರ ಹೇಳಿಕೆ ಒಪ್ಪಿಲ್ಲ.

ಆದ್ದರಿಂದ ಸರ್ಕಾರವು ಆಪಾದಿತರುಗಳಾದ ಶ್ರೀ ಟಿ.ಆರ್. ದೊಡ್ಡೆ, ಶ್ರೀ ವೈಜನಾಥ್ ಶಿಂಧೆ ಹಾಗೂ ಶ್ರೀ ಪಿ.ಆರ್. ಮೌರೆ ಇವರುಗಳ ವಿರುದ್ಧದ ಆರೋಪದಿಂದ ದೋಷಮುಕ್ತಗೊಳಿಸಲು ತೀರ್ಮಾನಿಸಿದೆ ಹಾಗೂ ಶ್ರೀ ಅಬ್ದುಲ್ ರಜಾಕ್ ಹಾಗೂ ಶ್ರೀ ಬಾಬುರಾವ್ ಕುಂಬಾರ ಇವರುಗಳ ವಿರುದ್ಧದ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಅವರುಗಳಿಗೆ ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 66 ಡಿಜಿಓ 2010, ಬೆಂಗಳೂರು, ದಿನಾಂಕ 26–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಪಾದಿತರಾದ 1) ಶ್ರೀ ಟಿ. ಆರ್. ದೊಡ್ಡೆ, ಹಿಂದಿನ ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ, ಔರದ್ ತಾಲ್ಲೂಕು, ಹಾಲಿ ವಿಷಯ ಪರಿವೀಕ್ಷಕರು, ಉಪ ನಿರ್ದೇಶಕರ ಕಛೇರಿ, ಬೀದರ್ 2) ಶ್ರೀ ವೈಜನಾಥ ಶಿಂಧೆ, ಹಿಂದಿನ ಬಿ.ಆರ್.ಸಿ. ಸಮನ್ವಯ ಅಧಿಕಾರಿ, ಔರದ್ ತಾಲ್ಲೂಕು, ಹಾಲಿ ವಿಷಯ ಪರಿವೀಕ್ಷಕರು, ಉಪ ನಿರ್ದೇಶಕರ ಕಛೇರಿ, ಬೀದರ್ ಹಾಗೂ 3) ಶ್ರೀ ಪಿ. ಆರ್. ಮೌರೆ, ಹಿಂದಿನ ವ್ಯವಸ್ಥಾಪಕರು, ಬಿಇಓ ಕಛೇರಿ, ಔರದ್ ತಾಲ್ಲೂಕು, (ನಿವೃತ್ತರಾಗಿರುತ್ತಾರೆ) ಇವರುಗಳ ವಿರುದ್ಧದ ಆರೋಪ/ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿಲ್ಲದ ಕಾರಣ ಅವರುಗಳ ವಿರುದ್ಧದ ಆರೋಪ/ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಆಪಾದಿತರಾದ 4) ಶ್ರಿ ಅಬ್ದುಲ್ ರಜಾಕ್, ಹಿಂದಿನ ಅಧೀಕ್ಷಕರು, ಬಿಇಓ ಕಛೇರಿ, ಔರದ್ ತಾಲ್ಲೂಕು, ಹಾಲಿ ಅಧೀಕ್ಷಕರು, ಡಯಟ್, ಬೀದರ್ ಇವರ ವಿರುದ್ಧದ 3 ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ–8(iii) ರನ್ವಯ ಅವರ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಿಲ್ಲದಂತೆ (without cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಹಾಗೂ 5) ಶ್ರೀ ಬಾಬುರಾವ್ ಕುಂಬಾರ, ಹಿಂದಿನ ಪ್ರ.ದ.ಸ., ಬಿಇಓ ಕಛೇರಿ, ಔರದ್ ತಾಲ್ಲೂಕು, ಇವರ ವಿರುದ್ಧದ 2 ಆರೋಪಗಳು ಸಾಬೀತಾಗಿದ್ದು ಅವರು ಪ್ರಸ್ತುತ ನಿವೃತ್ತಿ ಹೊಂದಿರುವುದರಿಂದ ಇವರ ನಿವೃತ್ತಿ ವೇತನದಲ್ಲಿ ಶೇ. 20 ರಷ್ಟನ್ನು 2 ವರ್ಷಗಳ ಅವಧಿಯವರೆಗೆ ತಡೆಹಿಡಿಯುವ ದಂಡನೆ ವಿಧಿಸುವ ಸಂಬಂಧ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ನಂತರ ಪ್ರತ್ಯೇಕ ದಂಡನಾದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಆಡಳಿತ ಮತ್ತು ಸಮಿತಿಗಳು)

ಪಿ.ಆರ್. 1030

## TRANSPORT SECRETARIAT

**Sub:** Setting up of Public Private Partnership (PPP) Cell for the Transport Department reg.,-

**Read:** Proceedings of the meeting held on 16-2-2012 and workshop held on 23-2-2012 under the Chairmanship of the Principal Secretary Transport Department.

**Preamble:**

The Ministry of Finance, Government of India has advised the State Governments to set up a Public Private Partnership (PPP) Cell to give a thrust for implementing projects on PPP basis. Hence, Government of Karnataka is also giving a thrust to implement various infrastructure projects on PPP basis. For this, IDD has appointed consultants for various departments to identify projects that can be taken up on PPP basis.

In this context, in the meeting held on 16-2-2012, it was to decide to form a PPP Cell in Transport Department so as to assist the Government in formulating, processing, evaluating and monitoring the PPP projects in the transport sector.

**Government Order No. SARIE 53 RIC 2012, Bangalore, dated 22-03-2012**

The cell shall work towards creating a shelf of PPP projects which could be converted into actionable schemes on the ground. The cell shall act as a facilitator in the whole process from project identification to award of the project. The cell shall draw upon the professional/technical expertise available in the STU's for formulation, processing evaluating and monitoring the PPP projects.

**Composition of PPP cell for the Transport Department**

| | | | |
|---|---|---|---|
| 1. | The managing Director KSRTC | … | Chairman |
| 2. | Deputy Secretary, Transport Department | … | Member |
| 3. | Transport Commissioner | … | ,, |
| 4. | Managing Director, BMTC | … | ,, |
| 5. | Managing Director, NEKRTC | … | ,, |
| 6. | Managing Director, NWKRTC | … | ,, |
| 7. | Managing Director, DDUTTL | … | ,, |

8. CPSO, KSRTC ... ,,
9. Chief Engineer, KSRTC ... ,,

**Functions for the PPP Cell:**

Indentify, conceptualize and create a shelf of projects in consultation with the various corporations and sub-departments and recommend approval of suitable projects for implementation of PPP route.

- Assist various corporations and sub-departments in preparing the pre-feasibility reports through consultants.
- Appoint/select consultants to develop the projects in consulting with the concerned corporations and sub-departments.
- Help respective Corporations to conduct the bidding process for selection of developers
- Interact and co-ordinate with the Government of India, Government of Karnataka and other funding agencies for obtaining their support.
- Develop Internal evaluation guidelines in consultation with the respective Corporations and sub-departments to evaluate and assess he projects.
- Recommend projects to Government of India, Government of Karnataka for grants under viability Gap Funding Scheme.
- Visit, Review and monitor any PPP project under implementation in the Department
- Serve as the repository of all information relating to PPPs in the State, including on best practices, guidelines, schemes, PPP pipelines.
- Vetting PPP documents and conduct project appraisals
- PPP policy or guidelines framing for the department based on State level PPP policy
- Intra and Inter department co-ordination for approval etc.,
- Framing of standard bidding documents for the department projects

The Chairman of the Committee may co-opt/invite additional members as and when required.

By Order and in the name of the Governor of Karnataka
**Ramachandra**
Under Secretary to Government
Transport Department

P.R. 1032

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** Deputy Conservator of Forests (ICT and GIS), Bangalore ಹುದ್ದೆಯನ್ನು ಮೇಲ್ದರ್ಜೆಗೇರಿಸುವ ಬಗ್ಗೆ ಆದೇಶ.–

**ಓದಲಾಗಿದೆ:** ಓದಲಾದ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: A1 IFS, CR-49/2011-12, dated 16-01-2012.

**ಪ್ರಸ್ತಾವನೆ:**

Smt. Saswati Mishra, IFS, Deputy Conservator of Forests (ICT and GIS), Bangalore ಇವರನ್ನು ದಿನಾಂಕ 24–12–11ರ ಅಧಿಸೂಚನೆ ಸಂಖ್ಯೆ: DPAR 124 SFP 11ರಲ್ಲಿ Conservator of Forests ಹುದ್ದೆಗೆ ಬಡ್ತಿ ನೀಡಿ, Conservator of Forests (ICT and GIS), Bangalore ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದ್ದು, ಇವರು ದಿನಾಂಕ 29–12–11 ರಂದು ಈ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುವುದರಿಂದ, Deputy Conservator of Forests (ICT and GIS), Bangalore ವೃಂದೇತರ (ex-cadre) ಹುದ್ದೆಯನ್ನು ದಿನಾಂಕ 29–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರೆಗೆ Conservator of Forests (ICT and GIS), Bangalore ಎಂದು ಉನ್ನತೀಕರಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 022 ಅಪಸೇ 2012, ಬೆಂಗಳೂರು, ದಿನಾಂಕ 22–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು Deputy Conservator of Forests (ICT and GIS), Bangalore ವೃಂದೇತರ (ex-cadre) ಹುದ್ದೆಯನ್ನು ದಿನಾಂಕ 29–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರೆಗೆ Conservator of Forests (ICT and GIS), Bangalore ಹುದ್ದೆಯನ್ನು ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸಂಖ್ಯೆ: ಆಇ 115 ವೆಚ್ಚ–5/2012, ದಿನಾಂಕ 05–03–2012 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 1033

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕಿನ ಶಿರಗಾಂವ್ ಗ್ರಾಮದ ಬಸವಣ್ಣ ಕೆರೆಗೆ ದೂಧಗಂಗಾ ನದಿಯಿಂದ ಹಾಗು ಕಾಡಾಪೂರ ಗ್ರಾಮದ ಕೆರೆಗೆ ಕೃಷ್ಣಾ ನದಿಯಿಂದ ನೀರು ತುಂಬಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ, ಇವರ ಪತ್ರ ಸಂಖ್ಯೆ: ಮು.ಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2011–12/1382 ದಿನಾಂಕ: 13–03–2012.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಕೆಳಕಂಡ ಕೆರೆಗಳು ಮಳೆ ನೀರಿನಿಂದ ಪೂರ್ಣವಾಗಿ ತುಂಬದೇ ಇರುವುದರಿಂದ ಈ ಕೆರೆಗಳಿಗೆ ಅನುಕ್ರಮವಾಗಿ ದೂಧಗಂಗಾ ಮತ್ತು ಕೃಷ್ಣಾ ನದಿಗಳಿಂದ ನೀರನ್ನು ತುಂಬಿಸುವ ಪ್ರಸ್ತಾವನೆಯನ್ನು ಜಲ ಸಂಪನ್ಮೂಲ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕರ್ನಾಟಕ ನೀರಾವರಿ ನಿಗಮದ ಪರಿಶೀಲನೆಯಲ್ಲಿರುತ್ತದೆ.

| ಕ್ರಮ ಸಂಖ್ಯೆ | ಕೆರೆಯ ಹೆಸರು | ಕಣಿವೆ (ಸರಣಿ) | ನಿರ್ಮಾಣದ ವರ್ಷ | ನೀರಿನ ಸಂಗ್ರಹಣಾ ಸಾಮರ್ಥ್ಯ (ಎಂಸಿಎಫ್‌ಟಿ) |
|---|---|---|---|---|
| 1 | ಚಿಕ್ಕೋಡಿ ತಾಲ್ಲೂಕಿನ ಶಿರಗಾಂವ ಗ್ರಾಮದ ಬಸವಣ್ಣ ಕೆರೆ | ಕೃಷ್ಣಾ/ದೂಧಗಂಗಾ ಕೆ–1 | 1966 | 6.00 |
| 2 | ಚಿಕ್ಕೋಡಿ ತಾಲ್ಲೂಕಿನ ಕಾಡಾಪೂರ ಗ್ರಾಮದ ಕೆರೆ | ಕೃಷ್ಣಾ/ಕೃಷ್ಣಾ ಕೆ–2 | 1966 | 11.70 |

ಈ ಕೆರೆಗಳಲ್ಲಿ ಬಳಕೆ ಮಾಡಲು ಉದ್ದೇಶಿಸಿದ್ದ ನೀರಿನ ಪರಿಮಾಣವನ್ನು ಈ ಹಿಂದೆ ಸ್ಕೀಂ–ಎ ಅಡಿ ನೀಡಲಾಗಿರುವ ನೀರಿನ ಹಂಚಿಕೆಯಲ್ಲಿ ಪರಿಗಣಿಸಲಾಗಿರುತ್ತದೆ. ಮುಂದುವರೆದು, ಪ್ರಸ್ತುತ ಕೆರೆಗಳಿಗೆ ತುಂಬಿಸಲು ಅವಶ್ಯವಿರುವ ನೀರಿನ ಪರಿಮಾಣವನ್ನು ಸಣ್ಣ ನೀರಾವರಿ ಯೋಜನೆಗಳಿಗೆ ನೀಡಿರುವ ನೀರಿನ ಹಂಚಿಕೆಯ ಪರಿಮಾಣದಲ್ಲಿ ಲಭ್ಯವಾಗುವ ಉಳಿತಾಯದಿಂದ ಭರಿಸಬಹುದಾಗಿದೆ. ಕಾರಣ, ಕೆರೆಗಳಿಗೆ ಅವಶ್ಯವಿರುವ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ನೀರನ್ನು ತುಂಬಿಸುವ ಯೋಜನೆಯನ್ನು ಕೈಗೊಳ್ಳಲು ಜಲ ಸಂಪನ್ಮೂಲ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಈ ಎರಡು ಕೆರೆಗಳನ್ನು ಹಸ್ತಾಂತರಿಸಲು ಪರಿಗಣಿಸಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 07 ಏನೀಯೋ 2012, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕಿನ ಶಿರಗಾಂವ ಗ್ರಾಮದ ಬಸವಣ್ಣ ಕೆರೆ ಹಾಗು ಕಾಡಾಪೂರ ಗ್ರಾಮದ ಕೆರೆಗಳನ್ನು ಅನುಕ್ರಮವಾಗಿ ದೂಧಗಂಗಾ ಹಾಗು ಕೃಷ್ಣಾ ನದಿಗಳಿಂದ ನೀರು ತುಂಬಿಸುವ ಯೋಜನೆ ಕೈಗೊಳ್ಳಲು ಜಲ ಸಂಪನ್ಮೂಲ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1034 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಅಧಿಕಾರಿಗಳ ನಿಯೋಗವು 15ನೇ ಕೀನ್ಯಾ ಅಂತರರಾಷ್ಟ್ರೀಯ ವ್ಯಾಪಾರ ಮೇಳದಲ್ಲಿ ಭಾಗವಹಿಸಿದ ವೆಚ್ಚವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಪತ್ರ ಸಂಖ್ಯೆ: ಕೈವಾಇ: ಎಇಪಿ:ಎ:108:ವಿಐಟಿಸಿ::2011–12, ದಿನಾಂಕ:25–01–2012

**ಪ್ರಸ್ತಾವನೆ :**

ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ತಮ್ಮ ಪತ್ರದಲ್ಲಿ, 2012 ರ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಪೂರಕವಾಗಿ ಬಂಡವಾಳ ಹೂಡಿಕೆದಾರರನ್ನು ಆಕರ್ಷಿಸಲು ಅನುವಾಗುವಂತೆ ಇಲಾಖೆಯ ಅಧಿಕಾರಿಗಳ ನಿಯೋಗವು 15ನೇ ಕೀನ್ಯಾ ಅಂತರರಾಷ್ಟ್ರೀಯ ವ್ಯಾಪಾರಮೇಳದಲ್ಲಿ ಭಾಗವಹಿಸಿದ್ದು ರೂ. 4.54 ಲಕ್ಷ ಹಣ ಕೆಳಕಂಡಂತೆ ವೆಚ್ಚವಾಗಿರುತ್ತದೆ ಎಂದು ತಿಳಿಸಿರುತ್ತಾರೆ.

| ಕ್ರ.ಸಂ. | ವಿಷಯ | | ವೆಚ್ಚ ರೂ |
|---|---|---|---|
| 1 | ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಮಳಿಗೆ (9 ಚದುರ ಅಡಿ) | | 98,000.00 |
| 2 | ಅಧಿಕಾರಿಗಳ ನಿಯೋಗದ ವೆಚ್ಚ | | |
| | ವಿಮಾನದರ | 1,58,982 | |
| | ಅಧಿಕಾರಿಗಳ ವೆಚ್ಚ | 1,86,842 | 3,45,824.00 |
| 3 | ಇತರೆ ಖರ್ಚುಗಳು | | 10,773.00 |
| | **ಒಟ್ಟು** | | **4,54,597.00** |

ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಪ್ರಸ್ತಾಪಿತ ಉದ್ದೇಶಕ್ಕಾಗಿ ವೆಚ್ಚ ಮಾಡಲಾಗಿರುವ ಹಣವನ್ನು ಲೆಕ್ಕ ಶೀರ್ಷಿಕೆ "2852–80–800–0–46–125"ರ "ಮೂಲಭೂತ ಸೌಕರ್ಯ ಮತ್ತು ವ್ಯಾಪಾರ ಉತ್ತೇಜನ ಆಧುನೀಕರಣ (ಯೋಜನೆ)" ಅಡಿಯಲ್ಲಿ ಬಿಡುಗಡೆ ಮಾಡಲು ನಿರ್ಣಯಿಸಲಾಯಿತು. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 233 ಎಸ್‌ಪಿಐ 2011 ಬೆಂಗಳೂರು, ದಿನಾಂಕ 29–03–2012**

2012ರ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಪೂರಕವಾಗಿ ಬಂಡವಾಳ ಹೂಡಿಕೆದಾರರನ್ನು ಆಕರ್ಷಿಸಲು ಅನುವಾಗುವಂತೆ ಇಲಾಖೆಯ ಅಧಿಕಾರಿಗಳ ನಿಯೋಗವು 15ನೇ ಕೀನ್ಯಾ ಅಂತರರಾಷ್ಟ್ರೀಯ ವ್ಯಾಪಾರಮೇಳದಲ್ಲಿ ಭಾಗವಹಿಸಿದ ಹಿನ್ನೆಲೆಯಲ್ಲಿ ಉಂಟಾದ ರೂ.4.54 ಲಕ್ಷ ಮೊತ್ತದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2852–80–800–0–46–125" ರ "ಮೂಲಭೂತ ಸೌಕರ್ಯ ಮತ್ತು ವ್ಯಾಪಾರ ಉತ್ತೇಜನ ಆಧುನೀಕರಣ (ಯೋಜನೆ)" ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

ಈ ಅನುದಾನವನ್ನು ವ್ಯವಸ್ಥಾಪಕ ನಿರ್ದೇಶಕರು, ವಿಶ್ವೇಶ್ವರಯ್ಯ ಕೈಗಾರಿಕಾ ವ್ಯಾಪಾರ ಕೇಂದ್ರ, ಬೆಂಗಳೂರು ಇವರು ಸಲ್ಲಿಸುವ ಸ್ವೀಕೃತನ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಮೇಲು ಸಹಿಯನ್ನು ಪಡೆದು ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇವರಿಂದ ಹಣ ಪಡೆಯಲು ಅನುಮತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 280 ವೆಚ್ಚ–1 ದಿನಾಂಕ: 27–03–2012 ರಂದು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜ್ಯೋತಿ.ಆರ್.ಜೆ**

ಪೀಠಾಧಿಕಾರಿ (ತಾಂತ್ರಿಕ ಕೋಶ),

ಪಿ.ಆರ್. 1035

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವೆಂಕಟೇಶನಾಯ್ಡು, ಪಿ.ಐ., ಶಿವಾಜಿ ನಗರ ಪೊಲೀಸ್ ಠಾಣೆ, ಬೆಂಗಳೂರು. ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು. ಇವರ ಆದೇಶ ಸಂಖ್ಯೆ: ಡಿಇ(2)/ಸಿಓಪಿ/19/ಆರ್–7/2009, ದಿನಾಂಕ: 02/02/2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು. ಇವರ ಆದೇಶ ಸಂಖ್ಯೆ: ಸಿಬಿ(8)/56/2009–10, ದಿನಾಂಕ: 13/8/2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 01/02/2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಪತ್ರ ಸಂಖ್ಯೆ: ಸಿಬಿ(8)/56/2009–10, ದಿನಾಂಕ: 06/06/2011.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 143 ಸಿಎನ್‌ಎಸ್ 2011, ದಿನಾಂಕ: 15–03–2012.

**ಪ್ರಸ್ತಾವನೆ :**

ಶ್ರೀ ವೆಂಕಟೇಶನಾಯ್ಡು, ಪಿ.ಐ., ಇವರು ಕೊಪ್ಪಳ ಜಿಲ್ಲೆಯ ಗಂಗಾವತಿ ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವೆಸಗಿದ ಕಾರಣದ ಮೇಲೆ ಇವರ ವಿರುದ್ದ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ವೆಂಕಟೇಶ್ ನಾಯ್ಡು, ಪಿ.ಐ. ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಈ ಹಿಂದೆ ಗಂಗಾವತಿ ನಗರ ಪೊಲೀಸ್ ಠಾಣೆ, ಕೊಪ್ಪಳ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಗಂಗಾವತಿ ಪೊಲೀಸ್ ಠಾಣೆ ಮೊ.ಸಂ. 35/06 ಕಲಂ 307 ಐ.ಪಿ.ಸಿ. ಪ್ರಕರಣವನ್ನು ದಾಖಲಿಸಿಕೊಂಡು ನಂತರ ತನಿಖೆಯನ್ನು ಕ್ರಮಬದ್ದವಾಗಿ ಮಾಡದೆ ಆರೋಪಿತರ ವಿರುದ್ದ ನ್ಯಾಯಾಲಯದಲ್ಲಿ ದೋಷಾರೋಪಣಾ ಪತ್ರವನ್ನು ಸಲ್ಲಿಸಿದ್ದು, ನ್ಯಾಯಾಂಗ ವಿಚಾರಣೆಯಲ್ಲಿ ಆರೋಪಿತನಿಂದ ಸ್ವಖುಷ ಹೇಳಿಕೆ ಪಡೆದುಕೊಂಡಿರುವುದಿಲ್ಲ ಮತ್ತು ಜಪ್ತಿ ಪಂಚನಾಮೆಯನ್ನು ಸರಿಯಾಗಿ ಮಾಡಿರುವುದಿಲ್ಲಾ ಜಪ್ತಿ ಪಂಚರಿಗೆ ಜಪ್ತಿ ಪಂಚನಾಮೆಯ ಬಗ್ಗೆ ವಿವರವಾದ ಮಾಹಿತಿಯನ್ನು ಕೊಡದೆ ಇರುವುದರಿಂದ ಪಂಚರು ನ್ಯಾಯಾಲಯದಲ್ಲಿ ತಮ್ಮ ಸಾಕ್ಷಿಗಳನ್ನು ಸರಿಯಾಗಿ ಹೇಳಿರುವುದಿಲ್ಲ ಆದ್ದರಿಂದ ಮಾನ್ಯ ನ್ಯಾಯಾಲಯದಲ್ಲಿ ಎಸ್.ಸಿ. ನಂ. 33/2006 ರಲ್ಲಿ ವಿಚಾರಣೆಗೊಂಡು ಪ್ರಕರಣವು ಖುಲಾಸೆಗೊಂಡಿರುತ್ತದೆ. ಸದರಿ ಪ್ರಕರಣವು ಖುಲಾಸೆಗೊಂಡಿರುವುದರ ಬಗ್ಗೆ ನ್ಯಾಯಾಲಯವು ಕಟುಟೀಕೆಗೆ ಒಳಗಾಗಲು ಕಾರಣಕರ್ತರಾಗಿರುತ್ತೀರಿ. ಈ ರೀತಿ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾದ ನೀವು ತನಿಖೆಯನ್ನು ಸರಿಯಾಗಿ ನಡೆಸದೆ ನಿಮ್ಮ ಕರ್ತವ್ಯದಲ್ಲಿ ಉದಾಸೀನತೆ, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯ–ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು. ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02–02–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮವನಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 13/08/2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಿ ವಿಧಿಸಿರುವ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 14 ಪೊಸಿಅ 2011 ಬೆಂಗಳೂರು, ದಿನಾಂಕ: 26/03/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೆಂಕಟೇಶನಾಯ್ಡು, ಪಿ.ಐ., ಶಿವಾಜಿ ನಗರ ಪೊಲೀಸ್ ಠಾಣೆ, ಬೆಂಗಳೂರು, ಇವರಿಗೆ ದಿನಾಂಕ: 2/2/2010ರ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ "ವಾಗ್ದಂಡನೆ" ಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1036

## WOMEN & CHILD DEVELOPMENT SECRETARIAT

**Sub :-** Constitution of a committee for monitoring child mortality and malnutrition of children of Integrated Child Development scheme.

**Preamble :**

A Committee was constituted under the Chairmanship of Principal Secretary to Government, Women & Child Development Department including Secretary of Finance Department, Health Commissioner, Director, National Rural Health Mission and some of the Nutritional Experts and Non Governamental Organisations for making recommendations for preventing child mortality and malnutrition of children of Intergrated Child Development Scheme vide G.O.No: WCD 303 ICD 2011, dated: 26-10-2011.

The above Committee made several recommendations to combat the malnutrition in children and to prevent child mortality in the State. The government decided to set up a committee under the Chairmanship of a retired High Court Judge to review and monitor the schemes like Integrated Child Development Scheme, Sabla and Balasanjivini.

Hence, the following order.

**Government Order No. WCD 303 ICD 2011(P) Bangalore, Dated: 27/03/2012**

Under the circumstances explained above Government of Karnataka are pleased to constitute the following committee to review and monitor the schemes and programmes related to Integrated Child Development Scheme:-

| | | | |
|---|---|---|---|
| 1. | Justice Sri. B. Padmaraj, Hon'ble Judge, High Court of Karnataka, (Retired). | - | Chairman |
| 2. | Principal Secretary to Government, Women & Child Development Dept., | - | Member |
| 3. | Mission Director, National Rural Health Mission, B'lore | - | Member |
| 4. | Member Secretary, Karnataka Legal Services Authority, Bangalore | - | Member |
| 5. | Dr. Subadra Sheshadri, Nutrition Expert, No. 246, 5th Cross, 2nd Block, RMV 2nd Stage, Bangalore-560 094. | - | Member |
| 6. | Director, Women & Child Development Department | - | Member Secretary |

The terms of reference of the Committee are as follows:-

1. Review periodically malnutrition and mortality status of Intergrated Child Development Scheme beneficiaries in the State.
2. Monitor the procurement and distribution of supplementary nutrition food in programmes like Integrated Child Development Scheme and Sabala.
3. Monitor the implementation of health services like health check-up, immunisation, referral services, health and nutrition education.
4. Monitor procurement and distribution and usage of medicine kits, weighing scales, growth charts, referral slips and other health and nutrition education materials.
5. Oversee coordination mechanism among various line departments.
6. Monitor functioning of Self Help Groups (Mahila Supplementary Nutrition Production-cum Training Centres) who are supplying Supplementary Nutrition Food to Integrated Child Development Scheme.
7. Review the role of Panchayat Raj institutions in implementation of Integrated Child Development Scheme.
8. Review complaints/suggestions from Public/Non Governmental Organisations regarding improvement in implemetaion of Integrated Child Develoment Scheme Programme.
9. To take suitable and necessary steps to prevent malnutrition in children, pregnant and lactating mothers.
10. The Chairman and one of the members may tour throughout the State for monitoring effective implementation of the programmes referred to in this order.
11. Suggest local remedies to combat mal nutrition.

The term of the Committee is for a period of one year. The Committee shall meet atleast once in fifteen days.

Orders will be issued separately regarding office, supporting staff and other facilities for functioning of the committee.

By order and in the name of the Governor of Karnataka
Vijayalakshmi
Under Secretary to Government
Women & Child Development Department

P.R No: 1037

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ 2011–12ನೇ ಸಾಲಿನಲ್ಲಿ ರೂ. 200.00 ಕೋಟಿಗಳ ಸಾಲವನ್ನು ಹಣಕಾಸು ಸಂಸ್ಥೆಗಳಿಂದ ಪಡೆಯಲು ಸರ್ಕಾರದ ಖಾತರಿ ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರ ಪತ್ರ ಸಂಖ್ಯೆ: ಕಜಮಂ:ಮುಲೆಅ:ಲೆ–2:ಸಲೆಅ–1:ಎಎ–4:ಐಇ ಬಿಆರ್:1856/2011–12, ದಿನಾಂಕ: 02–01–2012.

**ಪ್ರಸ್ತಾವನೆ:–**

ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು 2011–12ನೇ ಸಾಲಿನಲ್ಲಿ ಮುಂದುವರೆದ ಯೋಜನೆಗಳ ಅನುಷ್ಠಾನಕ್ಕೆ ಸರ್ಕಾರವು ಆಯವ್ಯಯದಲ್ಲಿ ಐಇಬಿಆರ್ ಲೆಕ್ಕಶೀರ್ಷಿಕೆ ಅಡಿಯಲ್ಲಿ ಅನುವು ಮಾಡಿರುವ ರೂ.370.00 ಕೋಟಿಗಳ ಸಾಲವನ್ನು ವಿವಿಧ ಹಣಕಾಸು ಸಂಸ್ಥೆಗಳಿಂದ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಅಯವ್ಯಯದಲ್ಲಿ ಯೋಜನೆಗಳ ಅನುಷ್ಠಾನಕ್ಕೆ ಒದಗಿಸಿದ ಅನುದಾನ ಮತ್ತು ಸರ್ಕಾರದ ಸಾಲವನ್ನು ಹೊರತುಪಡಿಸಿ ಮಂಡಳಿಗೆ ಕಾರ್ಯಪ್ರಗತಿಯಲ್ಲಿರುವ ಯೋಜನೆಗಳ ಆರ್ಥಿಕ ಮಾದರಿಯಂತೆ, ಅವುಗಳ ಶೀಘ್ರ ಅನುಷ್ಠಾನಕ್ಕಾಗಿ ಪ್ರಪ್ರಥಮವಾಗಿ ರೂ. 200.00 ಕೋಟಿಗಳ ಬಂಡವಾಳವನ್ನು ಸಾಲದ ಮೂಲಕ ಕ್ರೋಢೀಕರಿಸಲು ಮಂಡಳಿಯು ಉದ್ದೇಶಿಸಿದೆ. ಪ್ರಥಮವಾಗಿ ಈ

ಕೆಳಕಂಡ 4 ಸ್ಥಳೀಯ ಸಂಸ್ಥೆಯ ಯೋಜನೆಗಳ ಮುಂದುವರೆದ ಕಾಮಗಾರಿಗಳಿಗೆ ಬಳಸಿಕೊಳ್ಳಲು ಉದ್ದೇಶಿಸಿ ಪ್ರಸ್ತಾವನೆಯನ್ನು ಮೇಲೆ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ರೂ. ಲಕ್ಷಗಳಲ್ಲಿ

| ಕ್ರ.ಸಂ. | ಯೋಜನೆಯ ಹೆಸರು | ಅಂದಾಜು ವೆಚ್ಚ | ಆರ್ಥಿಕ ಮಾದರಿಯಂತೆ ಪಡೆಯಬಹುದಾದ ಸಾಲ | ಪ್ರಸ್ತುತ ಕೋರಿರುವ ಮೊತ್ತ |
|---|---|---|---|---|
| 1. | ಕೋಲಾರ, ಮಾಲೂರು, ಬಂಗಾರಪೇಟೆ, ಮುಳಬಾಗಿಲು ಮತ್ತು ಮಾರ್ಗಮಧ್ಯದ ಹಳ್ಳಿಗಳು | 16000.00 | 8617.55 | 8617.55 |
| 2. | ಹುಬ್ಬಳ್ಳಿ–ಧಾರವಾಡ | 15200.00 | 10134.00 | 10134.00 |
| 3. | ಬಾಗಲಕೋಟೆ | 1056.20 | 528.10 | 308.45 |
| 4. | ಶಿಕಾರಿಪುರ ವಿತರಣಾ ಜಾಲ | 1880.00 | 940.00 | 940.00 |
| | ಒಟ್ಟು | 34136.20 | 20219.65 | 20000.00 |

ಮೇಲೆ ಸೂಚಿಸಲಾದ 4 ಯೋಜನೆಗಳ ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಸದರಿ ಸಾಲವನ್ನು ಮರುಪಾವತಿ ಮಾಡಲು ಮತ್ತು ಒಂದು ವೇಳೆ ಮರುಪಾವತಿ ಮಾಡಲು ವಿಳಂಬವಾದ್ದಲ್ಲಿ ಸದರಿ ಮೊತ್ತವನ್ನು ಎಸ್.ಎಫ್.ಸಿ. ಅನುದಾನದಿಂದ ಭರಿಸುವ ಸಾಮರ್ಥ್ಯವನ್ನು ಹೊಂದಿರುತ್ತವೆ ಎಂದು ಮಂಡಳಿಯು ತಿಳಿಸಿರುತ್ತದೆ. ಇದಲ್ಲದೆ, ಪ್ರಸ್ತುತ ರೂ.200.00 ಕೋಟಿಗಳ ಸಾಲವನ್ನು ಪಡೆಯಲು ಮಂಡಳಿಯು ವಿವಿಧ ಹಣಕಾಸು ಸಂಸ್ಥೆಗಳಿಂದ ಅತ್ಯಂತ ಕಡಿಮೆ ಬಡ್ಡಿ ದರದಲ್ಲಿ ಸಾಲವನ್ನು ಕೋರಿ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ್ದು, ಸದರಿ ಪ್ರಕಟಣೆಗೆ ಈ ಕೆಳಕಂಡ 3 ಹಣಕಾಸು ಸಂಸ್ಥೆಗಳು ತಮ್ಮ ದರಗಳನ್ನು ನಮೂದಿಸಿರುತ್ತಾರೆ.

| **ಕ್ರ.ಸಂ.** | **ಹಣಕಾಸು ಸಂಸ್ಥೆಯ ಹೆಸರು** | **ಬಡ್ಡಿ ದರ** | **ಷರಾ** |
|---|---|---|---|
| 1. | ವಿಜಯ ಬ್ಯಾಂಕ್ ಇಂದಿರಾನಗರ ಶಾಖೆ | 10.90% (ಪ್ಲೋಟಿಂಗ್ ದರ) | 10 ವರ್ಷಗಳ ಸಾಲವನ್ನು ಮರುಪಾವತಿ ಮಾಡುವುದು ಮತ್ತು ಪ್ರಾಥಮಿಕ 2 ವರ್ಷಗಳ ಮಾರಟೋರಿಯಂ ಅವಧಿ |
| 2. | ಸಿಂಡಿಕೇಟ್ ಬ್ಯಾಂಕ್, ರಾಜಾಜಿನಗರ ಶಾಖೆ | 11.25% (ಪ್ಲೋಟಿಂಗ್ ದರ) | 10 ವರ್ಷಗಳ ಸಾಲವನ್ನು ಮರುಪಾವತಿ ಮಾಡುವುದು ಮತ್ತು ಪ್ರಾಥಮಿಕ 2 ವರ್ಷಗಳ ಮಾರಟೋರಿಯಂ ಅವಧಿ |
| 3. | ಯೂನಿಯನ್ ಬ್ಯಾಂಕ್, ಜೆಸಿ ರಸ್ತೆ ಶಾಖೆ | 11.15% (ಪ್ಲೋಟಿಂಗ್ ದರ) | 10 ವರ್ಷಗಳ ಸಾಲವನ್ನು ಮರುಪಾವತಿ ಮಾಡುವುದು ಮತ್ತು ಪ್ರಾಥಮಿಕ 2 ವರ್ಷಗಳ ಮಾರಟೋರಿಯಂ ಅವಧಿ |

ಮಂಡಳಿಯು ಮೇಲಿನ ಹಣಕಾಸು ಸಂಸ್ಥೆಗಳ ಪೈಕಿ ಅತೀ ಕಡಿಮೆ ಬಡ್ಡಿ ದರವಾದ 10.90% ನಮೂದಿಸಿರುವ ವಿಜಯ ಬ್ಯಾಂಕ್, ಇಂದಿರಾನಗರ ಶಾಖೆ ಇವರಿಂದ ರೂ.200.00 ಕೋಟಿಗಳ ಸಾಲವನ್ನು ಪಡೆಯಲು ಸರ್ಕಾರದ ಖಾತರಿಯನ್ನು ಕೋರಿರುತ್ತದೆ.

ಮೇಲಿನ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 07 ಯುಡಬ್ಲ್ಯೂಎಲ್ 2010 ಬೆಂಗಳೂರು, ದಿನಾಂಕ: 16/03/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2011–12ನೇ ಸಾಲಿನ ರಾಜ್ಯ ಅಯವ್ಯಯದಲ್ಲಿ ಮುಂದುವರೆದ ಯೋಜನೆಗಳ ಅನುಷ್ಠಾಕ್ಕೆ **ಐಇಬಿಆರ್** ಲೆಕ್ಕಶೀರ್ಷಿಕೆ ಅಡಿಯಲ್ಲಿ ಅನುವು ಮಾಡಿರುವ ರೂ. 370.00 ಕೋಟಿಗಳ ಸಾಲದ ಪೈಕಿ ಅಯವ್ಯಯದಲ್ಲಿ ಯೋಜನೆಗಳ ಅನುಷ್ಠಾನಕ್ಕೆ ಒದಗಿಸಿದ ಅನುದಾನ ಮತ್ತು ಸರ್ಕಾರದ ಸಾಲವನ್ನು ಹೊರತುಪಡಿಸಿ ಮಂಡಳಿಗೆ ಕಾರ್ಯಪ್ರಗತಿಯಲ್ಲಿರುವ ಯೋಜನೆಗಳ ಆರ್ಥಿಕ ಮಾದರಿಯಂತೆ ಹಣಕಾಸು ಸಂಸ್ಥೆಗಳಿಂದ ಸಾಲವನ್ನು ಪಡೆಯಲು ಕಲ್ಪಿಸಿರುವ ಅವಕಾಶದಂತೆ, ಈ ಕೆಳಕಂಡ ಯೋಜನೆಗಳ ಅವುಗಳ ಶೀಘ್ರ ಅನುಷ್ಠಾನಕ್ಕಾಗಿ ಪ್ರಪ್ರಥಮವಾಗಿ ರೂ. 200.00 ಕೋಟಿಗಳ ಬಂಡವಾಳವನ್ನು ಸಾಲದ ಮೂಲಕ ಕ್ರೋಢೀಕರಿಸಲು ಮಂಡಳಿಯು ವಿಜಯ ಬ್ಯಾಂಕ್, ಇಂದಿರಾ ನಗರ ಶಾಖೆ ರವರಿಂದ ಶೇ 10.90% (10.65 ಬಿ.ಆರ್ + 0.25) ಬಡ್ಡಿ ದರದಲ್ಲಿ (ಪ್ಲೋಟಿಂಗ್) ಸಾಲವನ್ನು ಪಡೆಯಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಿದೆ.

| ಕ್ರ.ಸಂ. | ಯೋಜನೆಯ ಹೆಸರು | ಅಂದಾಜು ವೆಚ್ಚ | ಆರ್ಥಿಕ ಮಾದರಿಯಂತೆ ಪಡೆಯಬಹುದಾದ ಸಾಲ | ಪ್ರಸ್ತುತ ಕೋರಿರುವ ಮೊತ್ತ |
|---|---|---|---|---|
| 1. | ಕೋಲಾರ, ಮಾಲೂರು, ಬಂಗಾರಪೇಟೆ, ಮುಳಬಾಗಿಲು ಮತ್ತು ಮಾರ್ಗಮಧ್ಯದ ಹಳ್ಳಿಗಳು | 16000.00 | 8617.55 | 8617.55 |
| 2. | ಹುಬ್ಬಳ್ಳಿ–ಧಾರವಾಡ | 15200.00 | 10134.00 | 10134.00 |
| 3. | ಬಾಗಲಕೋಟೆ | 1056.20 | 528.10 | 308.45 |
| 4. | ಶಿಕಾರಿಪುರ ವಿತರಣಾ ಜಾಲ | 1880.00 | 940.00 | 940.00 |
| | ಒಟ್ಟು | 34136.20 | 20219.65 | 20000.00 |

1. ಸದರಿ ಸಾಲವನ್ನು ಯೋಜನೆಯ ಪ್ರಗತಿಗನುಸಾರವಾಗಿ ಹಂತ ಹಂತವಾಗಿ ಪಡೆಯತಕ್ಕದ್ದು; ಮತ್ತು ಈ ರೀತಿ ಪಡೆಯುವ ಸಾಲವನ್ನು ಪಡೆಯುವ ದಿನಾಂಕದಂದು ಜಾರಿಯಲ್ಲಿರುವ ಬೇಸಿಕ್ ದರಗಳಾದಾರದನ್ವಯ ಪಡೆಯತಕ್ಕದ್ದು; ಯಾವುದೇ ಕಾರಣಕ್ಕೂ ಬ್ಯಾಂಕ್ ವಿಧಿಸುವ ಬೇಸಿಕ್ ದರದ ಮೇಲೆ ವಿಧಿಸುವ ಶೇಕಡ +0.25 (ಟರ್ಮ್ ಪ್ರೀಮಿಯಂ) ಬದಲಾಯಿಸತಕ್ಕದಲ್ಲ;
2. ಸಾಲವನ್ನು ಮಂಡಳಿಯು ಮೇಲೆ ಕೋರಿರುವ ಯೋಜನೆಗಳಿಗೆ ಹೊರತು ಪಡಿಸಿ ಬೇರೆ ಯೋಜನೆಗಳ ಪ್ರಗತಿಗೆ ಬಳಸಬಾರದು;
3. ಮಂಡಳಿಯು ಯೋಜನಾ ಕಾಮಗಾರಿಗಳ ಪ್ರಗತಿಯನ್ನು ಮತ್ತು ಸಾಲವನ್ನು ಪಡೆದ ದಿನಾಂಕದಿಂದ ತ್ರೈಮಾಸಿಕವಾಗಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು;
4. ಸಾಲವನ್ನು 10 ವರ್ಷಗಳಲ್ಲಿ ಮರುಪಾವತಿ ಮಾಡತಕ್ಕದ್ದು ಮತ್ತು ಪ್ರಾಥಮಿಕ 2 ವರ್ಷಗಳ ಮಾರಟೋರಿಯಂ ಅವಧಿಗೊಳಪಡತಕ್ಕದ್ದು;
5. ಮಂಡಳಿಯು ಸರ್ಕಾರಕ್ಕೆ ವಾರ್ಷಿಕ ಶೇ 1% ರಷ್ಟು ಗ್ಯಾರಂಟಿ ಕಮೀಷನ್ ನೀಡತಕ್ಕದ್ದು ಮತ್ತು ಸದರಿ ಮೊತ್ತವನ್ನು ಎಸ್.ಎಫ್.ಸಿ ಅನುದಾನದಲ್ಲಿ ಸರ್ಕಾರವು ಬಿಡುಗಡೆ ಮಾಡುವ ಮೊತ್ತದಲ್ಲಿ ಕಡಿತಗೊಳಿಸಲಾಗುವುದು;
6. ಸಾಲದ ಮೊತ್ತವನ್ನು 10 ವರ್ಷಗಳಿಗಿಂತಲೂ ಕಡಿಮೆ ಅವಧಿಯಲ್ಲಿ ಮರುಪಾವತಿ ಮಾಡಿದ್ದಲ್ಲಿ ಪ್ರೀಕ್ಲೋಷರ್ ಮತ್ತು ಪ್ರೀಪೇಮೆಂಟ್ ಚಾರ್ಜ್‌ಗಳನ್ನು ಬ್ಯಾಂಕ್ ವಿಧಿಸತಕ್ಕದಲ್ಲ;
7. ಮಾರಿಟೋರಿಯಂ ಅವಧಿಯಲ್ಲಿ ವಿಧಿಸುವ ಬಡ್ಡಿ ದರವು ಶೇ. 10.90% ಮೀರುವಹಾಗಿಲ್ಲ;
8. ಮಂಡಳಿಯು ಬ್ಯಾಂಕಿನೊಂದಿಗೆ ಮಾಡಿ ಕೊಳ್ಳುವ ಒಪ್ಪಂದವನ್ನು ಸೂಕ್ತವಾಗಿ ಪರಿಶೀಲಿಸಿ, ಸರ್ಕಾರವು ನೀಡಿದ ನಿರ್ದೇಶನಗಳನ್ವಯ ಮತ್ತು ಸರ್ಕಾರದ ಹಿತದೃಷ್ಟಿಯಿಂದ ಮಾಡಿಕೊಳ್ಳುವುದು;

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವರಾವ್**

ಸರ್ಕಾರದ ಆಧೀನ ಕಾರ್ಯದರ್ಶಿ

ಪಿ.ಆರ್. 1038 ನಗರಾಭಿವೃದ್ಧಿ ಇಲಾಖೆ

## ಲೋಕೋಪಯೋಗಿ, ಬಂದರು ಮತ್ತು ಒಳನಾಡು, ಜಲಸಾರಿಗೆ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು, ದೊಮ್ಮನಕಟ್ಟೆ ಗೇಟ್‌ನಿಂದ ಹೊನ್ನಮ್ಮನಕಟ್ಟೆ–ನಿಶ್ನ–ಎ–ಹೊಸಹೊಳಲು–ಕೆ.ಆರ್.ಪುರ–ಮಳಲಿ–ಎನ್. ಬೆಳತ್ತೂರು–ಕಾರಾಪುರ–ಎಂ. ಗಂಡತ್ತೂರು. ಮಾರ್ಗ ಉದ್ಬೂರು ಗೇಟ್‌ನಲ್ಲಿ ಕೊರಟಗೆರೆ–ಬಾವಲಿ ರಾಜ್ಯ ಹೆದ್ದಾರಿ–33 ನ್ನು ಸೇರುವ ರಸ್ತೆ ಸರಪಳಿ 0.00 ರಿಂದ 14.02 ಕಿ.ಮೀ ವರೆಗಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ: 07–02–2012 ರಂದು ಮಾನ್ಯ ಲೋಕೋಪಯೋಗಿ ಸಚಿವರು ಹಾಗೂ ಅರಣ್ಯ ಸಚಿವರ ಜಂಟಿ ಅಧ್ಯಕ್ಷತೆಯಲ್ಲಿ ನಡೆನ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಸಭೆಯ ನಡವಳಿಯಲ್ಲಿ ಮೈಸೂರು–ಮಾನಂದವಾಡಿ ರಸ್ತೆಯು ಹೆಚ್.ಡಿ. ಕೋಟೆ ತಾಲ್ಲೂಕಿನ ವ್ಯಾಪ್ತಿಯಲ್ಲಿ 65.00 ಕಿ.ಮೀ. ಉದ್ದವಿರುತ್ತದೆ. ಈ ರಸ್ತೆಯ ದೊಮ್ಮನಕಟ್ಟೆ ಗೇಟ್‌ನಿಂದ ಉದ್ಬೂರು ಗೇಟ್‌ವರೆಗಿನ ಸರಪಳಿ 60.60 ಕಿ.ಮೀ. ಯಿಂದ 69.75 ಕಿ.ಮೀ ವರೆಗೆ 10.00 ಕಿ.ಮೀ. ಉದ್ದದ ರಸ್ತೆಯಲ್ಲಿ ಅರಣ್ಯ ಇಲಾಖೆಯವರು ವಾಹನ ಸಂಚಾರಕ್ಕೆ ನಿರ್ಬಂಧಿಸಿರುವುದಾಗಿಯೂ, ಇದಕ್ಕೆ ಪರ್ಯಾಯವಾಗಿ ದೊಮ್ಮನಕಟ್ಟೆ ಗೇಟ್‌ನಿಂದ ಹೊನ್ನಮ್ಮನಕಟ್ಟೆ, ಹೊಸಹೊಳಲು ಮಾರ್ಗವಾಗಿ ಉದ್ಬೂರು ಗೇಟ್‌ವರೆಗೆ 14.00 ಕಿ.ಮೀ.ನ ಲೂಪ್ ರಸ್ತೆಯನ್ನು ಅಭಿವೃದ್ಧಿಪಡಿಸಬೇಕಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಬೆಂಗಳೂರುರವರು ಸಭೆಗೆ ತಿಳಿಸಿದರು.

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಇವರು ಮೈಸೂರು–ಮಾನಂದವಾಡಿಯ ಈ 10.00 ಕಿ.ಮೀ. ರಸ್ತೆಯು ರಾಜೀವ್ ಗಾಂಧಿ ರಾಷ್ಟ್ರೀಯ ಉದ್ಯಾನವನದಲ್ಲಿ ಬರುತ್ತಿದ್ದು, Central Empowered Committee ಯು ಪರಿಶೀಲಿಸಿ,, ಸನ್ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತದೆ ಎಂದೂ, ಮಾನ್ಯ ಉಚ್ಚ ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ, ಈ 10 ಕಿ.ಮೀ. ರಸ್ತೆಗೆ ಪರ್ಯಾಯ ರಸ್ತೆಯನ್ನು ಅಭಿವೃದ್ಧಿಪಡಿಸುವುದು ಸೂಕ್ತವೆಂದು ಅಭಿಪ್ರಾಯಿಸಿರುವ ಹಿನ್ನೆಲೆಯಲ್ಲಿ ಈ 10 ಕಿ.ಮೀ. ರಸ್ತೆಗೆ ಪರ್ಯಾಯ ಸಂಪರ್ಕ ಕಲ್ಪಿಸುವ ದೊಮ್ಮನಕಟ್ಟೆ ಗೇಟ್‌ನಿಂದ–ನಿಶ್ನ–ಎ– ಹೊಸಹೊಳಲು – ಕೆ.ಆರ್.ಪುರ – ಮಳಲಿ – ಎನ್. ಬೆಳತ್ತೂರು– ಕಾರಾಪುರ– ಎಂ. ಗಂಡತ್ತೂರು, ಉದ್ಬೂರು ಮಾರ್ಗವಾಗಿ ಉದ್ಬೂರು ಗೇಟ್‌ವರೆಗೆ ಇರುವ 14.02 ಕಿ.ಮೀ. ಗ್ರಾಮೀಣ ರಸ್ತೆಯನ್ನು ಅಭಿವೃದ್ಧಿಪಡಿಸಲು ರೂ.18.00 ಕೋಟಿ ಮೊತ್ತದ ಪ್ರಸ್ತಾವನೆ ಇದ್ದು, ಸದರಿ ರಸ್ತೆಯನ್ನು ಸಾರ್ವಜನಿಕರು ಪರ್ಯಾಯ ಮಾರ್ಗವಾಗಿ ಈಗಾಗಲೇ ಉಪಯೋಗಿಸುತ್ತಿರುವುದರಿಂದ ಹಾಗೂ ಸದರಿ ರಸ್ತೆಯ ಅರಣ್ಯ ಇಲಾಖೆಯ ವ್ಯಾಪ್ತಿಯಲ್ಲಿ ಬರುವ 1.83 ಕಿ.ಮೀ. ಅನ್ನು ಸಹ ಅಭಿವೃದ್ಧಿಪಡಿಸಲು ಸೂಕ್ತ ಕ್ರಮ ಕೈಗೊಳ್ಳಲು ಸಭೆಯಲ್ಲಿ ಹಾಜರಿದ್ದ ಅರಣ್ಯ ಅಧಿಕಾರಿಗಳು ಸಮ್ಮತಿಸಿದರು.

ಈ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು, ದೊಮ್ಮನಕಟ್ಟೆ ಗೇಟ್‌ನಿಂದ–ಹೊನ್ನಮ್ಮನಕಟ್ಟೆ–ನಿಶ್ನ–ಎ–ಹೊಸಹೊಳಲು–ಕೆ.ಆರ್.ಪುರ–ಮಳಲಿ–ಎನ್.ಬೆಳತ್ತೂರು–ಕಾರಪುರ–ಎಂ.ಗಂಡತ್ತೂರು, ಮಾರ್ಗ ಉದ್ಬೂರು ಗೇಟ್‌ನಲ್ಲಿ ಕೊರಟಗೆರೆ–ಬಾವಲಿ ರಾಜ್ಯ ಹೆದ್ದಾರಿ–33 ನ್ನು ಸೇರುವ ರಸ್ತೆ ಸರಪಳಿ 0.00 ರಿಂದ 14.02 ಕಿ.ಮೀ. ವರೆಗಿನ ರಸ್ತೆಯನ್ನು ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸಭೆಯಲ್ಲಿ ತೀರ್ಮಾನಿಸಲಾಯಿತು.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 659 ಸಿಆರ್‌ಎಂ 2011(ಭಾ), ಬೆಂಗಳೂರು, ದಿನಾಂಕ: 26/03/2012.**

ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕಿನ ದೊಮ್ಮನಕಟ್ಟೆ ಗೇಟ್‌ನಿಂದ–ಹೊನ್ನಮ್ಮನಕಟ್ಟೆ–ನಿಶ್ನ–ಎ–ಹೊಸಹೊಳಲು–ಕೆ.ಆರ್.ಪುರ–ಮಳಲಿ– ಎನ್.ಬೆಳತ್ತೂರು–ಕಾರಾಪುರ–ಎಂ. ಗಂಡತ್ತೂರು ಮಾರ್ಗ ಉದ್ಬೂರು ಗೇಟ್‌ನಲ್ಲಿ ಕೊರಟಗೆರೆ–ಬಾವಲಿ ರಾಜ್ಯ ಹೆದ್ದಾರಿ–33 ನ್ನು ಸೇರುವ ರಸ್ತೆ ಸರಪಳಿ 0.00 ರಿಂದ 14.02 ಕಿ.ಮೀ. ವರೆಗಿನ ರಸ್ತೆಯನ್ನು ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಮುಂದಿನ ಸಭೆಯಲ್ಲಿ ಘಟನೋತ್ತರ ಮಂಜೂರಾತಿ ಪಡೆಯುವ ಷರತ್ತುಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

ಪಿ.ಆರ್. 1039

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನ ಗೊಳಿಸಲು ಚಿಕ್ಕಬಳ್ಳಾಪುರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕು ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ: 07–08–1995.
2. ಭಾರತೀಯ ಜನತಾ ಪಾರ್ಟಿ ರಾಜ್ಯ ಉಪಾಧ್ಯಕ್ಷರ ಪತ್ರ ಸಂಖ್ಯೆ: ರಾಕಾ/ನಾನಿ/223/2012, ದಿನಾಂಕ: 13/02/2012

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಭಾರತೀಯ ಜನತಾ ಪಾರ್ಟಿ ರಾಜ್ಯ ಉಪಾಧ್ಯಕ್ಷರು ಸೂಚಿಸಿರುವ ಸದಸ್ಯರುಗಳನ್ನು ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 64 ಯೋವಿವಿ 2009(ಭಾ), ಬೆಂಗಳೂರು, ದಿನಾಂಕ: 27ನೇ ಮಾರ್ಚ್ 2012.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಆಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿಕ್ಕಬಳ್ಳಾಪುರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕು, ಜಿಲ್ಲಾ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಹಿಂದೆ ಹೊರಡಿಸಲಾಗಿದೆ. ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ (6) ಆರು ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ಚಿಕ್ಕಬಳ್ಳಾಪುರ ಜಿಲ್ಲೆ ಕೆ.ಡಿ.ಪಿ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | ಶ್ರೀಮತಿ ಜಯಶ್ರೀ ಕೋಂ. ರಾಮಕೃಷ್ಣಪ್ಪ,<br>ಬಾರೆನಹಳ್ಳಿ ಗ್ರಾಮ ಮಂಡಿಕಲ್ಲು ಅಂಚೆ, ಚಿಕ್ಕಬಳ್ಳಾಪುರ ತಾಲ್ಲೂಕು & ಜಿಲ್ಲೆ | ಮಹಿಳೆ |
| 2 | ಶ್ರೀ ವಿ. ವೆಂಕಟರೆಡ್ಡಿ ಬಿನ್. ಲೇ ಚಿಕ್ಕವೆಂಕಟಪ್ಪ,<br>ಚಿಕ್ಕಕಾಡಿಗಾನಹಳ್ಳಿ ಗ್ರಾಮ, ಶ್ರೀರಾಮಪುರ ಅಂಚೆ, ಚಿಕ್ಕಬಳ್ಳಾಪುರ ತಾಲ್ಲೂಕು & ಜಿಲ್ಲೆ | ಸಾಮಾನ್ಯ |
| 3 | ಶ್ರೀ ಆರ್ ಶ್ರೀನಿವಾಸ್ ಬಿನ್ ಆರ್ ಚಿಕ್ಕರಾಮಯ್ಯ,<br>ನಾಯನಹಳ್ಳಿ ಗ್ರಾಮ, ನಹಳ್ಳಿ ಅಂಚೆ, ಚಿಕ್ಕಬಳ್ಳಾಪುರ ತಾಲ್ಲೂಕು & ಜಿಲ್ಲೆ, | ಸಾಮಾನ್ಯ |
| 4 | ಶ್ರೀ ವಿ. ರಾಮಕೃಷ್ಣ ಬಿನ್ ವೆಂಕಟರಾಯಪ್ಪ,<br>ಗೊಳ್ಳು ಗ್ರಾಮ, ದಿಬ್ಬೂರು ಅಂಚೆ, ಚಿಕ್ಕಬಳ್ಳಾಪುರ ತಾಲ್ಲೂಕು & ಜಿಲ್ಲೆ | ಎಸ್.ಸಿ |
| 5 | ಶ್ರೀ ಸಿ.ಪಿ. ಮಂಜೂನಾಥ್ ಬಿನ್ ಆರ್. ಜಿ. ಪಿಳ್ಳಪ್ಪ,<br>ರಾಮಚಂದ್ರ ಹೊಸೂರು, ಜಾತವಾರ ಅಂಚೆ, ಚಿಕ್ಕಬಳ್ಳಾಪುರ ತಾಲ್ಲೂಕು & ಜಿಲ್ಲೆ. | ಹಿಂ.ವರ್ಗ |
| 6 | ಶ್ರೀ ಎಸ್. ಮೆಹಬೂಬ್ ಬಾಷ ಬಿನ್ ಹುಸೇನ್ ಸಾಬ್,<br>ನಂ.169, ವಾರ್ಡ ನಂ. 31 ಇಂದಿರಾನಗರ, ಕಾನ್ವೆಂಟ್ ಹಿಂಭಾಗ, ಚಿಕ್ಕಬಳ್ಳಾಪುರ. | ಅ.ಸಂ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ರವೀಂದ್ರ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1 & 2,(ಪ್ರ.)
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 1040

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20) ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಯೋಇ: 309: ಪಿಟಿಪಿ: 94, ದಿನಾಂಕ: 07–08–1995.

2. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರ ಸಂಖ್ಯೆ: ರಾಕಾ/ನಾನಿ/1033/2012, ದಿನಾಂಕ: 03–01–2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20) ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರು ಸೂಚಿಸಿರುವ ಸದಸ್ಯರುಗಳನ್ನು ಮಾನ್ಯ ಯೋಜನಾ ಸಚಿವರ ಶಿಫಾರಸ್ಸಿನಂತೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವ ಮೇರೆಗೆ ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋವಿ.ವಿ. 19 ಯೋನಿನಿ 2012 ಬೆಂಗಳೂರು, ದಿನಾಂಕ: 27ನೇ ಮಾರ್ಚ್ 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಹಿಂದೆ ಹೊರಡಿಸಲಾದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಆರು ಜನರನ್ನು ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು:

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ವಿ. ಪದ್ಮಣ್ಣ ಬಿನ್ ಲೇ: ವೀರನಾಗಪ್ಪ ಅಂಗಡಿ ಮಲ್ಲನಹಳ್ಳಿ ಹನುಮಂಪಹಳ್ಳಿ ಅಂಚೆ, ದೊಡ್ಡೇರಿ ಹೋಬಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ | ಸಾಮಾನ್ಯ |
| 2. | ಶ್ರೀ ಎಂ.ಆರ್. ಲಕ್ಷ್ಮೀನರಸಪ್ಪ ಬಿನ್ ದಾಸರಂಗಪ್ಪ, ಮಾರುತಿ ನಗರ ಬಡಾವಣೆ, ಮಿಡಿಗೇಶಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ | ಸಾಮಾನ್ಯ |
| 3. | ಶ್ರೀ ರಾಮಣ್ಣ ಬಿನ್ ಗೋವಿಂದಪ್ಪ, ಕಮ್ಮನಕೋಟೆ ಚಿನಕವಜ್ರ ಅಂಚೆ, ಕಸಬಾ ಹೋಬಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ | ಬಿ.ಸಿ.ಎಂ. |
| 4. | ಶ್ರೀಮತಿ ಭಾಗಮ್ಮ ಕೋಂ ಎನ್. ನರಸಿಂಹಯ್ಯ (ಕಾಕಿನಾಡ) 4ನೇ ಬ್ಲಾಕ್, ಕೊಡಿಗೇನಹಳ್ಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ಮಹಿಳೆ |
| 5. | ಶ್ರೀ ಬಾಲರಾಜು, ಕೋಡ್ಲಾಪುರ ಮತ್ತು ಅಂಚೆ, ಪುರವರ ಹೋಬಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ಪ.ಪಂ. |
| 6. | ಶ್ರೀ ಸೈಯದ್ ಹುಸೇನ್ ಶರೀಫ್ ಬಿನ್ ಪ್ರಕ್ರದ್ದೀನ್ ಸಾಬ್, ಶಂಬೋನಹಳ್ಳಿ, ಗಂಜನಗುಂಟೆ ಅಂಚೆ ಕಸಬಾ ಹೋಬಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರವೀಂದ್ರ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2 (ಪ್ರ.)

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ.

ಪಿಆರ್ ನಂ. 1041

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2011–12ನೇ ಸಾಲಿನಲ್ಲಿ ನಾಲ್ಕನೇ ಕಂತಾಗಿ ರೂ. 400.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 15 ಮಪ್ರಮಂ 2011 ದಿನಾಂಕ: 03–10–2011.
2. ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ: ಮಪ್ರಮಂ:ನಗದು ಅನುದಾನ: 2011–12/183 ದಿನಾಂಕ: 05–12–2011.
3. ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇವರಿಂದ ಬಂದಿರುವ ಪತ್ರ ಸಂಖ್ಯೆ: ಸಂಮಪ್ರಮಂ–ನಗದು:ಅನುದಾನ:2011–12, ದಿನಾಂಕ: 31–01–2012.

**ಪ್ರಸ್ತಾವನೆ :**

2011–12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–800–0–05–(ಯೋಜನೆ)" ಅಡಿಯಲ್ಲಿ ರೂ. 100.00 ಲಕ್ಷಗಳನ್ನು ಹಾಗೂ "4515–00–800–0–03" ಅಡಿಯಲ್ಲಿ ರೂ. 3300.00 ಲಕ್ಷಗಳನ್ನು ಒದಗಿಸಲಾಗಿದೆ. ಈ ಪೈಕಿ ಒಟ್ಟು ರೂ. 2250.00 ಲಕ್ಷಗಳನ್ನು ಮೂರು ಕಂತುಗಳಲ್ಲಿ ಬಿಡುಗಡೆ ಮಾಡಲಾಗಿದೆ ಮೇಲೆ ಓದಲಾದ (3)ರ ಪತ್ರದಲ್ಲಿ ನಾಲ್ಕನೆ ಕಂತಾಗಿ ರೂ. 400.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 15 ಮಪ್ರಮಂ 2011 ಬೆಂಗಳೂರು, ದಿನಾಂಕ: 27–03–2012**

2011–12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಆಡಳಿತ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "4515–00–800–0–03–132" ಅಡಿಯಲ್ಲಿ ರೂ. 235.00 ಲಕ್ಷಗಳನ್ನು (ಇನ್ನೂರ ಮೂವತ್ತೈದು ಲಕ್ಷ ರೂಪಾಯಿಗಳು ಮಾತ್ರ) ವಿಶೇಷ ಘಟಕ ಯೋಜನೆಯಡಿ ಲೆಕ್ಕಶೀರ್ಷಿಕೆ "4515–00–800–0–03–422" ಅಡಿಯಲ್ಲಿ ರೂ. 125.00 ಲಕ್ಷಗಳನ್ನು (ನೂರಾ ಇಪ್ಪತ್ತೈದು ಲಕ್ಷಗಳು ಮಾತ್ರ) ಹಾಗೂ ಉಪಯೋಜನೆಯಡಿ ಕಾಮಗಾರಿಗಳನ್ನು ಅನಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ "4515–00–800–0–03–423" ಅಡಿಯಲ್ಲಿ ರೂ. 40.00 ಲಕ್ಷಗಳನ್ನು (ನಲವತ್ತು ಲಕ್ಷಗಳು ಮಾತ್ರ) ಒಟ್ಟು ರೂ. 400.00 ಲಕ್ಷಗಳನ್ನು (ನಾಲ್ಕುನೂರು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

2) ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2011–12 ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 556 ವೆಚ್ಚ–6/2011 ದಿನಾಂಕ: 25–03–2012ರ ಅನ್ವಯ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರವೀಂದ್ರ ಕುಮಾರ್ ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ– 1 ಮತ್ತು 2 (ಪ್ರ.)

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ

ಪಿಆರ್ ನಂ. 1042

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್, ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 142 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 18–11–2006.
2. ಸರ್ಕಾರದ ಜ್ಞಾಪನ ಪತ್ರ ಸಂಖ್ಯೆ: ಸಿಆಸುಇ 142 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 18–11–2006.
3. ಶ್ರೀ ಬಿ.ಸಿ. ಮುಧೋಳ್, ಇವರ ಹೇಳಿಕೆ ದಿನಾಂಕ: 28–11–2006.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 142 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 11–06–2007.
5. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 22–12–2011.

**ಪ್ರಸ್ತಾವನೆ :**

ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ಇವರು ದಿನಾಂಕ: 01–02–2003 ರಿಂದ 21–12–2003 ರವರೆಗೆ ಮುಖ್ಯ ಇಂಜಿನಿಯರ್ ಆಗಿ ಬಾಗಲಕೋಟೆ ನಗರಾಭಿವೃದ್ಧಿ ಪ್ರಾಧಿಕಾರ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಹಳೇ ಬಾಗಲಕೋಟೆ ಪಟ್ಟಣಕ್ಕೆ ವ್ಯಾಪಕವಾಗಿ ಒಳ ಚರಂಡಿ ವ್ಯವಸ್ಥೆ ಒದಗಿಸುವ ಕಾಮಗಾರಿಗೆ ಸಂಬಂಧಿಸಿದಂತೆ, ಅಂದಾಜು ಪತ್ರಿಕೆಗೆ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದುಕೊಳ್ಳದೆ ಮಂಜೂರಾತಿ ನೀಡಿ. ಟೆಂಡರ್ ಪ್ರಕ್ರಿಯೆಯನ್ನು ಕೈಗೊಂಡು ಕರ್ನಾಟಕ ಲೋಕೋಪಯೋಗಿ ಇಲಾಖೆ ಕೋಡ್ ಸಂಪುಟ (1) ಕಂಡಿಕೆ 104 ಹಾಗೂ

ಕೆ.ಎಫ್.ಸಿ. ನಿಯಮ 178ರ ಉಲ್ಲಂಘನೆ ಮಾಡಿರುವುದು, ದೃಢೀಕೃತ ಟೆಂಡರ್ ಷೆಡ್ಯೂಲ್ "ಬಿ" ಬಗ್ಗೆ ಕರ್ನಾಟಕ ಲೋಕೋಪಯೋಗಿ ಇಲಾಖೆ ಕೋಡ್ ಸಂಪುಟ 1 ರ ಪ್ಯಾರಾ 181ರ ಪ್ರಕಾರ ಪ್ರತಿ ಪುಟಕ್ಕೆ ಸಹಿ ಮಾಡದೇ ಕರ್ತವ್ಯ ಲೋಪ ಎಸಗಿರುವುದು, ಷೆಡ್ಯೂಲ್ ಬಿ. ದಲ್ಲಿನ ಎಲ್ಲಾ ಐಟಂಗಳ ಮೊತ್ತಗಳನ್ನು ದೃಢೀಕರಿಸದೇ ಬದಲಾವಣೆಗೊಂಡ ಪ್ರಮಾಣೀಕೃತ ಟೆಂಡರ್ ಪುಸ್ತಕಗಳಿಗೆ ಸಹಿ ಮಾಡಿ ಕರ್ನಾಟಕ ಲೋಕೋಪಯೋಗಿ ಇಲಾಖೆ, ಕೋಡ್ ಸಂಪುಟ 1 ರ ಕಂಡಿಕೆ 181 ರ ನಿಯಮಗಳ ಉಲ್ಲಂಘನೆ ಮಾಡಿರುವುದು, ಮೊದಲನೇ ಬಿಲ್ ಪಾವತಿಗಾಗಿ ಮೇಲು ರುಜುವಿಗೆ ಬಂದಾಗ ಷೆಡ್ಯೂಲ್ 'ಬಿ'. ದರಗಳಂತೆ ಹೋಲಿಸಿ ಪರಿಶೀಲಿಸದೇ ಸಂದಾಯ ಮಾಡಿದ ಕರ್ತವ್ಯ ಲೋಪ ಎಸಗಿರುವುದು. ಈ ರೀತಿ ದರ ಬದಲಾವಣೆಯಿಂದ ಸರ್ಕಾರಕ್ಕೆ ರೂ. 59,85,060/-ಗಳ ತಾತ್ಕಾಲಿಕ ಹಾನಿ ಉಂಟು ಮಾಡಿ ಕರ್ನಾಟಕ ಆರ್ಥಿಕ ಸಂಹಿತೆಯ ನಿಯಮ 349, 350ರ ಉಲ್ಲಂಘನೆ ಮಾಡಿರುವ ಆರೋಪಗಳಿಗಾಗಿ ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಮೇಲೆ ಓದಲಾದ (1)ರ ದಿನಾಂಕ: 18-11-2006ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 (2)(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್, ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳಿಗಾಗಿ ಶಿಸ್ತುಕ್ರಮ ಜರುಗಿಸಬಹುದೆಂದು ಆದೇಶಿಸಲಾಗಿತ್ತು. ಮೇಲೆ ಓದಲಾದ (2)ರ ಜ್ಞಾಪನ ಪತ್ರ ದಿನಾಂಕ: 18-11-2006 ರಂದು ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್, ಇವರಿಗೆ ನೋಟಿಸು ಜಾರಿ ಮಾಡಲಾಗಿತ್ತು. ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ಸದರಿ ನೋಟಿಸ್‌ಗೆ ಮೇಲೆ ಓದಲಾದ (3)ರ ದಿನಾಂಕ: 28-11-2006ರಂದು ತಮ್ಮ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಅದರಲ್ಲಿ ಬಾಗಲಕೋಟೆ ಪಟ್ಟಣದ ಆರೋಗ್ಯದ ದೃಷ್ಟಿಯಿಂದ ಒಳಚರಂಡಿ ಯೋಜನೆಯನ್ನು ತುರ್ತಾಗಿ ಮುಗಿಸುವ ಉದ್ದೇಶದಿಂದ ಟೆಂಡರ್ ಪ್ರಕ್ರಿಯೆಯನ್ನು ಪ್ರಾರಂಭಿಸಿ ತಾಂತ್ರಿಕ ಮಂಜೂರಾತಿ ನೀಡಿದ್ದು. ಇದರಲ್ಲಿ ಯಾವುದೇ ಆರೋಪವಿರುವುದಿಲ್ಲ. ಟೆಂಡರ್ ಪ್ರತೀ ಪುಟದಲ್ಲಿಯೂ ಸಹ ಸಹಿ ಮಾಡಲಾಗಿದೆ. ಕಾಮಗಾರಿ ಬಿಲ್ಲುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್‌ರವರುಗಳು ಸಿದ್ದಪಡಿಸಿ ಪ್ರಮಾಣೀಕರಿಸಿ ಚೆಕ್ ಮೇಜರ್ ಮಾಡಿರುತ್ತಾರೆ ಇದರಲ್ಲಿ ತಮ್ಮ ಪಾತ್ರವೇನೂ ಇರುವುದಿಲ್ಲ. ಹಾಗೂ ಕಾರ್ಯನಿರ್ವಾಹಕ ಹೋಲಿಸಿ ಇಂಜಿನಿಯರ್‌ರವರು ಬಿಲ್ಲು ತಯಾರಿಸುವಾಗ ಮೂಲ ಪ್ರತಿಯೊಂದಿಗೆ ಸಿದ್ದಪಡಿಸಬೇಕಾಗಿದೆ. ಇದಕ್ಕೆ ತಾವು ಹೊಣೆಗಾರರಲ್ಲವೆಂದು ತಿಳಿಸಿ ತಮ್ಮನ್ನು ಆರೋಪಗಳಿಂದ ಮುಕ್ತರನ್ನಾಗಿಸಿವಂತೆ ತಮ್ಮ ಹೇಳಿಕೆಯನ್ನು ಸಲ್ಲಿಸಿರುತ್ತಾರೆ.

ಮೇಲಿನ ಹೇಳಿಕೆಗಳನ್ನು ಪರಿಶೀಲಿಸಿಲಾಗಿದ್ದು, ಸತ್ಯಾಸತ್ಯತೆಗಳನ್ನು ತಿಳಿಯು ದೃಷ್ಟಿಯಿಂದ ಮೇಲೆ ಓದಲಾದ (4)ರ ದಿನಾಂಕ: 11-06-2007 ರಂದು ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಬಿ. ರಂಗಸ್ವಾಮಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ (4) ರ ದಿನಾಂಕ: 22-12-2011 ರಲ್ಲಿ ವಿಚಾರಣಾಧಿಕಾರಿಗಳು ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಸಾಕ್ಷಿಗಳ ಹೇಳಿಕೆ ಮತ್ತು ದಾಖಲೆಗಳನ್ನು ಪರಿಶೀಲಿಸಿದ ನಂತರ ಆರೋಪಿತ ಅಧಿಕಾರಿಯವರಿಂದ ಯಾವುದೆ ನ್ಯೂನ್ಯತೆಗಳು ಇಲ್ಲದೇ ಇರುವುದರಿಂದ ಹಾಗೂ ಕೆಲವೊಂದು ಕಾಮಗಾರಿಗಳಲ್ಲಿ ಹೆಚ್ಚುವರಿ ಮೊತ್ತ ಪಾವತಿಯಾಗಿರುವುದನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದ ಕಟಾಯಿಸಲಾಗಿದ್ದು, ಅದನ್ನು ಬಾಗಲಕೋಟೆ ಅಭಿವೃದ್ಧಿ ಮಂಡಳಿಗೆ ಬಡ್ಡಿ ಸಮೇತವಾಗಿ ವಸೂಲಿ ಮಾಡಲಾಗಿರುವುದರಿಂದ ಹಾಗೂ ಜ್ಞಾಪನ ಪತ್ರ ಸಂಖ್ಯೆ: ಸಿಆಸುಇ 142 ಎಸ್‌ಇಎನ್ 2005, ದಿನಾಂಕ: 18-11-2006 ರಂದು ತಯಾರಿಸಿದಾಗಲೇ ಷೆಡ್ಯೂಲ್-'ಬಿ'ನ ದಾಖಲೆಗಳು ಕಳೆದು ಹೋಗಿರುವುದಾಗಿ ಕಂಡುಬರುವುದರಿಂದ ಅಸಲು ಷೆಡ್ಯೂಲ್-'ಬಿ'ನ ದಾಖಲೆಗಳನ್ನು ವಿಚಾರಣೆ ಸಮಯದಲ್ಲಿ ಹಾಜರುಪಡಿಸದೇ ಇರುವುದರಿಂದ ದೃಢೀಕೃತ ದಾಖಲೆಗಳನ್ನು ಪರಿಗಣಿಸುವಂತಿಲ್ಲವೆಂದು ನಿರ್ಣಯಿಸಿದ್ದು, ಯಾವುದೇ ಆಡಿಟ್ ಆಕ್ಷೇಪಣೆ ಇಲ್ಲವೆಂದು ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ ಸರ್ಕಾರಿ ನೌಕರರು ಸಾಕ್ಷ್ಯ ನೀಡಿರುವುದರಿಂದ ಸಾಕ್ಷಿ ಪುರಾವೆಗಳಿಂದಲೂ ಷೆಡ್ಯೂಲ್ 'ಬಿ' ನಲ್ಲಿನ ದಾಖಲೆಗಳು ಕಣ್ಮರೆಯಾಗಿದ್ದು ಅದನ್ನು ಒದಗಿಸದೇ ಇರುವುದರಿಂದ ಹಾಗೂ ರೂ. 59,85,060/- ಗಳ ಬಿಲ್ಲುಗಳಿಗೆ ಸಂಬಂಧಿಸಿದಂತೆ ಸಾಕ್ಷ್ಯಾಧಾರಗಳಿಂದ ಹಾಗೂ ನಿಯಮಬಾಹಿರವಾಗಿ ಯಾವುದೇ ಬಿಲ್ಲುಗಳನ್ನು ಪಾವತಿಸಿಲ್ಲವೆಂದು ಹಾಗೂ ಆಡಿಟ್ ಉಲ್ಲಂಘನೆ ಇರುವುದಿಲ್ಲ. ಕಾಮಗಾರಿಗಳ ಅಳತೆಗಳನ್ನು ಅಳತೆ ಪುಸ್ತಕಗಳಲ್ಲಿ ನಮೂದಿಸಿ ಟೆಂಡರ್ ಅನ್ವಯ ಬಿಲ್ಲುಗಳನ್ನು ಸಿ.ಎ.ಜಿ ಕಛೇರಿಗೆ ಸಲ್ಲಿಸಲಾಗಿದ್ದು, ಪಾಟಿ ಸವಾಲಿನಲ್ಲಿ ಸದರಿ ಬಿಲ್ಲುಗಳು ನಿಯಮಾನುಸಾರ ಇರುವುದಾಗಿ ತಿಳಿಸಿರುವ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ನಿರ್ಣಯ ನೀಡಿರುತ್ತಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸದರಿ ಅಧಿಕಾರಿಯವರ ವಿರುದ್ಧ ಉದ್ದೇಶಿತ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಅವರನ್ನು ಆರೋಪ ಮುಕ್ತರನ್ನಾಗಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 142 ಎಸ್‌ಇಎನ್ 2005 ಬೆಂಗಳೂರು, ದಿನಾಂಕ: 08-03-2013**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಅವರನ್ನು ದೋಷ ಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಶ್ರೀ ಬಿ.ಸಿ. ಮುಧೋಳ್ ನಿವೃತ್ತ ಮುಖ್ಯ ಇಂಜಿನಿಯರ್ ಇವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

ಪಿಆರ್ ನಂ. 1043 (ಸೇವೆಗಳು-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್ಇಎಂ 96: ದಿನಾಂಕ : 19-02-1997.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 03 ಸಸಿವಿ 98: ದಿನಾಂಕ : 24-04-1998.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 98: ದಿನಾಂಕ : 24-09-1998.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 99: ದಿನಾಂಕ : 03-04-1999.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 37 ಸಸಿವಿ 2001: ದಿನಾಂಕ : 23-10-2001.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 101 ಸಸಿವಿ 2005: ದಿನಾಂಕ : 10-01-2006.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 705 ಸಅನೇ 2007: ದಿನಾಂಕ : 01-04-2008.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 591 ಸಅಸೇ 2010: ದಿನಾಂಕ : 06-01-2011.
9. ಆರ್ಥಿಕ ಇಲಾಖೆಯ ಕಡತ ಸಂಖ್ಯೆ: ಆಇ 50 ಯೋಮೇಘ 2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾಗಿರುವ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಈ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಯೋಜನಾ ಮೇಲ್ವಿಚಾರಣಾ ಘಟಕವನ್ನು ಒಂದು ವರ್ಷದ ಅವಧಿಗೆ ತತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅ) ಜಂಟಿ/ಉಪ ಕಾರ್ಯದರ್ಶಿ<br>ಆ) ಶೀಘ್ರಲಿಪಿಗಾರರು<br>ಇ) ಕಿರಿಯ ಸಹಾಯಕರು | 1<br>1<br>1 |
| 2. | ಅಕೌಂಟ್ಸ್ ಆಫಿಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯ ಪತ್ರ ಇಲಾಖೆಯಿಂದ ನಿಯೋಜಿಸುವುದು) (ವೇತನ ಶ್ರೇಣಿ ರಹಿತ ಹುದ್ದೆ) | 1 |
| 3. | ಸಂಶೋಧನಾಕಾರಿ : ಸ್ಟಾಸ್ಟಿಕಲ್ ಅನಾಲಿಸ್ಟ್ (ಸಾಂಖ್ಯಿಕ ಹಾಗೂ ಸಾಂಖ್ಯಿಕ ಇಲಾಖೆಯ ಗಣಕ ಯಂತ್ರ ಜ್ಞಾನವನ್ನು ಹೊಂದಿರುವ ಅಧಿಕಾರಿಯನ್ನು ನಿಯೋಜಿಸುವುದು)<br>(ವೇತನ ಶ್ರೇಣಿ ರಹಿತ ಹುದ್ದೆ) | 1 |
| 4. | ಪ್ರೋಗ್ರಾಮರ್ | 1 |
| 5. | ಶೀಘ್ರಲಿಪಿಗಾರರು/ಡಾಟಾ ಎಂಟ್ರಿ ಆಪರೇಟರ್ | 1 |
| 6. | ಸಂಶೋಧನಾ ಮತ್ತು ಪದನಿಮಿತ್ತ ಅಪರ ನಿರ್ದೇಶಕರು/ಸಹ ನಿರ್ದೇಶಕರು/ಉಪ ನಿರ್ದೇಶಕರು ಯೋಜನಾ ಮೇಲ್ವಿಚಾರಣಾ ಘಟಕ (ವೇತನ ಶ್ರೇಣಿ ರಹಿತ ಹುದ್ದೆ) | 2 |
| 7. | ಶಾಖಾಧಿಕಾರಿ | 1 |
| 8. | ಹಿರಿಯ ಸಹಾಯಕರು | 1 |
| 9. | ಶೀಘ್ರಲಿಪಿಗಾರರು | 1 |
| 10. | ಬೆರಳಚ್ಚುಗಾರರು | 1 |
| 11. | ಟೆಕ್ನಿಷಿಯನ್ (ಗ್ರೂಪ್-ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 1 |

ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಒಂದು ವಾಹನ ಚಾಲಕರ ಹುದ್ದೆಯನ್ನು ದಿನಾಂಕ: 19-02-1997ರ ಆದೇಶದಲ್ಲಿ ಸೃಜಿಸಲಾದ ಸಿಬ್ಬಂದಿ ವರ್ಗದ ಅವಧಿಯೊಂದಿಗೆ ಚಾಲಕರ ಹುದ್ದೆಯ ಅವಧಿ ಕೊನೆಗೊಳ್ಳುವ ಷರತ್ತಿನೊಂದಿಗೆ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ: 19-02-1999 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ ಹಾಗೂ ಈ ಹುದ್ದೆಗಳ ಅವಧಿಗೆ ಕೊನೆಗೊಳ್ಳುವಂತೆ ಒಂದು ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳ ಚಾಲ್ತಿಯ ಅವಧಿಗೆ, ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ, ಹಾಗೂ ಸಂಶೋಧನಾಧಿಕಾರಿ ಸ್ಟಾಸ್ಟಿಕಲ್ ಅನಾಲಿಸ್ಟ್ ಹುದ್ದೆಯನ್ನು ಸಹಾಯಕ ನಿರ್ದೇಶಕರು ಉಪ ನಿರ್ದೇಶಕರು ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಹಿರಿಯ ಸಹಾಯಕರು | 1 |
| 2. | ಸಹಾಯಕ | 1 |
| 3. | ಕಿರಿಯ ಸಹಾಯಕ | 1 |

ಮೇಲೆ ಕ್ರಮ ಸಂಖ್ಯೆ: (7)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಎಲ್ಲಾ ಹುದ್ದೆಗಳನ್ನು ದಿನಾಂಕ: 19–02–2008 ರಿಂದ ಮತ್ತೆ 3 ವರ್ಷದ ಅವಧಿಗೆ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ: (8)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿನ ಮೇಲ್ವಿಚಾರಕ ಘಟಕದಲ್ಲಿನ ಎಲ್ಲಾ ಹುದ್ದೆಗಳನ್ನು ದಿನಾಂಕ: 19–02–2011 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ. ಸದರಿ ಹುದ್ದೆಗಳ ಅವಧಿಯ ಮುಂದುವರಿಕೆಯು ದಿನಾಂಕ: 18–02–2012 ರಂದು ಮುಕ್ತಾಯವಾಗಿರುವುದರಿಂದ ಹಾಗೂ ಮೇಲೆ ಕ್ರಮ ಸಂಖ್ಯೆ: (9)ರ ಕಡತದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕವು 1997ರಲ್ಲಿ ಸೃಜಿಸಲಾಗಿದ್ದು, ಸದರಿ ಘಟಕದಲ್ಲಿನ ತಾತ್ಕಾಲಿಕ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಲಾಗಿದ್ದು, 2011ರ ಅಂತ್ಯಕ್ಕೆ 14 ವರ್ಷ ಪೂರ್ಣಗೊಳ್ಳುತ್ತಿದ್ದು, ಸರ್ಕಾರಿ ಆದೇಶ ಸಂಖ್ಯೆ: ಆಇ 58 ಎಸ್‌ಆರ್‌ಎಸ್ 1979, ದಿನಾಂಕ: 27–09–1979ರನ್ವಯ 5 ವರ್ಷಗಳಿಗಿಂತ ಮೇಲ್ಪಟ್ಟ ಅವಧಿಗೆ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಲಾಗಿರುವುದರಿಂದ ಸದರಿ ಹುದ್ದೆಗಳನ್ನು ದಿನಾಂಕ: 19–02–2012 ರಿಂದ ಶಾಶ್ವತ ನೆಲೆಯಲ್ಲಿ ಮುಂದುವರೆಸುವಂತೆ ಆರ್ಥಿಕ ಇಲಾಖೆ ಕೋರಿದೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 93 ಸಅಸೇ 2012 ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2012**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 19–02–2012 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಜಂಟಿ/ ಉಪಕಾರ್ಯದರ್ಶಿ | 1 |
| 2. | ಶೀಘ್ರಲಿಪಿಗಾರರು | 1 |
| 3. | ಕಿರಿಯ ಸಹಾಯಕರು | 1 |
| 4. | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯ ಪತ್ರ ಇಲಾಖೆಯಿಂದ ನಿಯೋಜಿಸುವುದು) (ವೇತನ ಶ್ರೇಣಿ ರಹಿತ ಹುದ್ದೆ) | 1 |
| 5. | ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರು (ವೇತನ ಶ್ರೇಣಿ ರಹಿತ ಹುದ್ದೆ) | 1 |
| 6. | ಪ್ರೊಗ್ರಾಮರ್ | 1 |
| 7. | ಶೀಘ್ರಲಿಪಿಗಾರರು/ಡಾಟಾ ಎಂಟ್ರಿ ಆಪರೇಟರ್ | 1 |
| 8. | ಸಂಶೋಧನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು/ಸಹ ನಿರ್ದೇಶಕರು/ಉಪ ನಿರ್ದೇಶಕರು ಯೋಜನ ಮೇಲ್ವಿಚಾರಣ ಘಟಕ. ವೇತನ ಶ್ರೇಣಿ ರಹಿತ ಹುದ್ದೆ) | 2 |
| 9. | ಶಾಖಾಧಿಕಾರಿ | 1 |
| 10. | ಹಿರಿಯ ಸಹಾಯಕರು | 1 |
| 11. | ಶೀಘ್ರಲಿಪಿಗಾರರು | 1 |
| 12. | ಬೆರಳಚ್ಚುಗಾರರು | 1 |
| 13. | ಟಕ್ನಿಷಿಯನ್ (ಗ್ರೂಪ್–ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 1 |
| 14. | ವಾಹನ ಚಾಲಕ | 1 |
| 15. | ಡಾಟಾ ಎಂಟ್ರಿ ಆಪರೇಟರ್ | 1 |
| 16. | ಹಿರಿಯ ಸಹಾಯಕ | 1 |
| 17. | ಸಹಾಯಕ | 1 |
| 18. | ಕಿರಿಯ ಸಹಾಯಕ | 1 |
| | **ಒಟ್ಟು** | **19** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು–3).

ಪಿಆರ್ ನಂ. 1044

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** Additional Principal Chief Conservator of Forests (Project Tigger), Mysore ಹುದ್ದೆಯನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: A1.IFS.CR-42/2011-12, dated: 16-01-2012.

**ಪ್ರಸ್ತಾವನೆ :**

Sri B.J. Hosmath, IFS, Chief Coservator of Forests (Project Tiger), Mysore ಇವರಿಗೆ ದಿನಾಂಕ: 24–12–2011 ರ ಅಧಿಸೂಚನೆ ಸಂಖ್ಯೆ: DPAR 124 SFP 2011 ರಲ್ಲಿ Additional Principal Chief Coservator of Forests **ಹುದ್ದೆಗೆ ಬಡ್ತಿ ನೀಡಿ.** Additional Principal Chief Conservator of Forests (Project Tiger), Mysore ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದ್ದು, ಇವರು ದಿನಾಂಕ: 29–12–2011 ರಂದು ಈ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುವುದರಿಂದ, ವೃಂದ ಹುದ್ದೆಯಾದ Chief Coservator of Forests (Project Tiger), Mysore.. ಹುದ್ದೆಯನ್ನು ನಿಲಂಬನೆಯಲ್ಲಿಟ್ಟು Additional Principal Chief Coservator of Forests (Project Tiger), Mysore ವೃಂದೇತರ (ex-cadre) ಹುದ್ದೆಯನ್ನು ದಿನಾಂಕ: 29–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರಿಗೆ ಸೃಜಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ, ಆದೇಶಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಅಪಜೀ 020 ಅಪಸೇ 2012, ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು, ವೃಂದ ಹುದ್ದೆಯಾದ Chief Conservator of Forests (Project Tiger), Mysore ಹುದ್ದೆಯನ್ನು ನಿಲಂಬನೆಯಲ್ಲಿಟ್ಟು ದಿನಾಂಕ: 29–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರೆಗೆ Additional Principal Chief Conservator of Forests (Project Tiger), Mysore ವೃಂದೇತರ (ex-cadre) ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸಂಖ್ಯೆ: ಆಇ 115 ವೆಚ್ಚ–5/2012 ದಿನಾಂಕ: 05–03–2012 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿಆರ್ ನಂ. 1045

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** Conservator of Forests and Director, BRT Tiger Reserve, Chamarajanagar ಹುದ್ದೆಯನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1.ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: A1.IFS.CR-52/2011-12, dated: 21-01-2012.

**ಪ್ರಸ್ತಾವನೆ :**

Sri Vijay Mohan Raj, IFS, Deputy Conservator of Forests ಇವರನ್ನು ದಿನಾಂಕ: 24–12–2011 ರ ಅಧಿಸೂಚನೆ ಸಂಖ್ಯೆ: DPAR 124 SFP 2011 ರಲ್ಲಿ Conservator of Forests and Director, BRT Tiger Reserve, Chamarajanagar ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದ್ದು, ಇವರು ದಿನಾಂಕ: 28–12–2011 ರಂದು ಈ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುವುದರಿಂದ, ವೃಂದ ಹುದ್ದೆಯಾದ Deputy Conservator of Forests, Wildife Chamarajanagar ಹುದ್ದೆಯನ್ನು ನಿಲಂಬನೆಯಲ್ಲಿಟ್ಟು Conservator of Forests and Director, BRT Tiger Reserve, Chamarajanagar ವೃಂದೇತರ (ex-cadre) ಹುದ್ದೆಯನ್ನು ದಿನಾಂಕ: 28–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರೆಗೆ ಸೃಜಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 033 ಅಪಸೇ 2012, ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು, ವೃಂದ ಹುದ್ದೆಯಾದ Deputy Conservator of Forests, Wildlife Chamarajanagar ಹುದ್ದೆಯನ್ನು ನಿಲಂಬನೆಯಲ್ಲಿಟ್ಟು, ದಿನಾಂಕ: 28–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರೆಗೆ Convervator of Forests and Director, BRT Tiger Reserve, Chamarajanagar ವೃಂದೇತರ (ex-cadre) ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸಂಖ್ಯೆ: ಆಇ 115 ವೆಚ್ಚ–5/2012, ದಿನಾಂಕ: 05–03–2012 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿಆರ್ ನಂ. 1046

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** Conservator of Forests (Vigilance), Bangalore ಹುದ್ದೆಯನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: A1.IFS.CR-48/2011-12, dated: 16-01-2012.

**ಪ್ರಸ್ತಾವನೆ :**

Sri R. Gokul, IFS, Deputy Conservator of Forests ಇವರಿಗೆ ದಿನಾಂಕ: 24–12–2011 ರ ಅಧಿಸೂಚನೆ ಸಂಖ್ಯೆ: DPAR 124 SFP 2011 ರಲ್ಲಿ ಬಡ್ತಿ ನೀಡಿ. Conservator of Forests (Vigilence), Bangalore ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದ್ದು, ಇವರು ದಿನಾಂಕ: 28–12–2011 ರಂದು ಈ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುವುದರಿಂದ, Conservator of Forests, (Vigilence, Bangalore ವೃಂದೇತರ (ex-cadre) ಹುದ್ದೆಯನ್ನು ದಿನಾಂಕ: 28–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರೆಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 023 ಅಪಸೇ 2012, ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು Conservator of Forests, (Vigilence), Bangalore ವೃಂದವೇತರ (ex-cadre) ಹುದ್ದೆಯನ್ನು ದಿನಾಂಕ: 28–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರೆಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸಂಖ್ಯೆ: ಆಇ 115 ವೆಚ್ಚ–5/2012, ದಿನಾಂಕ: 05–03–2012 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿಆರ್ ನಂ. 1047

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** Conservator of Forests and Director, Rajiv Gandhi National Park, Hunsur ಹುದ್ದೆಯನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: A1.IFS.CR-47/2011-12, dated: 16-01-2012.

**ಪ್ರಸ್ತಾವನೆ :**

Sri Vijay Ranjan Singh, IFS, Deputy Conservator of Forests, Bangalore Circle, Bangalore ಇವರಿಗೆ ದಿನಾಂಕ: 24–12–2011 ರ ಅಧಿಸೂಚನೆ ಸಂಖ್ಯೆ: DPAR 124 SFP 2011 ರಲ್ಲಿ Conservator of Forests ಹುದ್ದೆಗೆ ಬಡ್ತಿ ನೀಡಿ, Conservator of Forest and Director Rajiv Gandhi National Park, Hunsur ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದ್ದು, ಇವರು ದಿನಾಂಕ: 27–12–2011 ರಂದು ಈ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುವುದರಿಂದ, ವೃಂದ ಹುದ್ದೆಯಾದ Deputy Conservator of Forests, Wildlife Division, Hunsur ಹುದ್ದೆಯನ್ನು ನಿಲಂಬನೆಯಲ್ಲಿಟ್ಟು Conservator of Forests and Director Rajiv Gandhi National Park, Hunsur ವೃಂದೇತರ (ex-cadre) ಹುದ್ದೆಯನ್ನು ದಿನಾಂಕ: 27–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 021 ಅಪಸೇ 2012, ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು, ವೃಂದ ಹುದ್ದೆಯಾದ Deputy Conservator of Forests, Wildlife Division, Hunsur ಹುದ್ದೆಯನ್ನು ನಿಲಂಬನೆಯಲ್ಲಿಟ್ಟು, ದಿನಾಂಕ: 27–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ Convervator of Forests and Director, Rajiv Gandhi National Park, Hunsur ವೃಂದೇತರ (ex-cadre) ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸಂಖ್ಯೆ: ಆಇ 115 ವೆಚ್ಚ–5/2012, ದಿನಾಂಕ: 05–03–2012 ರಲ್ಲಿ ನೀಡಿರುವ ಸಹಮತಿಯಿಂದ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿಆರ್ ನಂ. 1048

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಕೊಡಗು ವೃತ್ತ, ಮಡಿಕೇರಿ ಹುದ್ದೆಯನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: A1.IFS.CR-43/2011-12, dated:16-01-2012.

**ಪ್ರಸ್ತಾವನೆ :**

Sri Jayanarasimha Raj, IFS, Conservator of Forests (Budget and Audit), Bangalore ಇವರಿಗೆ ದಿನಾಂಕ: 24–12–2011 ರ ಅಧಿಸೂಚನೆ ಸಂಖ್ಯೆ: DPAR 124 SFP 2011 ರಲ್ಲಿ Chief Conservator of Forests ಹುದ್ದೆಗೆ ಬಡ್ತಿ ನೀಡಿ, Chief Conservator of Forest, Kodagu Circle, Madikeri ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದ್ದು, ಇವರು ದಿನಾಂಕ: 31–12–2011 ರಂದು ಈ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುವುದರಿಂದ, ವೃಂದ ಹುದ್ದೆಯಾದ Conservator of Forests, Kodagu Circle, Madikeri ಹುದ್ದೆಯನ್ನು ನಿಲಂಬನೆಯಲ್ಲಿಟ್ಟು Chief Conservator of Forests, Kodagu Circle, Madikeri ವೃಂದೇತರ (ex-cadre) ಹುದ್ದೆಯನ್ನು ದಿನಾಂಕ: 31–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 026 ಅಪಸೇ 2012, ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು, ವೃಂದ ಹುದ್ದೆಯಾದ Conservator of Forests, Kodagu Circle, Madikeri ಹುದ್ದೆಯನ್ನು ನಿಲಂಬನೆಯಲ್ಲಿಟ್ಟು, ದಿನಾಂಕ: 31–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ Chief Convervator of Forests, Kodagu Circle, Madikeri ವೃಂದೇತರ (ex-cadre) ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸಂಖ್ಯೆ: ಆಇ 115 ವೆಚ್ಚ–5/2012, ದಿನಾಂಕ: 05–03–2012 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿಆರ್ ನಂ. 1049

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಮಂಗಳೂರು ವೃತ್ತ, ಮಂಗಳೂರು ಹುದ್ದೆಯನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: A1.IFS.CR-53/2011-12, dated: 21-01-2012.

**ಪ್ರಸ್ತಾವನೆ :**

Sri S. Shanthappa, IFS, Conservator of Forests Mangalore Circle, Mangalore. ಇವರಿಗೆ ದಿನಾಂಕ: 24–12–2011 ರ ಅಧಿಸೂಚನೆ ಸಂಖ್ಯೆ: DPAR 124 SFP 2011 ರಲ್ಲಿ Chief Conservator of Forests ಹುದ್ದೆಗೆ ಬಡ್ತಿ ನೀಡಿ, Chief Conservator of Forest, Mangalore Circle, Mangalore ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದ್ದು, ಇವರು ದಿನಾಂಕ: 27–12–2011 ರಂದು ಈ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುವುದರಿಂದ, ವೃಂದ ಹುದ್ದೆಯಾದ Conservator of Forests, Mangalore Circle, Mangalore ಹುದ್ದೆಯನ್ನು ನಿಲಂಬನೆಯಲ್ಲಿಟ್ಟು Chief Conservator of Forests, Mangalore Circle, Mangalore ವೃಂದೇತರ (ex-cadre) ಹುದ್ದೆಯನ್ನು ದಿನಾಂಕ: 27–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 034 ಅಪಸೇ 2012, ಬೆಂಗಳೂರು, ದಿನಾಂಕ: 21–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು, ವೃಂದ ಹುದ್ದೆಯಾದ Conservator of Forests, Mangalore Circle, Mangalore ಹುದ್ದೆಯನ್ನು ನಿಲಂಬನೆಯಲ್ಲಿಟ್ಟು, ದಿನಾಂಕ: 27–12–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ Chief Conservator of Forests, Mangalore Circle, Mangalore ವೃಂದವೇತರ (ex-cadre) ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸಂಖ್ಯೆ: ಆಇ 115 ವೆಚ್ಚ–5/2012, ದಿನಾಂಕ: 05–03–2012 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿಆರ್ ನಂ. 1050

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬಳ್ಳಾರಿ ವೃತ್ತ, ಬಳ್ಳಾರಿ ಹುದ್ದೆಯನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: A1.IFS.CR-41/2011-12, dt. 12-01-2012.

**ಪ್ರಸ್ತಾವನೆ:**

Sri. K.N. Murthy, IFS ಇವರನ್ನು ದಿನಾಂಕ: 24-12-2011 ರ ಅಧಿಸೂಚನೆ ಸಂಖ್ಯೆ : DPAR 124 SFP 2011ರಲ್ಲಿ Chief Conservator of Forests, Bellary Circle, Bellary ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದ್ದು, ಇವರು ದಿನಾಂಕ: 29-12-2011 ರಂದು ಈ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುವುದರಿಂದ, ವೃಂದ ಹುದ್ದೆಯಾದ Conservator of Forests, Bellary Circle, Bellary ಹುದ್ದೆಯನ್ನು ನಿಲಂಬನೆಯಲ್ಲಿಟ್ಟು Chief Conservator of forests, Bellary Circle, Bellary ವೃಂದೇತರ (ex-cadre) ಹುದ್ದೆಯನ್ನು ದಿನಾಂಕ: 29-12-2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರಿಗೆ ಸೃಜಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 025 ಅಪಸೇ 2012, ಬೆಂಗಳೂರು, ದಿನಾಂಕ 21-03-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು, ವೃಂದ ಹುದ್ದೆಯಾದ Conservator of Forests, Bellary Circle, Bellary ಹುದ್ದೆಯನ್ನು ನಿಲಂಬನೆಯಲ್ಲಿಟ್ಟು ದಿನಾಂಕ: 29-12-2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ವೃಂದ ಪರಿಷ್ಕರಣೆ ಆಗುವವರೆಗೆ ಯಾವುದು ಮೊದಲೋ ಅಲ್ಲಿಯವರಿಗೆ Chief Conservator of forests, Bellary Cicle, Bellary ವೃಂದೇತರ (ex-cadre) ಹುದ್ದೆಯನ್ನು ಸೃಜಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂಖ್ಯೆ: ಆಇ 115 ವೆಚ್ಚ -5/2012, ದಿನಾಂಕ: 05-03-2012 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 1051

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1)(ಬಿಬಿ)ರ ಪ್ರಕಾರ ಕರ್ನಾಟಕದಲ್ಲಿ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಎರಡು ವರ್ಷಗಳ ಅವಧಿಗೆ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 138 ಎಫ್‌ಡಬ್ಲ್ಯುಎಲ್ 2009, ದಿನಾಂಕ: 03-12-2009.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು ಇವರ ಪತ್ರ ಸಂಖ್ಯೆ: ಬಿ2/ಸಿಡಬ್ಲ್ಯೂಎಲ್-ಸಿಆರ್-28/2005-06/11-12, ದಿನಾಂಕ: 09-02-2012.
3. ಸರ್ಕಾರದ ಆದೇಶ ಸಂಖ್ಯೆ: ಅಪಜೀ 22 ಎಫ್‌ಡಬ್ಲ್ಯೂಎಲ್ 2012, ದಿನಾಂಕ 23-02-2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 03-12-2009ರ ಆದೇಶದಲ್ಲಿ ರಾಜ್ಯದಲ್ಲಿ ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1)(ಬಿಬಿ)ರ ಪ್ರಕಾರ ಸರ್ಕಾರವು ಎರಡು ವರ್ಷಗಳ ಅವಧಿಗೆ ಗೌರವ ವನ್ಯಜೀವಿ ಪರಿಪಾಲಕರನ್ನು ನೇಮಕ ಮಾಡಿದ್ದು, ಈಗ ಸದರಿ ಅವಧಿಯು ಮುಕ್ತಾಯಗೊಂಡಿರುತ್ತದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 09-02-2012ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಹಾಗೂ ಮುಖ್ಯ ವನ್ಯಜೀವಿ ಪರಿಪಾಲಕರು 32 ಮಂದಿಯನ್ನು ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಎರಡು ವರ್ಷಗಳ ಅವಧಿಗೆ ನೇಮಕಾತಿ ಮಾಡಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 23-02-2012ರ ಸರ್ಕಾರದ ಆದೇಶದಲ್ಲಿ ಶ್ರೀ ಜಿ. ಮಲ್ಲೇಶಪ್ಪ, ಸ್ವಾಮಿ ವಿವೇಕಾನಂದ ಸೇವಾ ಟ್ರಸ್ಟ್ (ರಿ), ಬಿಳಿಗಿರಿರಂಗನಬೆಟ್ಟ, ಯಳದಂದೂರು ತಾಲ್ಲೂಕು ಚಾಮರಾಜನಗರ ಜಿಲ್ಲೆ ಇವರನ್ನು ಚಾಮರಾಜನಗರ ಜಿಲ್ಲೆಗೆ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ನೇಮಕ ಮಾಡಲಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 24 ಎಫ್‌ಡಬ್ಲ್ಯೂಎಲ್ 2012, ಬೆಂಗಳೂರು, ದಿನಾಂಕ 20-03-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ವನ್ಯಜೀವಿ(ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1)(ಬಿಬಿ)ರ ಪ್ರಕಾರ ಈ ಕೆಳಕಂಡವರನ್ನು ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಅವರುಗಳ ಹೆಸರಿನ ಮುಂದೆ ತೋರಿಸಿರುವ ಜಿಲ್ಲೆಗಳಿಗೆ ಎರಡು ವರ್ಷಗಳ ಅವಧಿಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ನೇಮಕ ಮಾಡಿದೆ.

| ಕ್ರಮ ಸಂಖ್ಯೆ | ಗೌರವ ವನ್ಯಜೀವಿ ಪರಿಪಾಲಕರ ಹೆಸರು ಮತ್ತು ವಿಳಾಸ | ನೇಮಕಾತಿ ಜಿಲ್ಲೆ |
|---|---|---|
| 1. | ಡಾ. ಮಲ್ಲಪ್ಪ ರಾಚಪ್ಪ ದೇಸಾಯಿ, ಸಾ. ಯಡಹಳ್ಳಿ (ಬೀಳಗಿ ತಾಲ್ಲೂಕ್) ಬಾಗಲಕೋಟೆ | ಬಾಗಲಕೋಟೆ |
| 2. | ಶ್ರೀ ನಂದಿದುರ್ಗ ಬಾಲುಗೌಡ,<br>ಕೃಷ್ಣ ಪಾರಿಜಾತ, ನಂ. 678, ಹೆಚ್.ಎ.ಎಲ್. 3ನೇ ಹಂತ,<br>ಬೆಂಗಳೂರು– 560 075 | ಬೆಂಗಳೂರು ನಗರ |
| 3. | ಕುಮಾರಿ ನಿಸರ್ಗ,<br>ಇಂಡಿಯನ್ ಗ್ರೀನ್ ಪೀಸ್ 678, ಹೆಚ್.ಎ.ಎಲ್. 3ನೇ ಹಂತ,<br>ಬೆಂಗಳೂರು– 560 075 | ಬೆಂಗಳೂರು ಗ್ರಾಮಾಂತರ |
| 4. | ಶ್ರೀ ಸಚಿನ ಮಲ್ಲನಗೌಡ ಪಾಟೀಲ,<br>341, ರೈಲ್ವೆ ರಸ್ತೆ, ಟಿಳಕವಾಡಿ, ಬೆಳಗಾಂ | ಬೆಳಗಾಂ |
| 5. | ಶ್ರೀ. ಸಂತೋಷ್ ಮಾರ್ಟಿನ್,<br>ನಂ. 7, ಬ್ರೂಸ್ ಪೇಟೆ, ಬಳ್ಳಾರಿ, 583 107 | ಬಳ್ಳಾರಿ |
| 6. | ಡಾ. ಸಂಜೀವ ರೆಡ್ಡಿ<br>ವನ್ಯಜೀವಿ ಸಂಶೋಧಕರು ಮತ್ತು ಪಾಧ್ಯಾಪಕರು,<br>ಕರ್ನಾಟಕ ಆರ್ಟ್ಸ್ ಅಂಡ್ ಸೈನ್ಸ್ ಕಾಲೇಜ್ ಬೀದರ್ – 585401 | ಬೀದರ್ |
| 7 | ಶ್ರೀ ಗಂಗಾಧರರಾವಗೌಡ ಶಂಕರರಾವಗೌಡ ನಾಡಗೌಡ<br>ಸಾ: ಬಲದಿನ್ನಿ ತಾ: ಮುದ್ದೇಬಿಹಾಳ ಜಿಲ್ಲೆ : ಬಿಜಾಪುರ | ಬಿಜಾಪುರ |
| 8. | ಶ್ರೀ ಎನ್.ಎಂ. ನವೀನ್,<br>ಬಿನ್.ಕೆ.ಆರ್. ಮೋಹನ್ ಕುಮಾರ್<br># 479, ಕಾಮಧೇನು, 4ನೇ ಅಡ್ಡ ರಸ್ತೆ, ಮಾರುತಿ ದೇವಸ್ಥಾನ ರಸ್ತೆ,<br>ಕುವೆಂಪುನಗರ, ಮೈಸೂರು | ಚಾಮರಾಜನಗರ |
| 9. | ಶ್ರೀ ಶ್ರೀದೇವ್<br>ವುಡವೇ, ಎಸ್ಟೇಟ್, ಜಕ್ಕನಹಳ್ಳಿ ಪೋಸ್ಟ್, ಮಾಳಂದೂರು, ಚಿಕ್ಕಮಗಳೂರು | ಚಿಕ್ಕಮಗಳೂರು |
| 10. | ಶ್ರೀ ಡಿ.ವಿ. ಗಿರೀಶ್,<br>ಕಲ್ಲೇಶ್ವರ ಎಸ್ಟೇಟ್, ಪೋಸ್ಟ್ ಕೈಮರ, ಚಿಕ್ಕಮಗಳೂರು – 577156 | ಚಿಕ್ಕಮಗಳೂರು |
| 11. | ಶ್ರೀ ಜಿ.ಡಿ. ಬಸವರಾಜ್,<br>ವಕೀಲರು, ಉಜ್ಜನಿಮಠದ ರಸ್ತೆ, ರಂಗಯ್ಯನಬಾಗಿಲು ಹತ್ತಿರ, ಚಿತ್ರದುರ್ಗ | ಚಿತ್ರದುರ್ಗ |
| 12. | ಶ್ರೀ. ಡಿ..ಜಿ. ಮಲ್ಲಕಾರ್ಜುನ<br>ಬಿನ್ ಎಂ.ಎನ್. ಗಣೇಶ್ವರ್, ದೇಶದಪೇಟೆ, ಶಿಡ್ಲಘಟ್ಟ, ಚಿಕ್ಕಮಗಳೂರು | ಚಿಕ್ಕಬಳ್ಳಾಪುರ |
| 13. | ಶ್ರೀ ರಾಜೇಂದ್ರ ಹಾಸಭಾವಿ<br>ನಂ. 537/5, ಹಾಸಭಾವಿ ಕೊಟ್ರಪ್ಪ ರೆಸೆಡೆನ್ಸ್<br>ಹಾಸಭಾವಿ, ಸರ್ಕಲ್, ದಾವಣಗೆರೆ –577 001. | ದಾವಣಗೆರೆ |
| 14. | ಶ್ರೀ ಗಂಗಾಧರ ಎಸ್ ಕಲ್ಲೂರು C/o<br>ಎಸ್. ಸಿ. ಮೇಣಸಿನಕಾಯಿ, ಸ್ಟೇಷನ್ ರೋಡ್, ಮಾಳಮಡ್ಡಿ, ಧಾರವಾಡ, | ಧಾರವಾಡ |
| 15. | ಪ್ರೊ.ಸಿ.ಎಸ್. ಅರಸನಾಳ,<br>ಉಪನ್ಯಾಸಕರು, ರಸಾಯನಶಾಸ್ತ್ರ ವಿಭಾಗ,<br>ಜೆ.ಎ. ಸಂಯುಕ್ತ ಪದವಿ ಪೂರ್ವ ಕಾಲೇಜು ಮುಂಡರಗಿ, ಗದಗ ಜಿಲ್ಲೆ | ಗದಗ |
| 16 | ಡಾ. ಕಟೆಪಾಗ ವಿಜಯ್‌ಕುಮಾರ್,<br>ಎನ್‌ವೈರ್ನಾಮೆಂಟಲ್ ಬಯಲಾಜಿ ರಿಸರ್ಚ್ ಯುನಿಟ್,<br>ಡಿಪಾರ್ಟ್‌ಮೆಂಟ್ ಆಫ್ ಜ್ಯೂಯಾಲಜಿ,<br>ಗುಲ್ಬರ್ಗಾ ಯುನಿವರ್‌ಸಿಟಿ, ಗುಲ್ಬರ್ಗಾ– 585 106 | ಗುಲ್ಬರ್ಗಾ |
| 17. | ಶ್ರೀ ಹೆಚ್.ಪಿ.ಮೋಹನ್ ಎಂ.ಎಸ್ಸಿ (ಅಗ್ರಿ)<br>ನಂ. 117, ಹೇಮಾಲಯ, ರವೀಂದ್ರನಗರ್, ಹಾಸನ | ಹಾಸನ |
| 18. | ಶ್ರೀಮತಿ ಮಾಧುರಿ ಜೆ. ದೇವದಾರ್<br>ದೇವದಾರ್ ಹಾಸ್ಪಿಟಲ್ ಕೌಂಪೌಂಡ್ ಸ್ಟೇಷನ್ ರಸ್ತೆ, ಹಾವೇರಿ –581 110 | ಹಾವೇರಿ |

| | | |
|---|---|---|
| 19. | ಶ್ರೀ ಆರ್. ನಾರಾಯಣಸ್ವಾಮಿ<br>ಬಿನ್ ಲೇಟ್ ರಾಮಯ್ಯ<br>ದ್ವಾರಸಂದ್ರ ಕಲ್ಲೂರ್ ಪೋಸ್ಟ್ ಶ್ರೀನಿವಾಸಪುರ, ಕೋಲಾರ ಜಿಲ್ಲೆ | ಕೋಲಾರ |
| 20. | ಶ್ರೀ ಡಿ. ವಲ್ಲಭಾಚಂದ್ರ (ಭಾಬಿ)<br>ತಂದೆ ಶ್ರೀ ಡಿ. ವೆಂಕಟೇಶಪತಿ ರಾಜ್<br>ಹಂಪಿ ಬೋಲ್ಡರ್ಸ್ ನಾರಾಯಣ ಪೇಟೆ ಪೋಸ್ಟ್ ಬಂಡಿ ಹರ್ಲಾಪುರ ತಾ. ಕೊಪ್ಪಳ | ಕೊಪ್ಪಳ |
| 21. | ಶ್ರೀ ಬಿ.ಬಿ. ಚೆಂಗಪ್ಪ<br>ಪಾಲಪೊಪಿ ಎಸ್ಟೇಟ್, ಪೋಸ್ಟ್ ಬಾಕ್ಸ್ ನಂ. 5 ಕುಟ್ಟಾ–571250 ಕೊಡಗು ಜಿಲ್ಲೆ | ಮಡಿಕೇರಿ |
| 22. | ಡಾ. ಬಿ.ಎಂ. ನಾಗಪ್ಪ, ಎಂ.ಎ. ಪಿ.ಹೆಚ್.ಡಿ<br>ಇಂಟಿಗ್ರೇಟೆಡ್ ರೂರಲ್ ಅಂಡ್ ಅರ್ಬನ್<br>ಡೆವೆಲಪ್‌ಮೆಂಟ್ ಇನ್ಸ್‌ಟ್ಯೂಟ್ ಆಫ್ ಅಡ್ಮಿನ್ ಅಫೀಸರ್ ಬಿ.ಡಿ.ಓ. ಆಫೀಸ್ ಹತ್ತಿರ,<br>ಮೈಸೂರು ರಸ್ತೆ, ಮಳವಳ್ಳಿ ಮಂಡ್ಯ ಜಿಲ್ಲೆ | ಮಂಡ್ಯ |
| 23. | ಡಾ. ಶಿವಪ್ರಕಾಶ್ ಎನ್.ಸಿ.<br>ಮಕ್ಕಳ ತಜ್ಞರು<br>ನಂ. 2822, 8ನೇ ಅಡ್ಡರಸ್ತೆ, 6ನೇ ಮುಖ್ಯ ರಸ್ತೆ, ವಿ.ವಿ.ಮೊಹಲ್ಲಾ, ಮೈಸೂರು–2 | ಮೈಸೂರು |
| 24. | ಶ್ರೀ ರಾಜಕುಮಾರ್ ಡಿ.<br>ವೈಲ್ಡ್‌ಲೈಫ್ ಕನ್ಸರ್‌ವೇಷನ್ ಫೌಂಡೇಷನ್,<br># 398/1, ಶಿವಾಯನ ಮಠ ರಸ್ತೆ, ದೇವರಾಜ್ ಮೊಹಲ್ಲಾ ಮೈಸೂರು –570 024 | ಮೈಸೂರು |
| 25. | ಶ್ರೀ ನೀರಜ್ ಕೆ. ನಿರ್ಮಲ್<br>ಸ್ವಾತಿ, ಮೇನ್‌ರೋಡ್, ಉಲ್ಲಾಳ ದಕ್ಷಿಣ ಕನ್ನಡ –575 020 | ಮಂಗಳೂರು |
| 26. | ಶ್ರೀ ನಿರೇನ್ ಜೈನ್<br>ಅರ್ಕಿಟೆಕ್ಟ್, ನೆಲಮಹಡಿ, ರತ್ನ ಅಪಾರ್ಟ್‌ಮೆಂಟ್, ಕದ್ರಿ, ಮಂಗಳೂರು 575002 | ಮಂಗಳೂರು |
| 27. | ಪ್ರೊ. ಶಾನುಕುಮಾರ್ ಗೌಳಿ,<br>ಮುಖ್ಯಸ್ಥರು, ಪ್ರಾಣಿಶಾಸ್ತ್ರ ಜೈವಿಕ ತಂತ್ರಜ್ಞಾನ ವಿಭಾಗ,<br>ಹೌಸ್‌ನಂ. 116, ಪೇಟರ್ಸ್ ರೋಡ್, ರಾಯಚೂರು– 584101 | ರಾಯಚೂರು |
| 28. | ಶ್ರೀ ಎ.ಸಿ. ಶಿವರಾಜು,<br>ಅಚ್ಚಲು ಗ್ರಾಮ, ಸಾತನೂರು ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ | ರಾಮನಗರ |
| 29. | ಶ್ರೀ ರವಿ ಹನಿಯಾ<br>ಬಿನ್ ಹೆಚ್. ಎನ್ ಗಜಾನನ ಭಟ್<br>ಗ್ರಾಮಭಾರತಿ ಹನಿಯಾ ಪೋಸ್ಟ್ ತಾ: ಹೊಸನಗರ, ಶಿವಮೊಗ್ಗ ಜಿಲ್ಲೆ | ಶಿವಮೊಗ್ಗ |
| 30 | ಶ್ರೀ. ಜಿ.ವಿ. ಎನ್. ಮೂರ್ತಿ,<br>ಕೆಸರಾ, 1ನೇ ಕ್ರಾಸ್, ಸಿ.ಎಸ್.ಡಿ. ಲೇಔಟ್, ತುಮಕೂರು | ತುಮಕೂರು |
| 31. | ಶ್ರೀ ಬಾಲಚಂದ್ರ ಹೆಗಡೆ ಎಲ್.<br>ವನ್ಯಜೀವಿ ಅಧ್ಯಯನಕಾರರು, ಸಾಯಿಮನೆ, ನೀಲಕುಂದ ಪೋಸ್ಟ್,<br>ವಯಾ ಹೆಗ್ಗರಣಿ, ಶಿರಸಿ, ತಾಲ್ಲೂಕು, ಉತ್ತರಕನ್ನಡ–581 331. | ಉತ್ತರ ಕನ್ನಡ |
| 32. | ಶ್ರೀ. ಕೆ. ರಾಜಗೋಪಾಲ ಶೆಟ್ಟಿ<br>ನಿವೃತ್ತ ಉಪ ಅರಣ್ಯ ಸಂರಕ್ಷಣಾಧಿಕಾರಿ<br>ಸೇನಾಪುರ ಪೋಸ್ಟ್, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ | ಉಡುಪಿ |

2. ಸರ್ಕಾರದ ಆದೇಶ ಸಂಖ್ಯೆ: ಅಪಜೀ 22 ಎಫ್‌ಡಬ್ಲ್ಯೂಎಲ್ 2012, ದಿನಾಂಕ: 23–02–2012ರಲ್ಲಿ ಶ್ರೀ ಜಿ. ಮಲ್ಲೇಶಪ್ಪ, ಚೇರ್ಮನ್, ಸ್ವಾಮಿ ವಿವೇಕಾನಂದ ಸೇವಾ ಟ್ರಸ್ಟ್ (ರೀ), ಬಿಳಿಗಿರಿರಂಗನಬೆಟ್ಟ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ ಇವರನ್ನು ಈಗಾಗಲೇ ಚಾಮರಾಜನಗರ ಜಿಲ್ಲೆಗೆ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ನೇಮಿಸಿದ್ದು, ಸದರಿಯವರನ್ನೂ ಸಹ ಚಾಮರಾಜನಗರ ಜಿಲ್ಲೆಯ ಗೌರವ ವನ್ಯಜೀವಿ ಪರಿಪಾಲಕರಾಗಿ ಮುಂದುವರೆಸಿದೆ.

3. ಗೌರವ ವನ್ಯಜೀವಿ ಪರಿಪಾಲಕರ ಕರ್ತವ್ಯ ಮತ್ತು ಜವಾಬ್ದಾರಿಗಳು ಈ ಆದೇಶಕ್ಕಾಗಿ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಇರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,

**ANNEXURE TO GOVERNMENT ORDER NO:FEE 24 FWL 2012, DATED : 20-03-2012**

**DUTIES AND RESPONSIBILITIES OF THE HONORARY WILDLIFE WARDENS:**

The main duty and responsibility of an Honorary wildlife warden is to assist whole heartedly the Chief Wildlife Warden for wildlife conservation and protection work especially with regard to the following matters:-

i) Help and assist the Chief Wildlife Warden in control of poaching and trade in wild animals and products/articles thereof;

ii) Help and assist the Chief Wildlife Warden in detection and prosecution of offences under the Wildlife (Protection) Act and the Rules made thereunder;

iii) Help and assist in preventing damage to the habitat of Wildlife including fire protection;

iv) Carrying the message of conservation to the people and enlisting public support for nature and wildlife conservation. The effort should be specially directed towards the communities living in or near the declared wildlife reserves;

v) Any other matter connected with the protection of wildlife which may be entrusted by the Chief Wildlife Warden of the State from time to time;

vi) Participate in carrying out wildlife census, etc., on the specific request/permission of the Chief Wildlife Warden.

**POWERS**

In accordance with sub-section (3) of Section 4 of the Wildlife (Protection) Act, 1972, an Honorary Wildlife Warden appointed under sub-section (1)(bb) of section 4 of the said Act shall be subordinate to the Chief Wildlife Warden of the State.

**GENERAL**

(A) No staff or vehicle support can be provided to Honorary Wildlife Wardens as a matter of course. However, if the circumstances warrant, the departmental staff should provide all possible help and assistance.

(B) It is also appropriate that the actual expenses incurred by an Honorary Wildlife Warden on travel by public transport for carrying out the duties assigned to him should be reimbursed by the State Government. In addition, all actual expenses incurred in the detection of an offence under the Wildlife (Protection) Act, which lead to successful prosecution may be reimbursed after due verification.

(C) The State Government should recognize outstanding work or service rendered by any Honorary Wildlife Warden. Such recoginition can be by way of a letter of commendation or a certificate signed by the Minister in charge of the Department, or the membership of the State Wildlife Board. Cash grants could also be considered in suitable cases.

**Umadevi**

ಪಿ.ಆರ್. 1052

Under Secretary to Government

Forest, Ecology and Environment Department

## ಕಂದಾಯ ಸಚಿವಾಲಯ

**ವಿಷಯ:** ನಿವೃತ್ತ ಭೂಮಾಪಕರುಗಳನ್ನು ಗುತ್ತಿಗೆ ಆಧಾರದ ಮೇರೆಗೆ ನೇಮಿಸುವ ಕುರಿತು.

**ಓದಲಾಗಿದೆ:** ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಪತ್ರ ಸಂಖ್ಯೆ: ನಿವೃತ್ತ ಭೂಮಾಪಕರ ನೇಮಕ 79/2011–12, ದಿ: 16–12–2011.

**ಪ್ರಸ್ತಾವನೆ:**

ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಆಯುಕ್ತರು ದಿನಾಂಕ: 16–12–2011 ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ ಇಲಾಖೆಯಲ್ಲಿ ಖಾಲಿ ಇರುವ ಭೂಮಾಪಕರ ಹುದ್ದೆಗಳನ್ನು ಭರ್ತಿ ಮಾಡುವ ಪ್ರಕ್ರಿಯೆಯು ಅಂತಿಮ ಹಂತದಲ್ಲಿರುತ್ತದೆ. ಸದರಿ ಭೂಮಾಪಕರ ನೇಮಕಾತಿ. ಹೊಂದಿ, ಇಲಾಖಾ ಬುನಾದಿ ತರಬೇತಿಯನ್ನು ಪೂರ್ಣಗೊಳಿಸಿ, ಇಲಾಖೆಯ ಕೆಲಸ ಕಾರ್ಯಗಳಿಗೆ ಪೂರ್ಣ ಪ್ರಮಾಣದಲ್ಲಿ ಲಭ್ಯವಾಗಲು ಇನ್ನೂ ಕನಿಷ್ಠ ಒಂಬತ್ತು ತಿಂಗಳ ಕಾಲಾವಕಾಶ ಬೇಕಾಗಿರುತ್ತದೆ. ಇಲಾಖೆಯಲ್ಲಿ ದಿನದಿಂದ ದಿನಕ್ಕೆ ಅಳತೆ ಕೆಲಸಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರ ಬೇಡಿಕೆ ಹೆಚ್ಚುತ್ತಾ ಬಂದಿದ್ದು, ವಿಲೇವಾರಿ ಪ್ರಮಾಣ ಭೂಮಾಪಕರ ಕೊರತೆಯಿಂದಾಗಿ ನಿರೀಕ್ಷಿತ ಪ್ರಮಾಣದಲ್ಲಿ ಅಗುತ್ತಿಲ್ಲ, ಇದರಿಂದಾಗಿ ಸಾರ್ವಜನಿಕವಾಗಿ ತುಂಬಾ ತೊಂದರೆಯಾಗುತ್ತಿದೆ. ಆದಕಾರಣ, ಇಲಾಖೆಯು ನಿವೃತ್ತ ಭೂಮಾಪಕರ ಸೇವೆಯನ್ನು ಅಳತೆ ಮತ್ತು ಪೋಡಿ ವಿಲೇವಾರಿಗೆ ಬಳಸಿಕೊಳ್ಳುವುದು ಸೂಕ್ತವಾಗಿರುತ್ತದೆ. ಎಂದು ತಿಳಿಸಿರುವರು.

ಈ ರೀತಿ ನಿವೃತ್ತ ಭೂಮಾಪಕರ ಸೇವೆಯನ್ನು ಆಯಾ ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳೇ ನೇಮಿಸಿಕೊಂಡು ಕೆಲಸ ನಿರ್ವಹಿಸಿಕೊಡಲು ಹಾಗೂ ನಿಯಂತ್ರಿಸಲು ಅಧಿಕಾರವನ್ನು ಪ್ರತ್ಯಾಯೋಜಿಸಬಹುದಾಗಿದೆಯೆಂದು ಹಾಗೂ ಈ ಕಾರ್ಯಕ್ರಮಕ್ಕೆ ತಗಲಬಹುದಾದ ವೆಚ್ಚವನ್ನು ಇಲಾಖೆಯ ತತ್ಕಾಲ್ ಮತ್ತು ಮೋಜಣಿ ಬಳಕೆದಾರರ ಶುಲ್ಕದಡಿಯಲ್ಲಿ ಸಂಗ್ರಹಣೆಯಾದ ಹಣದಿಂದ ಭರಿಸಬಹದಾಗಿರುತ್ತದೆ. ಇದು ಸಾರ್ವಜನಿಕ ಹಿತದೃಷ್ಟಿಯಿಂದ ಬಹು ಮುಖ್ಯ ಕಾರ್ಯಕ್ರಮವಾಗಿದ್ದು, ಈ ಸಂಬಂಧ ಸರ್ಕಾರದ ಅನುಮೋದನೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ ಇಲಾಖೆಯ ಭೂಮಾಪನ ಮತ್ತು ಪೋಡಿ ಕಾರ್ಯಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸಾರ್ವಜನಿಕ ಹಿತದೃಷ್ಟಿಯಿಂದ ನಿವೃತ್ತ ಭೂಮಾಪಕರುಗಳನ್ನು ಗುತ್ತಿಗೆ ಆಧಾರದ ಮೇರೆಗೆ ನೇಮಿಸುವ ಕುರಿತು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 347 ಭೂದಾಸ 2011, ಬೆಂಗಳೂರು, ದಿನಾಂಕ 29–03–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ ನಿವೃತ್ತ ಭೂಮಾಪಕರುಗಳನ್ನು ಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಷರತ್ತಿಗೊಳಪಟ್ಟು ನೇಮಕ ಮಾಡಿಕೊಳ್ಳಲು ಸರ್ಕಾರವು ಈ ಮೂಲಕ ಅನುಮತಿ ನೀಡಿ ಆದೇಶಿಸಿದೆ.

a) 1000 ನಿವೃತ್ತ ಭೂಮಾಪಕರುಗಳನ್ನು ಒಂದು ವರ್ಷದ ಅವಧಿಗೆ ಅಥವಾ ಅವಶ್ಯಕತೆಗನುಗುಣವಾಗಿ ಗರಿಷ್ಠ ಎರಡು ವರ್ಷದ ಅವಧಿಯವರೆಗೆ ಗುತ್ತಿಗೆ ಅಧಾರದ ಮೇರೆಗೆ ನೇಮಿಸಿಕೊಳ್ಳುವುದು.

b) ನಿವೃತ್ತ ಭೂಮಾಪಕರುಗಳನ್ನು ಗುತ್ತಿಗೆ ಆಧಾರದ ಮೇರೆಗೆ ನೇಮಿಸುವ ಅಧಿಕಾರವನ್ನು ಹಾಗೂ ಈ ರೀತಿ ನೇಮಕಗೊಂಡ ಭೂಮಾಪಕರುಗಳಿಗೆ ಸಂಬಂಧಪಟ್ಟ ತಾಲ್ಲೂಕುಗಳಲ್ಲಿ ಪೋಡಿ ಪ್ರಕರಣದ ಕೊರತೆ ಕಂಡುಬಂದಲ್ಲಿ ಬೇರೆ ತಾಲ್ಲೂಕುಗಳಿಗೆ ನೇಮಿಸುವ ಅಧಿಕಾರವನ್ನು ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಇವರಿಗೆ ಪ್ರತ್ಯಾಯೋಜಿಸಲಾಗಿದೆ.

c) ನಿವೃತ್ತ ಭೂಮಾಪಕರುಗಳನ್ನು ಗುತ್ತಿಗೆ ಆಧಾರದ ಮೇರೆಗೆ ನೇಮಕ ಮಾಡಿಕೊಳ್ಳುವಾಗ ದೈಹಿಕವಾಗಿ ಸದೃಢವಾಗಿರಬೇಕು ಮತ್ತು ವಯೋಮಿತಿ 70 ವರ್ಷ ಮೀರಿರತಕ್ಕದದ್ದಲ್ಲ ಹಾಗೂ ಸೇವಾವಧಿಯಲ್ಲಿ ಗಂಭೀರ ಸ್ವರೂಪದ ಆರೋಪ ಎಸಗಿ ಕಠಿಣ ದಂಡನೆಗೆ ಒಳಗಾಗಿರಬಾರದು.

d) ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ನಿವೃತ್ತ ಭೂಮಾಪಕರುಗಳ ಸೇವೆಯನ್ನು ತತ್ಕಾಲ್ ಪೋಡಿ, ಬ್ಯಾಕ್‌ಲಾಗ್ ಪೋಡಿ ಮತ್ತು ಮೋಜಿಣಿ ಕೆಲಸಗಳಿಗಲ್ಲದೇ ಬೇರೆ ಯಾವುದೇ ಕೆಲಸಕ್ಕೂ ಉಪಯೋಗಿಸತಕ್ಕದ್ದಲ್ಲ.

e) ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ನಿವೃತ್ತ ಭೂಮಾಪಕರುಗಳು ಇಲಾಖೆಯ ವಿಶೇಷ ಪೋಡಿ ಅಂದೋಲನದಲ್ಲಿ ಗೊತ್ತುಪಡಿಸಿದ ಪ್ರಮಾಣದಂತೆ (1) ಹದ್ದುಬಸ್ತು, ಭೂಪರಿವರ್ತನೆ ಮತ್ತು ಎಲ್.ಆರ್.ಎಫ್. ಪ್ರಕರಣಗಳು ಪ್ರತಿ ದಿನಕ್ಕೆ ಪ್ರತಿ ಭೂಮಾಪಕರಿಗೆ ಕನಿಷ್ಠ 2 ಕಡತಗಳು (2) ದರಖಾಸ್ತು ಮತ್ತು ಭೂಸ್ವಾಧೀನ ಪ್ರಕರಣಗಳಲ್ಲಿ ಪ್ರತಿ ದಿನಕ್ಕೆ ಪ್ರತಿ ನಿವೃತ್ತ ಭೂಮಾಪಕರಿಗೆ ಕನಿಷ್ಠ 6 ಬ್ಲಾಕ್‌ಗಳು ಹಾಗೂ (3) ಇತರೆ ಸರ್ಕಾರಿ ಜಮೀನುಗಳು ಉದಾಹರಣೆ:– ಕೆರೆ, ಗುಂಡುತೋಪು ಇತರೆ ಪ್ರತಿ ದಿನಕ್ಕೆ ನಿವೃತ್ತ ಭೂಮಾಪಕರಿಗೆ 15 ಎಕರೆ ಹಾಗೂ ಇನ್ನುಳಿದಂತೆ ಸುತ್ತೋಲೆ ಸಂಖ್ಯೆ: ಕಂಇ 122 ಭೂದಾಸ 2005, ದಿನಾಂಕ: 10–08–2005 ರಲ್ಲಿ ನಿರ್ದಿಷ್ಟಪಡಿಸಿರುವ ಪ್ರಮಾಣಕ್ಕೆನುಗುಣವಾಗಿ ನಿರ್ವಹಿಸತಕ್ಕದ್ದು, ಸಂಬಂಧಪಟ್ಟ ತಹಶೀಲ್ದಾರ್‌ಗಳು ಗುತ್ತಿಗೆ ನೇಮಕಾತಿ ಭೂಮಾಪಕರುಗಳಿಗೆ ಪೋಡಿ ಪ್ರಕರಣಗಳನ್ನು ಮಾತ್ರ ವಿತರಿಸತಕ್ಕದ್ದು. ಮತ್ತು ಅದಕ್ಕೆ ಅನುಗುಣವಾಗಿ ಅವರ ಕೆಲಸ ಕಾರ್ಯಗಳನ್ನು ನಿರ್ವಹಿಸಿರುವ ಬಗ್ಗೆ ಸಂಬಂಧಪಟ್ಟ ತಹಶೀಲ್ದಾರ್‌ಗಳು ಖಚಿತಪಡಿಸಿಕೊಂಡು ವೇತನ ಭತ್ಯೆಯನ್ನು ಪಾವತಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಅನುಮೋದನೆಯನ್ನು ಪಡೆದು ಭೂಮಾಪನ ಕೇಂದ್ರ ಕಛೇರಿಗೆ ಆನ್‌ಲೈನ್ ಮುಖಾಂತರ ಮಾಹಿತಿ ನೀಡುವುದು.

f) ಗುತ್ತಿಗೆ ಆಧಾರದ ಮೇಲೆ ನೇಮಕಗೊಳ್ಳುವ ಭೂಮಾಪಕರಿಗೆ ವೇತನ ಭತ್ಯೆಗಳ್ನು ಇಲಾಖೆಯ ತತ್ಕಾಲ್ ಮತ್ತು ಮೋಜಣಿ ಶುಲ್ಕ (Tatkal and Mojini User Charges) ದಲ್ಲಿ ಸಂಗ್ರಹಣೆಯಾದ ಹಣದಿಂದ ಭರಿಸುವುದು. ಈ ರೀತಿ ವೇತನ ಭತ್ಯೆ ಪಾವತಿ ಮಾಡುವ ಪೂರ್ವದಲ್ಲಿ ನೇಮಕಗೊಂಡ ಎಲ್ಲಾ ನಿವೃತ್ತ ಭೂಮಾಪಕರುಗಳಿಗೆ ಆನ್‌ಲೈನ್ ಮುಖಾಂತರ ಅವರುಗಳ ಬ್ಯಾಂಕ್ ಖಾತೆಗಳಿಗೆ ಹಣ ಜಮಾ ಮಾಡುವ ಕ್ರಮವನ್ನು ವಹಿಸಿವೇತನ ಭತ್ಯೆ ಪಾವತಿ ಮಾಡುವುದು.

g) ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ಭೂಮಾಪಕರುಗಳಿಗೆ ಅವರುಗಳು ಕಡೆಯದಾಗಿ ಡ್ರಾ ಮಾಡಿದ ವೇತನ ಭತ್ಯೆಗಳನ್ನು ಆಧಾರಿಸಿ Pension Plus Pension Equivalent Gratutity ಅನ್ನು ಕಡಿಮೆ ಮಾಡಿವೇತನವನ್ನು ಗೊತ್ತುಪಡಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 86 ವೆಚ್ಚ 7/2012, ದಿನಾಂಕ: 09–02–2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಂಕರಗೌಡ ಸಿ ದೊಡ್ಡಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಕಂದಾಯ ಇಲಾಖೆ (ಭೂಮಾಪನ)

ಪಿ.ಆರ್. 1053

## ಕಂದಾಯ ಸಚಿವಾಲಯ

**ವಿಷಯ:** ಕಾರವಾರ ತಾಲ್ಲೂಕು ಕೇಂದ್ರದಲ್ಲಿ ನೂತನ ಬಸ್ ನಿಲ್ದಾಣ ನಿರ್ಮಿಸಲು ಹಾಲಿ ಬಸ್ ನಿಲ್ದಾಣದ ಪಕ್ಕದಲ್ಲಿರುವ ತಾಲ್ಲೂಕು ಕಛೇರಿಯ 0–17–06 1/2 ಕ್ಷೇತ್ರವನ್ನು ವಾಯವ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ರವರಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ಪತ್ರ ಸಂಖ್ಯೆ ಎಲ್‌ಎನ್‌ಡಿ/I/ ಡಿಎಸ್‌ಆರ್/29/ 2008–09, ದಿನಾಂಕ 12–02–2009.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರು ದಿ: 12–09–2009 ರ ಪತ್ರದಲ್ಲಿ ಕಾರವಾರ ನಗರದಲ್ಲಿರುವ ಈಗಿನ ಬಸ್ ನಿಲ್ದಾಣದ ಸ್ಥಳವು ಚಿಕ್ಕದಾಗಿದ್ದು, ಈ ನಿಲ್ದಾಣದಲ್ಲಿ ಸದ್ಯದಲ್ಲಿ ಏಕಕಾಲಕ್ಕೆ ಕೇವಲ 8 ಬಸ್‌ಗಳನ್ನು ಮಾತ್ರ ನಿಲುಗಡೆ ಮಾಡಲು ಸಾಧ್ಯವಾಗುತ್ತದೆ. ಈ ನಿಲ್ದಾಣದಲ್ಲಿ ಪ್ರತಿ ದಿನವು ಸುಮಾರು 234 ವಾಹನಗಳು ಆಗಮಿಸಿ ನಿರ್ಗಮಿಸುತ್ತವೆ. ಸ್ಥಳದ ಅಭಾವದಿಂದಾಗಿ ಈ ಬಸ್ ನಿಲ್ದಾಣವನ್ನು ವಿಸ್ತರಿಸುವುದು ತುಂಬಾ ಅವಶ್ಯಕವಿದೆಯೆಂದು ಹಿರಿಯ ವಿಭಾಗೀಯ ನಿಯಂತ್ರಣಾಧಿಕಾರಿ, ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಶಿರಸಿ ವಿಭಾಗ, ಶಿರಸಿ, ಇವರು

ಅಭಿಪ್ರಾಯ ಪಟ್ಟಿರುವುದಾಗಿ ತಿಳಿಸಿರುತ್ತಾರೆ. ಈ ಬಸ್ ನಿಲ್ದಾಣಕ್ಕೆ ಹೊಂದಿಕೊಂಡಿರುವ ತಹಶೀಲ್ದಾರ್ ಕಛೇರಿಯ ಪ್ರದೇಶವು ಕಾರವಾರ ತಾಲ್ಲೂಕಿನ ಬಾಡ–III ಗ್ರಾಮದ ಸ.ನಂ. 1367/ಅ ರಲ್ಲಿ 0–17–06 1/2 ಜಾಗ ಹೊಂದಿದ್ದು, ಈಗ ಬಸ್ ನಿಲ್ದಾಣದ ಮತ್ತು ತಹಶೀಲ್ದಾರ್ ಕಛೇರಿಯ ನಿವೇಶನ ಸೇರಿಸಿದಲ್ಲಿ ಒಟ್ಟು 1.04 ಎಕರೆ ಕ್ಷೇತ್ರವಾಗುತ್ತಿದ್ದು, ಈ ಸ್ಥಳದಲ್ಲಿ ನೆಲ ಅಂತಸ್ತಿನಲ್ಲಿ ನೂತನ ಹೈಟೆಕ್ ಮಾದರಿಯ ಬಸ್ ನಿಲ್ದಾಣ ಮತ್ತು ಮೇಲಿನ ಅಂತಸ್ತನ್ನು ತಹಶೀಲ್ದಾರ್ ಕಛೇರಿಗೆ ಮೀಸಲಿಡುವುದಾಗಿ ತಿಳಿಸಿರುತ್ತಾರೆ.

ಬಸ್ ನಿಲ್ದಾಣಕ್ಕಾಗಿ ತಹಶೀಲ್ದಾರ್ ಕಛೇರಿಯ ಸ್ಥಳದ ಕ್ಷೇತ್ರ 0–17–06 1/2 ಎಕರೆ ಇದ್ದು, ಇಂದಿನ ಮಾರುಕಟ್ಟೆ ದರದಲ್ಲಿ ಪ್ರತಿ ಚದರ ಅಡಿಗೆ ರೂ. 950/– ರಂತೆ ಜಮೀನಿನ ಮೌಲ್ಯ ರೂ. 1.76 ಕೋಟಿ ಅಗುತ್ತದೆ. ಉಪನೋಂದಣಾಧಿಕಾರಿ, ಕಾರವಾರ ರವರ ಮಾರ್ಗಸೂಚಿ ದರದಂತೆ ಪ್ರತಿ ಚದರ ಅಡಿಗೆ ರೂ. 420/– ರಂತೆ ಮೌಲ್ಯವು ರೂ. 77.80– ಲಕ್ಷಗಳಾಗುತ್ತವೆ. ಇದರ ಹೊರತಾಗಿ ಈ ಜಮೀನಿನಲ್ಲಿರುವ ಕಛೇರಿಯ ಕಟ್ಟಡ ಹಾಗೂ ಬಾವಿ ಮೌಲ್ಯವು ರೂ. 50,00,000/– (50–00 ಲಕ್ಷಗಳು) ಗಳಾಗುವುದೆಂದು ತಹಶೀಲ್ದಾರ್ ಕಾರವಾರ ರವರು ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಮಾರುಕಟ್ಟೆ ಬೆಲೆಯನ್ನು ಪರಿಗಣನೆಗೆ ತೆಗೆದುಕೊಂಡಲ್ಲಿ ಜಮೀನಿನ ಹಾಗೂ ಕಟ್ಟಡದ ಮೌಲ್ಯ ಸೇರಿ ಒಟ್ಟು ರೂ. 2.26 ಕೋಟಿಗಳಾಗುತ್ತಿದ್ದು, ಈ ಹಣವನ್ನು ವಾಯುವ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ರವರಿಂದ ಪಡೆದುಕೊಂಡ ನಂತರ ಈ ಹಣದಲ್ಲಿ ಕಾರವಾರದಲ್ಲಿ ಒಂದು ಮಿನಿ ಸೌಧವನ್ನು ಸರ್ಕಾರದ ಹೆಚ್ಚುವರಿ ಆರ್ಥಿಕ ನೆರವು ಪಡೆದು ನಿರ್ಮಿಸಬಹುದಾಗಿದೆ ಎಂದು ಜಿಲ್ಲಾಧಿಕಾರಿಯವರು ತಿಳಿಸಿರುತ್ತಾರೆ. ವಾಯುವ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ವಿಭಾಗೀಯ ನಿಯಂತ್ರಣಾಧಿಕಾರಿ, ಶಿರಸಿ, ವಿಭಾಗ, ಶಿರಸಿ, ರವರಿಗೆ ಈಗ ಇರುವ ಬಸ್ ನಿಲ್ದಾಣಕ್ಕೆ ಹೊಂದಿರುವ ತಹಶೀಲ್ದಾರ್ ಕಛೇರಿಗೆ ಸೇರಿದ ಕಾರವಾರ ತಾಲ್ಲೂಕಿನ ಬಾಡ ಗ್ರಾಮದ ಸ.ನಂ. 1367/ಅ ರಲ್ಲಿ 0–17–06 1/2 ಗುಂಟೆಯನ್ನು ಇಂದಿನ ಬಜಾರಿ ಕಿಮ್ಮತ್ತು ಮತ್ತು ಕಟ್ಟಡದ ಮೌಲ್ಯ ಸೇರಿಸಿ ರೂ. 2.26 ಕೋಟಿ ನೀಡಿದ ನಂತರದಲ್ಲಿ ವರ್ಗಾಯಿಸಲು ಸೂಕ್ತ ಆದೇಶ ನೀಡಲು ಕೋರಿರುತ್ತಾರೆ.

ಸರ್ಕಾರದ ಕಾರ್ಯದರ್ಶಿಗಳು, ಸಾರಿಗೆ ಇಲಾಖೆ ರವರು ದಿ: 25–09–2010ರ ಪತ್ರದಲ್ಲಿ ಕಾರವಾರ ನಗರದಲ್ಲಿ ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯಿಂದ ಸುಸಜ್ಜಿತವಾಗಿ ನೂತನ ಬಸ್ ನಿಲ್ದಾಣವನ್ನು ಸುಮಾರು 2.5 ಕೋಟಿಗಳ ವೆಚ್ಚದಲ್ಲಿ ನಿರ್ಮಿಸಲು ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗಿದೆ. ಈ ನೀವೇಶನ ವಿಸ್ತೀರ್ಣವು 27 ಗಂಟೆ ಮಾತ್ರ ಇದ್ದು, ಈ ಸುಸಜ್ಜಿತ ಬಸ್ ನಿಲ್ದಾಣಕ್ಕೆ ಸ್ಥಳ ಸಾಕಾಗುವುದಿಲ್ಲ, ಆದಕಾರಣ, ಸದರಿ ನಿಲ್ದಾಣಕ್ಕೆ ಹೊಂದಿಕೊಂಡಂತಿರುವ ತಾಲ್ಲೂಕು ಕಛೇರಿಯ ಹಳೆಯ ಕಟ್ಟಡ ಇದ್ದು, ಅದು ಸದ್ಯದಲ್ಲಿಯೇ ಜಿಲ್ಲಾಧಿಕಾರಿಗಳ ಕಛೇರಿಗೆ ಸ್ಥಳಾಂತರಗೊಳ್ಳುತ್ತಿರುವುದರಿಂದ ಸದರಿ ಕಟ್ಟಡ ಮತ್ತು ಜಾಗವು ಖಾಲಿಯಾಗಲಿದೆ. ಆದುದರಿಂದ ಈಗ ಹಾಲಿ ತಾಲ್ಲೂಕು ಕಛೇರಿ ಇರುವ 17 ಗುಂಟೆ ಜಾಗವನ್ನು (ಹಳೆಯ ಕಟ್ಟಡ ಸಮೇತ) ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಗೆ ಮಾರ್ಗ ಸೂಚಿ ದರ ಬೆಲೆಯಲ್ಲಿ ಶೇ. 50 ರಷ್ಟು ದರವನ್ನು ನಿಗಧಿಪಡಿಸಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಹಾಗೂ ಉತ್ತರ ಕನ್ನಡ ಜಿಲ್ಲೆಯ ಉಸ್ತುವಾರಿ ಸಚಿವರು ದಿ: 03–11–2010ರ ತಮ್ಮ ಟಿಪ್ಪಣಿಯಲ್ಲಿ ಕಾರವಾರ ನಗರದಲ್ಲಿ ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯಿಂದ ಸುಸುಜ್ಜಿತ ನೂತನ ಬಸ್ ನಿಲ್ದಾಣವನ್ನು ಸುಮಾರು ರೂ. 2.50 ಕೋಟಿಗಳ ವೆಚ್ಚದಲ್ಲಿ ನಿರ್ಮಿಸಲಾಗುತ್ತಿದ್ದು, ಹಾಲಿ ಈ ನಿವೇಶನದ ವಿಸ್ತೀರ್ಣವು 27 ಗುಂಟೆ ಮಾತ್ರ ಇರುವುದರಿಂದ ಈ ಜಾಗವು ಸಾಕಾಗುವುದಿಲ್ಲ. ಆದುದರಿಂದ ಹಾಲಿ ತಾಲ್ಲೂಕು ಕಛೇರಿ ಇರುವ ಜಾಗವನ್ನು ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಗೆ ಹಂಚಿಕೆ ಮಾಡಲು ಜಿಲ್ಲಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ತಹಶೀಲ್ದಾರ್ ಕಟ್ಟಡದ 17 ಗುಂಟೆ ನಿವೇಶನವನ್ನು ಆ ಸಂಸ್ಥೆಗೆ ಮಾರ್ಗಸೂಚಿ ಬೆಲೆಯ ಶೇ. 50 ರಷ್ಟು ದರವನ್ನು ನಿಗಧಿಪಡಿಸಿ ಮಂಜೂರು ಮಾಡಲು ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು ಪ್ರಸ್ತಾಪಿಸಿರುವ ಜಮೀನಿನ ಇತ್ತೀಚಿನ ಮಾರುಕಟ್ಟೆ ಬೆಲೆ ಪ್ರತಿ ಚದರ ಅಡಿಗೆ ರೂ. 950/– ರಂತೆ ಒಟ್ಟು ಮೌಲ್ಯ 1.76 ಕೋಟಿ ಆಗುತ್ತದೆ. ಮಾರ್ಗಸೂಚಿ ದರದಂತೆ ಪ್ರತಿ ಚದರ ಅಡಿಗೆ ರೂ. 420/– ರಂತೆ ರೂ. 77.80 ಲಕ್ಷಗಳಾಗುತ್ತದೆ ತಹಶೀಲ್ದಾರ್ ಕಛೇರಿ ಕಟ್ಟಡ ಹಾಗೂ ಬಾವಿಯ ಮೌಲ್ಯ ರೂ. 50 ಲಕ್ಷಗಳಾಗುತ್ತಿದ್ದು, ಒಟ್ಟಾರೆ ರೂ. 2.26 ಕೋಟಿಗಳಾಗುತ್ತದೆ. ಸದರಿ ಮೌಲ್ಯವನ್ನು ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯಿಂದ ಪಡೆದು ಹಸ್ತಾಂತರಿಸಲು ಆರ್ಥಿಕ ಇಲಾಖೆಯ ಅಭಿಪ್ರಾಯವನ್ನು ಪಡೆಯಲಾಗಿ, ಆರ್ಥಿಕ ಇಲಾಖೆಯು ಪ್ರಸ್ತಾಪಿತ ಜಮೀನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಬಸ್ ನಿಲ್ದಾಣದ ನಿರ್ಮಾಣಕ್ಕಾಗಿ ಬೇಕಾಗಿರುವುದರಿಂದ, ಜಾರಿಯಲ್ಲಿರುವ ನಿಯಮಗಳಂತೆ ಶೇಕಡ 50 ರಷ್ಟು ಬೆಲೆ ನಿಗದಿಪಡಿಸಿ ನೀಡಲು ಸಹಮತಿ ನೀಡಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 06 ಎಲ್‌ಜಿಎನ್ 2010, ಬೆಂಗಳೂರು, ದಿನಾಂಕ 19–03–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕು, ಬಾಡಾ ಗ್ರಾಮದ ಸರ್ವೆ ನಂಬರ್ 1367/ಅ ರಲ್ಲಿ ತಾಲ್ಲೂಕು ಕಛೇರಿಗೆ ಸೇರಿದ 0–17–06 1/2 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಾಮಾವಳಿ 1969 ರ ನಿಯಮ 20 ರಡಿ ಮಾರ್ಗಸೂಚಿ ದರ ಪ್ರತಿ ಚದರ ಅಡಿಗೆ ರೂ. 420/– ರಲ್ಲಿ ಶೇ. 50 ರಷ್ಟುನ್ನು ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ನಿಗದಿಪಡಿಸಿ, ವಾಯುವ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಮಂಜೂರು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 899 ವೆಚ್ಚ 7/2011, ದಿನಾಂಕ: 03–11–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. 1054

ಕಂದಾಯ ಇಲಾಖೆ

(ಭೂ ಮಂಜೂರಾತಿ, ಭೂ ಕಂದಾಯ,

ಭೂ ಸ್ವಾಧೀನ ಮತ್ತು ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ 2011-12ನೇ ಸಾಲಿನ ಆಯುವ್ಯಯ ಲೆಕ್ಕ ಶೀರ್ಷಿಕೆ 2030 (ಯೋಜನೇತರ) ರಡಿ ಒದಗಿಸಲಾಗಿರುವ ಅನುದಾನದಲ್ಲಿ ಉಳಿಕೆಯಾಗುವ ಅನುದಾನವನ್ನು ಮರುಹೊಂದಾಣಿಕೆ ಮೂಲಕ ಪುನರ್ ವಿನಿಯೋಗಗೊಳಿಸುವ ಕುರಿತು. ಹೊರಡಿಸಿದ್ದ ಆದೇಶವನ್ನು ಹಿಂಪಡೆಯುವ ಬಗ್ಗೆ-ಆದೇಶ.

**ಓದಲಾಗಿದೆ:** 1)ಸರ್ಕಾರದ ಆದೇಶ ಸಂಖ್ಯೆ: ಕಂಇ 207 ಮನೋಮು 2011 ದಿನಾಂಕ: 12-12-2011.

2) ಮಹಾಲೇಖಪಾಲರು (ಎ&ಇ), ಕರ್ನಾಟಕ, ಬೆಂಗಳೂರು ರವರ ಪತ್ರ ಸಂಖ್ಯೆ: ಎಎಡಿ/ಎ-5/2011-12/174 ದಿನಾಂಕ: 18-01-2012.

3) ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ 7&8) ರವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 198 ವೆಚ್ಚ-7/2012, ದಿನಾಂಕ: 05-03-2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2011-12ನೇ ಸಾಲಿಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ರೂ. 340.36 ಲಕ್ಷಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ 2030-03-001-2-04-051 (ಯೋಜನೇತರ) ರಿಂದ ಲೆಕ್ಕ ಶೀರ್ಷಿಕೆ 2030-03-001-1-00-71 (ಯೋಜನೇತರ) ಪುನರ್ ಹೊಂದಾಣಿಕೆ ಮಾಡಿ ಪುನರ್ ವಿನಿಯೋಗಗೊಳಿಸುವ ಕುರಿತು ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (2)ರ ಮಹಾಲೇಖಪಾಲರು (ಎ ಮತ್ತು ಇ) ರವರ ಪತ್ರದಲ್ಲಿ 2011-12ನೇ ಸಾಲಿಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ರೂ. 340.36 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2030-03-001-2-04-051 (ಯೋಜನೇತರ) ರಿಂದ ಲೆಕ್ಕ ಶೀರ್ಷಿಕೆ 2030-03-001-1-00-71 (ಯೋಜನೇತರ) ಪುನರ್ ಹೊಂದಾಣಿಕೆ ಮಾಡಿಕೊಳ್ಳುವ ಕುರಿತು ಆರ್ಥಿಕ ಇಲಾಖೆಯು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 123 ಬಿಆರ್‌ಎಸ್ 2011 ದಿನಾಂಕ: 12-12-2011ನ್ನು ಹೊರಡಿಸಿರುವುದರಿಂದ, ಕಂದಾಯ ಇಲಾಖೆಯು ಇದೇ ವಿಷಯದ ಸಂಬಂಧ ಹೊರಡಿಸಿರುವ ದಿನಾಂಕ: 12-12-2011ರ ಮತ್ತೊಂದು ಆದೇಶವನ್ನು ಪರಿಗಣಿಸಲು ಅವಕಾಶವಿರುವುದಿಲ್ಲವೆಂದು ತಿಳಿಸಿರುತ್ತದೆ.

ಮೇಲೆ ಓದಲಾದ (3)ರ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿಯಲ್ಲಿ ಮಹಾಲೇಖಪಾಲರು (ಎ&ಇ) ರವರ ಪತ್ರದಲ್ಲಿನ ನಿರ್ದೇಶನದನ್ವಯ ಕಂದಾಯ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ: ಕಂಇ 207 ಮುನೋಮು 2011 ದಿನಾಂಕ: 12-12-2011 ರಂದು ಹೊರಡಿಸಿರುವ ಆದೇಶವನ್ನು ಹಿಂಪಡೆಯುವಂತೆ ತಿಳಿಸಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 25 ಮುನೋಮು 2012, ಬೆಂಗಳೂರು, ದಿನಾಂಕ 15-03-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ 2011-12ನೇ ಸಾಲಿನಲ್ಲಿ ರು. 340.36 ಲಕ್ಷಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ 2030-03-001-2-04-051 (ಯೋಜನೇತರ) ರಿಂದ ಲೆಕ್ಕ ಶೀರ್ಷಿಕೆ 2030—03-001-1-00-71 (ಯೋಜನೇತರ) ಪುನರ್ ಹೊಂದಾಣಿಕೆ ಮಾಡಿ ಪುನರ್ ವಿನಿಯೋಗಗೊಳಿಸುವ ಕುರಿತು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 123 ಬಿಆರ್‌ಎಸ್ 2011 ದಿನಾಂಕ: 12-12-2011 ಹೊರಡಿಸಿರುವುದು ಊರ್ಜಿತವಾಗಿರುವುದರಿಂದ ಇದೇ ವಿಷಯದ ಸಂಬಂಧ ಕಂದಾಯ ಇಲಾಖೆಯಿಂದ ಹೊರಡಿಸಲಾಗಿದ್ದ ಸರ್ಕಾರದ ಆದೇಶ ಸಂಖ್ಯೆ: ಕಂಇ 207 ಮುನೋಮು 2011 ದಿನಾಂಕ: 12-12-2011 ರ ಆದೇಶವನ್ನು ಈ ಕೂಡಲೇ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 198 ವೆಚ್ಚ 7/2012, ದಿನಾಂಕ: 05-03-2012ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ನೋಂದಣಿ & ಮುದ್ರಾಂಕ)

ಪಿ.ಆರ್. 1055

## ಕಂದಾಯ ಸಚಿವಾಲಯ

**ವಿಷಯ:** ಮಂಡ್ಯ ಜಿಲ್ಲೆಯ ಮಳವಳ್ಳಿ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಕಂಇ 46 ಮುಸರ 2009, ದಿನಾಂಕ: 25-02-2009.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಮಂಡ್ಯ ಜಿಲ್ಲೆಯ ಮಳವಳ್ಳಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಮಳವಳ್ಳಿ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಮಂಡ್ಯ ಜಿಲ್ಲೆ | ಸದಸ್ಯರು |

| | | |
|---|---|---|
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಮಳವಳ್ಳಿ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 12 ಮುಸರ 2011, ಬೆಂಗಳೂರು, ದಿನಾಂಕ 24–03–2012**

ಮಂಡ್ಯ ಜಿಲ್ಲೆಯ ಮಳವಳ್ಳಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಕೆ.ಸಿ. ನಾಗೇಗೌಡ ಬಿನ್ ಚೌಡೇಗೌಡ,<br>ಕ್ಯಾತಗೌಡನದೊಡ್ಡಿ, ಕಸಬಾ ಹೋಬಳಿ, ಮಳವಳ್ಳಿ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ರೂಪ ಬಿ.ಎನ್. ಕೋಂ ನಾಗೇಂದ್ರ ಸ್ವಾಮಿ ಎ.ಎಂ.,<br>ಅಗಸನಪುರ ಗ್ರಾಮ, ಕಸಬಾ ಹೋಬಳಿ, ಮಳವಳ್ಳಿ ತಾಲ್ಲೂಕು | ಮಹಿಳೆ |
| 3 | ಶ್ರೀಮತಿ ರೇಖಾಮಣಿ ಕೋಂ ಮಹದೇವಯ್ಯ,<br>ಬಿ.ಜಿ. ಮೋಳೆ, ಬಿ.ಜಿ. ಪುರ ಹೋಬಳಿ, ಮಳವಳ್ಳಿ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಭಾಗ್ಯಮ್ಮ ಕೋಂ. ಮಹದೇವು,<br>ಬ್ಯಾಡರಹಳ್ಳಿ, ಹಲಗೂರು ಹೋಬಳಿ, ಮಳವಳ್ಳಿ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1056 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ:** 2011–12ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ: 1**. ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2011–12ನೇ ಸಾಲಿನಲ್ಲಿ ಮುಂಗಾರು ಮಳೆವಿಫಲವಾಗಿ, ರಾಜ್ಯದ 24 ಜಿಲ್ಲೆಗಳ 123 ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ ಉಂಟಾಗಿರುತ್ತದೆ. ಬರ ಪರಿಸ್ಥಿತಿಯನ್ನು ಎದುರಿಸಲು ಕುಡಿಯುವ ನೀರು ಸರಬರಾಜು, ಜಾನುವಾರುಗಳಿಗೆ ಮೇವು ಒದಗಿಸುವ ಮತ್ತು ಜಾನುವಾರು ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಪತ್ರಗಳ ಮುಖೇನ ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿಗಳು ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು, ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 83 ಟಿಎನ್‌ಆರ್ 2012, ಬೆಂಗಳೂರು, ದಿನಾಂಕ 26–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮುಂಗಾರು ಮಳೆಯ ಕೊರತೆಯಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರಮ. ಸಂಖ್ಯೆ | ಜಿಲ್ಲೆ | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | ಕೋಲಾರ | 100.00 |
| 2. | ಧಾರವಾಡ | 300.00 |
| 3. | ಬೆಂಗಳೂರು ಗ್ರಾಮಾಂತರ | 100.00 |
| | ಒಟ್ಟು | 500.00 |

(ರೂಪಾಯಿ ಐದು ನೂರು ಲಕ್ಷಗಳು ಮಾತ್ರ)

1. ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ಅನುದಾನವನ್ನು ವೆಚ್ಚ ಮಾಡುವುದು.
2. ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಸಮಾಲೋಚಿಸಿ.
   ಅ) ಕುಡಿಯುವ ನೀರಿನ ವ್ಯವಸ್ಥೆ ಹಾಗೂ
   ಆ) ಜಾನುವಾರುಗಳ ಸಂರಕ್ಷಣೆಗಾಗಿ ಮಾತ್ರ ಅನುದಾನವನ್ನು ಬಳಸುವುದು.
3. ಜಿಲ್ಲಾ ಉಸ್ತುವಾರಿ ಸಚಿವರುಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭೀವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಈ ಬಗ್ಗೆ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿರವರುಗಳು ಆಯಾ ಜಿಲ್ಲಾ ಸಚಿವರೊಡನೆ ನಿಕಟ ಸಂಪರ್ಕವಿರಿಸಿಕೊಂಡು ಸಭೆಗಳನ್ನು ಆಯೋಜಿಸಲು ಕ್ರಮ ವಹಿಸುವುದು.
4. ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭೀವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಪ್ರತಿ ತಿಂಗಳ 5ನೇ ತಾರೀಖಿನೊಳಗೆ ಸಭೆಗಳ ನಡೆವಳಿಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.
5. ಪ್ರತಿ ತಾಲ್ಲೂಕಿನಲ್ಲಿ ಶಾಸಕರ ಅಧ್ಯಕ್ಷತೆಯಲ್ಲಿ ಬರಪರಿಹಾರ ಕಾಮಗಾರಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನು ಸೇರಿಸಿದಂತೆ ಕ್ರಿಯಾ ಯೋಜನೆಗಳನ್ನು ಸಿದ್ದಪಡಿಸಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ಕರೆದು ಸಿದ್ಧಪಡಿಸಿದ ಹಾಗೂ ಅನುಮೋದಿಸಿದ ಕಾರ್ಯ ಯೋಜನೆಗಳನ್ನು ಯುದ್ದೋಪಾದಿಯಲ್ಲಿ ಜಾರಿಗೊಳಿಸುವುದು.
6. ಬರಪೀಡಿತ ಪ್ರದೇಶಗಳಿಗೆ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ವ್ಯಾಪಕವಾಗಿ ಪ್ರವಾಸ ಮಡುವುದು ಹಾಗೂ ಯಾವುದೇ ಗ್ರಾಮದಲ್ಲಿ ಕುಡಿಯುವ ನೀರು ಹಾಗೂ ಜಾನುವಾರುಗಳಿಗೆ ಸಂಬಂಧಪಟ್ಟ ಸಮಸ್ಯೆಗಳು ಉದ್ಭವವಾಗದಂತೆ ನೋಡಿಕೊಳ್ಳುವುದು. ಬರಪೀಡಿತ ಪ್ರದೇಶದಲ್ಲಿ ಜನರು ಗುಳೇ ಹೋಗುವುದನ್ನು ತಡೆಗಟ್ಟಲು ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಕಾಮಗಾರಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬೇಡಿಕೆಗನುಗುಣವಾಗಿ ಅನುಷ್ಠಾನಗೊಳಿಸುವುದು.
7. ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸಲು ತಾಲ್ಲೂಕಿಗೊಂದು ಸಹಾಯವಾಣಿಯನ್ನು ಸ್ಥಾಪಿಸಿ ತಾಂತ್ರಿಕ ಸಿಬ್ಬಂದಿಯನ್ನು ನಿಯೋಜಿಸಿ 24 ಗಂಟೆಯೊಳಗಾಗಿ ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸುವುದು.
8. ಪ್ರತಿ 15 ದಿನಗಳಿಗೊಮ್ಮೆ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು.ಜಂಟಿಯಾಗಿ ಬರ ಪರಿಹಾರ ಕಾಮಗಾರಿಗಳ ಬಗ್ಗೆ ಪತ್ರಿಕಾ ಗೋಷ್ಠಿ ನಡೆಸಿ ಮಾಧ್ಯಮಗಳಿಗೆ ಜಿಲ್ಲೆಯಲ್ಲಿ ಕೈಗೊಂಡಿರುವ ಕುಡಿಯುವ ನೀರು, ಜಾನುವಾರು ಸಂರಕ್ಷಣೆ, ಉದ್ಯೋಗ ಖಾತರಿ ಯೋಜನೆ ಮತ್ತು ಬರಪರಿಹಾರಕ್ಕೆ ಸಂಬಂಧಿಸಿದಂತೆ ಸಾಧಿಸಿರುವ ಪ್ರಗತಿಯ ಚಿತ್ರಣವನ್ನು ಬಿಂಬಿಸುವುದು. ಪತ್ರಿಕಾಗೋಷ್ಠಿಯಲ್ಲಿ ಸಿದ್ದಪಡಿಸಿದ ಟಿಪ್ಪಣಿಯನ್ನು ಇ-ಮೇಲ್ ಮುಖಾಂತರ ಸರ್ಕಾರಕ್ಕೆ ರವಾನಿಸುವುದು. ಇ-ಮೇಲ್ ವಿಳಾಸ secyrelief-rev@karnataka.gov.in.
9. ಪ್ರತಿ ಹೋಬಳಿಗೆ ಒಬ್ಬ ಜಿಲ್ಲಾ ಮಟ್ಟದ ನೋಡಲ್ ಅಧಿಕಾರಿಯನ್ನು ನೇಮಿಸಿ ಅವರ ಮೂಲಕ ಬರಪರಿಹಾರ ಕಾಮಗಾರಿಗಳು, ಜಾನುವಾರು ಸಂರಕ್ಷಣೆ ಮತ್ತು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನಿರ್ವಹಿಸಲಾಗುತ್ತಿರುವ ಕಾಮಗಾರಿಗಳನ್ನು ವ್ಯಪಕವಾಗಿ ಪರಿಶೀಲನೆ ಮಾಡುವುದು.
10. ಮುಂದಿನ 2 ತಿಂಗಳುಗಳ ಕಾಲ ಕುಡಿಯುವ ನೀರು/ಮೇವಿನ ಕೊರತೆ ಹಾಗೂ ಉದ್ಯೋಗಕ್ಕೆ ಕೊರತೆಯುಂಟಾಗದಂತೆ ಹಾಗೂ ಯವುದೇ ದೂರುಗಳು ಬರದಂತೆ ಕಾರ್ಯ ನಿರ್ವಹಿಸುವುದು.
11. ಪ್ರತಿಯೊಂದು ಕಾಮಗಾರಿಯ ಆರಂಭ, ಚಾಲ್ತಿಯಲ್ಲಿರುವ ಹಾಗೂ ಮುಕ್ತಾಯದ ಹಂತಗಳ ಛಾಯಾ ಚಿತ್ರಗಳನ್ನು ದಾಖಲಿಸಿ, ಮೂರನೇ ಹಂತದ ಪರಿವೀಕ್ಷಣೆಗೆ ಒಳಪಡಿಸಿ, ಅಂತಿಮ ಬಿಲ್ ಪಾವತಿ ಮಾಡುವುದು.
12. ಪೂರ್ಣಗೊಂಡ ಪ್ರತಿಯೊಂದು ಕಾಮಗಾರಿಯ ಛಾಯಾ ಚಿತ್ರಗಳು ಹಾಗೂ ವೆಚ್ಚದ ವಿವರಗಳನ್ನು ಇ-ಮೇಲ್ ಮುಖಾಂತರ secyrelief-rev@karnataka.gov.in. ಕಳುಹಿಸುವುದು.
13. ಪ್ರತಿಯೊಂದು ಕಾಮಗಾರಿಯ ವಿವರಗಳನ್ನು ಫಲಕದಲ್ಲಿ ಸಾರ್ವಜನಿಕರಿಗೆ ಕಾಣುವಂತೆ ಈ ಕೆಳಕಂಡ ಮಾದರಿಯಲ್ಲಿ ನಮೂದಿಸುವುದು.

**ಪ್ರಕೃತಿ ವಿಕೋಪ ಕಾಮಗಾರಿ**

| | |
|---|---|
| ಕಾಮಗಾರಿಯ ಹೆಸರು : | |
| ಅಂದಾಜು ಮೊತ್ತ : | |
| ಕಾಮಗಾರಿ ಪ್ರಾರಂಭಿಸಿದ ದಿನಾಂಕ: | |
| ಕಾಮಗಾರಿ ಮುಕ್ತಾಯವಾದ ದಿನಾಂಕ: | |
| ಅನುಷ್ಠಾನಗೊಳಿಸಿದ ಸಂಸ್ಥೆ : | |

14. ಪ್ರತಿ ತಿಂಗಳು ಅಂತ್ಯಕ್ಕೆ ಅನುದಾನ ಬಳಕೆಯಾದ ವಿವರಗಳನ್ನು ಮೇಲ್ಕಂಡ ಇ–ಮೇಲ್ ಮುಖಾಂತರ ಸಲ್ಲಿಸುವುದು. ಬಳಕೆ ಪ್ರಮಾಣ ಪತ್ರಗಳನ್ನೂ ಸಹ ತಪ್ಪದೇ ಸರ್ಕಾರಕ್ಕೆ ರವಾನಿಸುವುದು.

15) ಪ್ರತಿ ತಿಂಗಳು ಸಾಧಿಸಿದ ಪ್ರಗತಿಯನ್ನು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ಹಾಗೂ ಪ್ರಾದೇಶಿಕ ಆಯುಕ್ತರ ಗಮನಕ್ಕೆ ತರುವುದು ಮತ್ತು ಅವರಿಂದ ಸಲಹೆ–ಸೂಚನೆಗಳನ್ನು ಪಡೆಯುವುದು.

16) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ ಎನ್.ಡಿ.ಆರ್. ಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಸದರಿ ವೆಚ್ಚವನ್ನು ವಿಧಾನಸೌಧದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯಲ್ಲಿರುವ ಎಸ್.ಡಿ.ಆರ್.ಎಫ್ ಉಳಿಕೆ ಮೊತ್ತದಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 243 ವೆಚ್ಚ 7/2012, ದಿನಾಂಕ: 15–03–2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಎಂ. ಆನಂದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 1057

## ಕಂದಾಯ ಸಚಿವಾಲಯ

**ವಿಷಯ:** 2011–12ನೇ ಸಾಲಿನಲ್ಲಿ ರಾಜ್ಯದಲ್ಲಿ ಬೇಸಿಗೆ ಹಿನ್ನಲೆಯಲ್ಲಿ, ಕುಡಿಯುವ ನೀರು ಪೂರೈಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ. .–

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು

**ಪ್ರಸ್ತಾವನೆ:**

2011–12ನೇ ಸಾಲಿನಲ್ಲಿ ರಾಜ್ಯದಲ್ಲಿ ಬೇಸಿಗೆ ಇರುವುದರಿಂದ ಮುಂದಿನ ದಿನಗಳಲ್ಲಿ ಜನ, ಜಾನುವಾರುಗಳಿಗೆ ಕುಡಿಯುವ ನೀರಿನ ಸಮಸ್ಯೆ ಉಂಟಾಗದಂತೆ ಮುಂಜಾಗ್ರತ ಕ್ರಮಗಳನ್ನು ಕೈಗೊಳ್ಳಲು, ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿಗಳು ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ಕುಡಿಯುವ ನೀರಿನ ಪೂರೈಕೆಗಾಗಿ ರಾಜ್ಯ ವಿಪತ್ತು, ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 83 ಟಿಎನ್ಆರ್ 2012, ಬೆಂಗಳೂರು, ದಿನಾಂಕ 26–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೇಸಿಗೆಯಲ್ಲಿ, ಜನ, ಜಾನುವಾರುಗಳಿಗೆ ಕುಡಿಯುವ ನೀರಿನ ಸಮಸ್ಯೆ ಉಂಟಾಗದಂತೆ, ಮುಂಜಾಗ್ರತ ಕ್ರಮ ಕೈಗೊಳ್ಳಲು, ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆ | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ದಕ್ಷಿಣ ಕನ್ನಡ | 200.00 |
| 2 | ಉಡುಪಿ | 100.00 |
| 3 | ಬೆಂಗಳೂರು ನಗರ | 200.00 |
| | ಒಟ್ಟು | 500.00 |
| | | (ರೂಪಾಯಿ ಐದುನೂರು ಲಕ್ಷಗಳು ಮಾತ್ರ) |

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಸಮಾಲೋಚಿಸಿ ಈ ಕೆಳಕಂಡಂತೆ ನಿರ್ದೇಶನಗಳಿಗೆ ಒಳಪಟ್ಟು ಅನುದಾನವನ್ನು ಬಳಸುವುದು.

ಅ) ಕುಡಿಯುವ ನೀರಿನ ವ್ಯವಸ್ಥೆ

ಆ) ಜಾನುವಾರುಗಳ ಸಂರಕ್ಷಣೆ

2) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು
3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್./ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಸದರಿ ವೆಚ್ಚವನ್ನು ವಿದಾನಸೌಧದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯಲ್ಲಿರುವ ಎಸ್.ಡಿ.ಆರ್.ಎಫ್. ಉಳಿಕೆ ಮೊತ್ತದಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆ.ಇ 243 ವೆಚ್ಚ–7/2012, ದಿನಾಂಕ 15–03–2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಎಂ. ಆನಂದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 1058

## ಕಂದಾಯ ಸಚಿವಾಲಯ

**ಸೇರ್ಪಡೆ**

ಸಂಖ್ಯೆ: ಆರ್‌ಡಿ 32 ಎಡಿಇ 2009, ಬೆಂಗಳೂರು, ದಿನಾಂಕ 22–03–2012

ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಎಡಿಇ 2009, ದಿನಾಂಕ 26–10–2011ರ ಪುಟ–2ರಲ್ಲಿರುವ ಆದೇಶ ಭಾಗದ ನಂತರ ಈ ಕೆಳಕಂಡ ಸಾಲುಗಳನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಶ್ರೀ ಕೆ. ಎಸ್. ಪ್ರಹ್ಲಾದ್‌ರಾವ್ ಇವರು ದಿನಾಂಕ 04–10–2009 ರಿಂದ 22–02–2010 ರವರೆಗೆ ನಿಲಂಬನೆಯಲ್ಲಿ ಕಳೆದಿರುವ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 100(1)(ಬಿ) ರನ್ವಯ ಕರ್ತವ್ಯದ ಅವಧಿಯೆಂದು ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1059

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಎಸ್‌ಜಿಎಸ್‌ವೈಯಡಿ 2011–12ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ರಾಜ್ಯದ 6 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ–

**ಓದಲಾಗಿದೆ:**
1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ20011/01/2011, ಎಸ್‌ಜಿಎಸ್‌ವೈ–I, ದಿನಾಂಕ 11–04–2011.
2) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ20011/01/2011, ಎಸ್‌ಜಿಎಸ್‌ವೈ–I (9) ದಿನಾಂಕ 15–04–2011, (38) ದಿನಾಂಕ 15–04–2011 ಮತ್ತು (67) ದಿನಾಂಕ 15–04–2011.
3) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ 03–05–2011.
4) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ 21–06–2011, 22–11–2011, 03–02–2012, 03–03–2012 ಮತ್ತು 17–03–2012.
5) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/11/2010, ಎಸ್‌ಜಿಎಸ್‌ವೈ–1 (105) ದಿನಾಂಕ 15–09–2011.
6) ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ ಇವರ ಪತ್ರ ಸಂಖ್ಯೆ: ಆಇ 02 ಬಿಎಸ್‌ಜಿ 2011, ದಿನಾಂಕ 04–01–2012.
7) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/3/2011–ಎಸ್‌ಜಿಎಸ್‌ವೈ–I (205) ದಿನಾಂಕ 20–01–2012 (ಮೂರು ಪತ್ರಗಳು) ಮತ್ತು (213) ದಿನಾಂಕ 27–01–2012 (ಮೂರು ಪತ್ರಗಳು).
8) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/2/2011–ಎಸ್‌ಜಿಎಸ್‌ವೈ–I (219) ದಿನಾಂಕ 08–02–2012 (ಮೂರು ಪತ್ರಗಳು).
9) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/5/2011–ಎಸ್‌ಜಿಎಸ್‌ವೈ–I (230) ದಿನಾಂಕ 22–02–2012 (ಮೂರು ಪತ್ರಗಳು)
10) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/4/2011, ಎಸ್‌ಜಿಎಸ್‌ವೈ–1 (239) ದಿನಾಂಕ 24–02–2012 (ಮೂರು ಪತ್ರಗಳು)
11) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/6/2011–ಎಸ್‌ಜಿಎಸ್‌ವೈ–I (247) ದಿನಾಂಕ 01–03–2012 (ಮೂರು ಪತ್ರಗಳು)

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆ ಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75:25ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (2) ಮತ್ತು (5)ರ ಪತ್ರಗಳಲ್ಲಿ ಎಸ್‌ಜಿಎಸ್‌ವೈ ಯಡಿ 2011–12ನೇ ಸಾಲಿಗೆ 30 ಜಿಲ್ಲೆಗಳಿಗೆ ಒಂದನೇ ಕಂತಿನ ಅನುದಾನ ಒಟ್ಟು ₹43,31,50,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ಓದಲಾಗಿದೆ (4)ರ ಆದೇಶಗಳಲ್ಲಿ ರಾಜ್ಯ ಸರ್ಕಾರ ತನ್ನ ಪಾಲಿನ ಒಂದನೇ ಕಂತಿನ ಅನುದಾನ ₹14,43,83,000 ಗಳನ್ನು ಬಿಡುಗಡೆ ಮಾಡಿದೆ.

ಎಸ್‌ಜಿಎಸ್‌ವೈ ಯಡಿ ಕೇಂದ್ರ ಸರ್ಕಾರ 2011–12ನೇ ಸಾಲಿನಲ್ಲಿ ಓದಲಾಗಿದೆ (7), (8) ಮತ್ತು (9)ರ ಪತ್ರಗಳಲ್ಲಿ ಬಾಗಲಕೋಟೆ, ಬೆಂಗಳೂರು ಗ್ರಾಮಾಂತರ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಹಾವೇರಿ, ಉತ್ತರ ಕನ್ನಡ, ದಾವಣಗೆರೆ, ತುಮಕೂರು, ಬೆಳಗಾಂ, ಬಿಜಾಪುರ, ಗದಗ್, ಕೊಪ್ಪಳ ಮತ್ತು ರಾಯಚೂರು ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ₹15,23,65,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಎರಡನೇ ಕಂತಿನ ಅನುದಾನ ₹5,07,86,000 ಗಳನ್ನು ಬಿಡುಗಡೆ ಮಾಡಬೇಕಿತ್ತು. ಆದರೆ 2011–12ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿನ ಜಿಲ್ಲೆಗಳ ಲಭ್ಯತೆಗನುಸಾರ ₹4,99,09,000 ಗಳನ್ನು ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾಗಿ 13 ಜಿಲ್ಲಾ ಪಂಚಾಯತಿಗಳಿಗೆ ಈಗಾಗಲೇ ಬಿಡುಗಡೆಗೊಳಿಸಲಾಗಿದೆ.

ಕೇಂದ್ರ ಸರ್ಕಾರ ಓದಾಲಾಗಿದೆ (10)ರ ಪತ್ರಗಳಲ್ಲಿ ಧಾರವಾಡ, ರಾಮನಗರ ಮತ್ತು ಶಿವಮೊಗ್ಗ ಜಿಲ್ಲಾ ಪಂಚಾಯತಿಗಳಿಗೆ ಓದಲಾಗಿದೆ (11)ರ ಪತ್ರಗಳಲ್ಲಿ ಚಿಕ್ಕಬಳ್ಳಾಪುರ, ಮೈಸೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟಾರೆ ₹5,21,85,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಎರಡನೇ ಕಂತಿ ಅನುದಾನವಾಗಿ ₹1,73,95,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಅದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ 27–03–2012**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2011–12ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನ ₹1,73,95,000 ಗಳನ್ನು (ಒಂದು ಕೋಟಿ ಎಪ್ಪತ್ತಮೂರು ಲಕ್ಷದ ತೊಂಬತ್ತೈದು ಸಾವಿರ ರೂ. ಮಾತ್ರ) ಗಳನ್ನು ಕೆಳಕಂಡ ಆರು ಜಿಲ್ಲಾ ಪಂಚಾಯತಿಗಳಿಗೆ ಮಂಜೂರಾತಿ ನೀಡಿ ಷರತ್ತುಗಳೊಂದಿಗೆ ಬಿಡುಗಡೆ ಮಾಡಿದೆ.

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2011–12ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಧಾರವಾಡ | 415 | 2500ZZ8798 | 86,11,000 | 28,70,000 |
| 2 | ರಾಮನಗರ | 452 | 0400ZZ0001 | 57,55,000 | 19,18,000 |
| 3 | ಶಿವಮೊಗ್ಗ | 405 | 1400ZZ0002 | 1,72,02,000 | 57,34,000 |
| 4 | ಚಿಕ್ಕಬಳ್ಳಾಪುರ | 453 | 0600ZZ0001 | 57,47,000 | 19,16,000 |
| 5 | ಮೈಸೂರು | 407 | 0900ZZ0001 | 86,96,000 | 28,99,000 |
| 6 | ಯಾದಗಿರಿ | 421 | 3300ZZ0001 | 61,74,000 | 20,58,000 |
| | | | ಒಟ್ಟು | 5,21,85,000 | 1,73,95,000 |

**ಷರತ್ತುಗಳು:–**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಅದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01 ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2011–2012ನೇ ಲಿಂಕ್ ಕೋಡ್ 2501–01–198–6–01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501–01–101–0–13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ–6)ಯ ಸಂಖ್ಯೆ ಆಇ 172 ವೆಚ್ಚ–6/2011, ದಿನಾಂಕ 30–03–2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007, ದಿನಾಂಕ 18–04–2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಅನುದಾನದ ಅಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2011–12ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ–ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಗ್ರಾಮೂಸೌ–2) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 8 ಪಿಬಿಎಸ್ 2011–12, ದಿನಾಂಕ 27–03–2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ದೀಪ**
ನಿರ್ದೇಶಕರು (ಗ್ರಾಮೂಸೌ–2) ಹಾಗೂ
ಪ. ನಿ. ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1060

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಎಸ್‌ಜಿಎಸ್‌ವೈಯಡಿ 2011–12ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ರಾಜ್ಯದ 6 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ–

**ಓದಲಾಗಿದೆ:**
1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/01/2011, ಎಸ್‌ಜಿಎಸ್‌ವೈ–I, ದಿನಾಂಕ 11–04–2011.
2) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/01/2011, ಎಸ್‌ಜಿಎಸ್‌ವೈ– I (9) ದಿನಾಂಕ 15–04–2011, (38) ದಿನಾಂಕ 15–04–2011 ಮತ್ತು (67) ದಿನಾಂಕ 15–04–2011.
3) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ 03–05–2011.
4) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ 21–06–2011, 22–11–2011, 03–02–2012, 03–03–2012 ಮತ್ತು 17–03–2012 ಮತ್ತು 27–03–2012.
5) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/11/2010, ಎಸ್‌ಜಿಎಸ್‌ವೈ– I (105) ದಿನಾಂಕ 15–09–2011.
6) ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ ಇವರ ಪತ್ರ ಸಂಖ್ಯೆ: ಆಇ 02 ಬಿಎಸ್‌ಜಿ 2011, ದಿನಾಂಕ 04–01–2012.
7) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/3/2011–ಎಸ್‌ಜಿಎಸ್‌ವೈ– I (205) ದಿನಾಂಕ 20–01–2012 (ಮೂರು ಪತ್ರಗಳು) ಮತ್ತು (213) ದಿನಾಂಕ 27–01–2012 (ಮೂರು ಪತ್ರಗಳು).
8) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/2/2011–ಎಸ್‌ಜಿಎಸ್‌ವೈ– I, (219) ದಿನಾಂಕ 08–02–2012 (ಮೂರು ಪತ್ರಗಳು).
9) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/5/2011–ಎಸ್‌ಜಿಎಸ್‌ವೈ– I (230) ದಿನಾಂಕ 22–02–2012 (ಮೂರು ಪತ್ರಗಳು)
10) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/4/2011, ಎಸ್‌ಜಿಎಸ್‌ವೈ–I (239) ದಿನಾಂಕ 24–02–2012 (ಮೂರು ಪತ್ರಗಳು)
11) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/6/2011–ಎಸ್‌ಜಿಎಸ್‌ವೈ– I, (247) ದಿನಾಂಕ 01–03–2012 (ಮೂರು ಪತ್ರಗಳು)
12) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/7/2011–ಎಸ್‌ಜಿಎಸ್‌ವೈ–I (255) ದಿನಾಂಕ 16–03–2012 (ಮೂರು ಪತ್ರಗಳು)
13) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/2/2011–ಎಸ್‌ಜಿಎಸ್‌ವೈ–I (270) ಮತ್ತು (271) ದಿನಾಂಕ 27–03–2012 (ಮೂರು ಪತ್ರಗಳು)

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆ ಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75:25ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಸರ್ಕಾರದ

ಗ್ರಾಮೀಣಾಬಿವೃದ್ಧಿ ಮಂತ್ರಾಲಯವು ಓದಲಾಗಿದೆ (2) ಮತ್ತು (5)ರ ಪತ್ರಗಳಲ್ಲಿ ಎಸ್‌ಜಿಎಸ್‌ವೈ ಯಡಿ 2011-12ನೇ ಸಾಲಿಗೆ 30 ಜಿಲ್ಲೆಗಳಿಗೆ ಒಂದನೇ ಕಂತಿನ ಅನುದಾನ ಒಟ್ಟು ₹43,31,50,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ಓದಲಾಗಿದೆ (4)ರ ಆದೇಶಗಳಲ್ಲಿ ರಾಜ್ಯ ಸರ್ಕಾರ ತನ್ನ ಪಾಲಿನ ಒಂದನೇ ಕಂತಿನ ಅನುದಾನ ₹14,43,83,000 ಗಳನ್ನು ಬಿಡುಗಡೆ ಮಾಡಿದೆ.

ಎಸ್‌ಜಿಎಸ್‌ವೈ ಯಡಿ ಕೇಂದ್ರ ಸರ್ಕಾರ 2011-12ನೇ ಸಾಲಿನಲ್ಲಿ ಓದಲಾಗಿದೆ (7)(8)(9)(10) ಮತ್ತು (11)ರ ಪತ್ರಗಳಲ್ಲಿ ರಾಜ್ಯದ 19 ಜಿಲ್ಲಾ ಪಂಚಾಯತಿಗಳಿಗೆ (ಬಾಗಲಕೋಟೆ, ಬೆಂಗಳೂರು ಗ್ರಾಮಾಂತರ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಹಾವೇರಿ, ಉತ್ತರ ಕನ್ನಡ, ದಾವಣಗೆರೆ, ತುಮಕೂರು, ಬೆಳಗಾಂ, ಬಿಜಾಪುರ, ಗದಗ್, ಕೊಪ್ಪಳ, ರಾಯಚೂರು ಧಾರವಾಡ, ರಾಮನಗರ, ಶಿವಮೊಗ್ಗ, ಚಿಕ್ಕಬಳ್ಳಾಪುರ, ಮೈಸೂರು ಮತ್ತು ಯಾದಗಿರಿ) ಎರಡನೇ ಕಂತಿನ ಅನುದಾನವಾಗಿ ₹20,45,50,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಎರಡನೇ ಕಂತಿನ ಅನುದಾನ ₹6,81,83,000 ಗಳನ್ನು ಬಿಡುಗಡೆ ಮಾಡಬೇಕಿತ್ತು. ಆದರೆ 2011-12ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿನ ಜಿಲ್ಲೆಗಳ ಲಭ್ಯತೆಗನುಸಾರ ₹6,72,10,000 ಗಳನ್ನು ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾಗಿ 19 ಜಿಲ್ಲಾ ಪಂಚಾಯತಿಗಳಿಗೆ ಈಗಾಗಲೇ ಬಿಡುಗಡೆಗೊಳಿಸಲಾಗಿದೆ.

ಕೇಂದ್ರ ಸರ್ಕಾರ ಓದಲಾಗಿದೆ (12)ರ ಪತ್ರಗಳಲ್ಲಿ ಹಾಸನ ಜಿಲ್ಲಾ ಪಂಚಾಯತಿಗಳಿಗೆ ಓದಲಾಗಿದೆ (13)ರ ಪತ್ರಗಳಲ್ಲಿ ಬೆಂಗಳೂರು ನಗರ, ಬಳ್ಳಾರಿ, ಬೀದರ್, ಚಾಮರಾಜನಗರ ಮತ್ತು ಚಿತ್ರದುರ್ಗ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟಾರೆ ₹3,98,02,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾಗಿ ₹1,32,68,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಅದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜಿವೈ 2011, ಬೆಂಗಳೂರು, ದಿನಾಂಕ 29-03-2012**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2011-12ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನ ₹1,32,68,000 ಗಳನ್ನು (ಒಂದು ಕೋಟಿ ಮುವತ್ತೆರಡು ಲಕ್ಷದ ಅರವತ್ತೆಂಟು ಸಾವಿರ ರೂ.ಮಾತ್ರ) ಗಳನ್ನು ಕೆಳಕಂಡ ಆರು ಜಿಲ್ಲಾ ಪಂಚಾಯತಿಗಳಿಗೆ ಮಂಜೂರಾತಿ ನೀಡಿ ಷರತ್ತುಗಳೊಂದಿಗೆ ಬಿಡುಗಡೆ ಮಾಡಿದೆ.

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2011-12ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಬೆಂಗಳೂರು ನಗರ | 401 | 0100ZZ8001 | 26,11,000 | 8,70,000 |
| 2 | ಬಳ್ಳಾರಿ | 418 | 3400ZZ0001 | 74,53,000 | 24,84,000 |
| 3 | ಬೀದರ್ | 419 | 3800ZZ5701 | 30,19,000 | 10,06,000 |
| 4 | ಚಾಮರಾಜನಗರ | 456 | 1000ZZ0001 | 84,81,000 | 28,27,000 |
| 5 | ಚಿತ್ರದುರ್ಗ | 403 | 1600ZZ0001 | 1,07,54,000 | 35,85,000 |
| 6 | ಹಾಸನ | 410 | 1300ZZ0003 | 74,87,000 | 24,96,000 |
| | | | ಒಟ್ಟು | 3,98,02,000 | 1,32,68,000 |

**ಷರತ್ತುಗಳು:-**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಅದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ-6 ಗ್ರಾಮ ಪಂಚಾಯತ್‌ಗಳು-01 ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2011-2012ನೇ ಲಿಂಕ್ ಕೋಡ್ 2501-01-198-6-01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501-01-101-0-13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14-07-2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ-6)ಯ ಸಂಖ್ಯೆ ಆಇ 172 ವೆಚ್ಚ-6/2011, ದಿನಾಂಕ 30-03-2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007, ದಿನಾಂಕ 18-04-2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಅನುದಾನದ ಅಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2011-12ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ-ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಗ್ರಾಮೂಸೌ-2) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 8 ಪಿಬಿಎಸ್ 2011-12, ದಿನಾಂಕ 29-03-2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ-2) ಹಾಗೂ

ಪ. ನಿ. ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. 1061 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ ಮಹಿಳಾ ಕಿಸಾನ್ ಸಶಕ್ತೀಕರಣ ಪರಿಯೋಜನೆ (MKSP) ಯನ್ನು ಮೆ॥ ಗ್ರೀನ್ ಫೌಂಡೇಷನ್ ಸಂಸ್ಥೆಯ ಮುಖಾಂತರ ಅನುಷ್ಠಾನಗೊಳಿಸುವ ಬಗ್ಗೆ ರಾಜ್ಯದ ಅನುದಾನ ಬಿಡುಗಡೆ ಕುರಿತು.-

**ಓದಲಾಗಿದೆ:** 1)ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಇಲಾಖೆಯ ಪತ್ರದ ಸಂಖ್ಯೆ: K-11034/81/2011/MKSP/PAC ದಿನಾಂಕ 27-06-2011.

2) ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಇಲಾಖೆಯ ಪತ್ರದ ಸಂಖ್ಯೆ: K-110-11/37/2011/MKSP/KPK ದಿನಾಂಕ 28-09-2011.

3) ಸರ್ಕಾರದ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 380 ವೆಚ್ಚ 6/2011, ದಿನಾಂಕ 05-03-2012.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಇತ್ತೀಚೆಗೆ ಜಾರಿಗೊಳಿಸಿರುವ ಮಹಿಳಾ ಕಿಸಾನ್ ಸಶಕ್ತೀಕರಣ ಪರಿಯೋಜನೆಯು (MKSP) ಗ್ರಾಮೀಣಾ ಪ್ರದೇಶದ ಕಡು ಬಡವರಾದ ಮಹಿಳೆಯರಿಗೆ ಕೃಷಿಯಲ್ಲಿ ತರಬೇತಿ ನೀಡಿ, ಅವರನ್ನು ಆರ್ಥಿಕವಾಗಿ ಸಬಲೀಕರಣಗೊಳಿಸುವುದೆ ಈ ಯೋಜನೆಯ ಮುಖ್ಯ ಉದ್ದೇಶ. ಸದರಿ ಯೋಜನೆಯನ್ನು ಮೆ॥ ಗ್ರೀನ್ ಫೌಂಡೇಶನ್ ಸಂಸ್ಥೆ ಮ್ಯಾನೇಜಿಂಗ್ ಟ್ರಸ್ಟಿ, BTM, 2ನೇ ಹಂತ, ಬೆಂಗಳೂರು-560076 ರವರು ರಾಮನಗರ ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಮುಂದೆ ಬಂದಿದ್ದು, ಇದಕ್ಕೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಓದಲಾಗಿದೆ (1)ರಲ್ಲಿ ಅನುಮತಿ ನೀಡಲಾಗಿದೆ.

ಈ ಯೋಜನೆಯು ರೂ. 6,25,00,000/-ಗಳಾಗಿದ್ದು, ಮಾರ್ಗಸೂಚಿಯನ್ವಯ ಕೇಂದ್ರ ಸರ್ಕಾರ/ರಾಜ್ಯ ಸರ್ಕಾರಗಳು ಶೇ: 75:25ರ ಅನುಪಾತದಲ್ಲಿ ಭರಿಸುವುದು. ಇದರಂತೆ ಕೇಂದ್ರ ಸರ್ಕಾರವು ರೂ. 4,69,00,000/-ಗಳನ್ನು ಹಾಗೂ ರಾಜ್ಯ ಸರ್ಕಾರವು ರೂ. 1,56,00,000/-ಗಳನ್ನು ಭರಿಸಬೇಕಾಗಿದೆ. ಕೇಂದ್ರ ಸರ್ಕಾರವು ತನ್ನ ಪಾಲಿನ ಅನುದಾನವನ್ನು 25:50:25 ರಂತೆ 3 ಕಂತುಗಳಲ್ಲಿ ನೀಡುವುದು. ಕೇಂದ್ರ ಸರ್ಕಾರವು ಓದಲಾಗಿದೆ (2)ರಲ್ಲಿ ಮೊದಲನೇ ಕಂತಿನ ಶೇ. 25ರ ಅನುದಾನ ರೂ. 1,17,00,000/-ಗಳನ್ನು NIRD ಹೈದರಾಬಾದ್ ಮುಖಾಂತರ ರಾಮನಗರ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಿರುತ್ತದೆ. ಓದಲಾಗಿದೆ (3)ರಲ್ಲಿ ರಾಜ್ಯದ ಪಾಲಿನ ಶೇಕಡ 25ರ ಅನುದಾನ ರೂ. 39,00,000/-ಗಳನ್ನು (ಮೂವತ್ತೊಂಬತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಹೆಚ್ಚುವರಿ ಅನುದಾನ ಒದಗಿಸಿದೆ. ಇದರಂತೆ ರೂ. 39,00,000/-ಗಳನ್ನು ರಾಮನಗರ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಲು ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 03 ಎಸ್‌ಜಿವೈ (SPL) 2011, ಬೆಂಗಳೂರು, ದಿನಾಂಕ 29-03-2012**

ಮೆ॥ ಗ್ರೀನ್ ಫೌಂಡೇಷನ್ ಮ್ಯಾನೇಜಿಂಗ್ ಟ್ರಸ್ಟಿ, BTM, 2ನೇ ಹಂತ, ಬೆಂಗಳೂರು-560076 ಸಂಸ್ಥೆಗೆ ರಾಮನಗರ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಮಹಿಳಾ ಕಿಸಾನ್ ಸಶಕ್ತಿಕರಣ ಪರಿಯೋಜನೆಯನ್ನು (MKSP) ಅನುಷ್ಠಾನಗೊಳಿಸಲು ರೂ. 39,00,000/-ಗಳನ್ನು (ಮೂವತ್ತೊಂಬತ್ತು ಲಕ್ಷಗಳು ಮಾತ್ರ) ಗಳನ್ನು ರಾಮನಗರ ಜಿಲ್ಲಾ ಪಂಚಾಯಿತಿಗೆ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿಲ್ಲಾ ಪಂ. ಕೋಡ್ | ಡಿ.ಡಿ.ಓ. ಕೋಡ್ | (MKSP) ಯೋಜನೆಗೆ ಮಂಜೂರಾದ ಅನುದಾನ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ ಕಂತಿನ ಅನುದಾನ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ರಾಮನಗರ | 452 | 0400ZZ0001 | 6,25,00,000 | 1,17,00,000 | 39,00,000 | – |

**ಷರತ್ತುಗಳು:–**

ಮೇಲ್ಕಂಡ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣ ಅಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮ, 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತಿಗಳಿಗೆ ಸಹಾಯ–6 ಗ್ರಾಮ ಪಂಚಾಯತಿಗಳು–01 ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜಗಾರ್ ಯೋಜನೆ) 2011–2012ನೇ ಲಿಂಕ್ ಕೋಡ್ 2501–01–198–6–01 (ಹೊಸ ಜಿಲ್ಲಾ ಪಂಚಾಯತ್ ಕೋಡ್ 2501–01–101–0–13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ: FD/07/ZPA/2003, ದಿನಾಂಕ 14–07–2005ರ ಸೂಚನೆಗಳನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡದೆ, ಸ್ವೀಕೃತ ರಸೀದಿ (Payees Receipt) ಮೂಲಕ ಪಡೆದು ಎಸ್‌ಜಿವೈ ಖಾತೆಗೆ ಜಮೆ ಮಾಡಿಕೊಂಡು ಚೆಕ್ ಮೂಲಕ ಸಂಬಂಧಪಟ್ಟ ಸಂಸ್ಥೆಗೆ ಬಿಡುಗಡೆ ಮಾಡತಕ್ಕದ್ದು ಮತ್ತು ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ರಾಮನಗರ ರವರಿಗೆ ಸದರಿ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯಾ ಅಧಿಕಾರ ನೀಡಲಾಗಿದೆ.

- ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಈ ಯೋಜನೆಗೆ ಮಂಜೂರಾತಿ ನೀಡುವಾಗ ನಿರ್ಬಂಧಿಸಿದ ಎಲ್ಲಾ ಷರತ್ತುಗಳನ್ನು ತಪ್ಪದೇ ಪಾಲಿಸುವುದು.
- ಸದರಿ ವೆಚ್ಚವನ್ನು ಪ್ರತ್ಯೇಕ ಬ್ಯಾಂಕ್ ಖಾತೆ ತೆರೆದು ಲೆಕ್ಕ ಪತ್ರ ನಿರ್ವಹಿಸತಕ್ಕದ್ದು. ಈ ಯೋಜನೆಗೆ ಮಂಜೂರಾದ ಅನುದಾನವನ್ನು ಸ್ಥಿರ ಠೇವಣಿ (Fixed deposit) ಯಲ್ಲಿ ನಿರ್ವಹಿಸಬಾರದು. ಇದರ ಬಡ್ಡಿ ಹಣವನ್ನು ಸಹ ಈ ಯೋಜನೆಯ ಉದ್ದೇಶಕ್ಕಾಗಿಯೇ ಬಳಸತಕ್ಕದು.
- ಸದರಿ ಯೋಜನೆಗೆ ಮಂಜೂರಾಗಿ ಬಿಡುಗಡೆಯಾದ ಅನುದಾನವನ್ನು ಬೇರೆ ಯಾವುದೇ ಉದ್ದೇಶಗಳಿಗೆ ಬಳಸದೆ ಮಂಜೂರಾದ ಉದ್ದೇಶಕ್ಕೆ ಮಾತ್ರ ಬಳಸತಕ್ಕದ್ದು.
- ಸದರಿ ಯೋಜನೆ ಮಂಜೂರಾದ ದಿನಾಂಕದಿಂದ 36 ತಿಂಗಳ ಅವಧಿಗೆ ಸೀಮಿತವಾಗಿರುತ್ತದೆ
- ಸದರಿ ಯೋಜನೆಯ ಅನುಷ್ಠಾನ ಪ್ರದೇಶ ಹಾಗೂ ಫಲಾನುಭವಿಗಳ ಸಾಕ್ಷ್ಯಚಿತ್ರ, ಯೋಜನಾ ಅನುಷ್ಠಾನದ ಮೊದಲು ಹಾಗೂ ಅನುಷ್ಠಾನದ ನಂತರದ ವಸ್ತುಸ್ಥಿತಿ ಬಗ್ಗೆ ವಿಡಿಯೋ ಚಿತ್ರೀಕರಣ ಪಡೆಯತಕ್ಕದ್ದು.
- ಸದರಿ ಯೋಜನೆಯ ಅನುಷ್ಠಾನದ ಬಗ್ಗೆ ವೆಚ್ಚ ಏರಿಕೆಯಾದಲ್ಲಿ ಯೋಜನಾ ಅನುಷ್ಠಾನ ಸಂಸ್ಥೆ/ಸಂಘಟಿತ ಸಂಸ್ಥೆ (Co-ordinating Agency), ಭರಿಸತಕ್ಕದು.
- ಪ್ರತಿ ತ್ರೈಮಾಸಿಕ ಅವಧಿ ಪೂರ್ಣಗೊಂಡ ನಂತರದ ಮಾಹೆಯ 15ನೇ ತಾರೀಖಿನೊಳಗಾಗಿ ಭೌತಿಕ ಮತ್ತು ಆರ್ಥಿಕ ಪ್ರಗತಿಯನ್ನು ಕೇಂದ್ರ ಸರ್ಕಾರವು ನೀಡಿರುವ ನಮೂನೆಯಲ್ಲಿ (Annexure-1) ರಲ್ಲಿ ಕೇಂದ್ರ ಸರ್ಕಾರಕ್ಕೆ ಹಾಗೂ ರಾಜ್ಯ ಸರ್ಕಾರಕ್ಕೆ ಯೋಜನಾ ಅನುಷ್ಠಾನಾಧಿಕಾರಿಯಿಂದ ಪಡೆದು ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಕೇಂದ್ರ ಪಾಲಿನ ಅನುದಾನವನ್ನು ಯೋಜನಾ ಅನುಷ್ಠಾನ ಅಧಿಕಾರಿಯಿಂದ ಪಡೆದು ಹಿಂತಿರುಗಿಸಬೇಕಾಗಿರುತ್ತದೆ.
- ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯು ಮಾಡುವುದು.
- ಸಂಬಂಧಿಸಿದ ಮುಖ್ಯ ಲೆಕ್ಕಾಧಿಕಾರಿಗಳು ಲೆಕ್ಕಪರಿಶೋಧನಾ ವರದಿ, ಹಣ ಉಪಯೋಗ ಪ್ರಮಾಣ ಪತ್ರವನ್ನು ಮತ್ತು ವೆಚ್ಚ ಮಾಡಿದ ವಿವರಗಳನ್ನು ನಿರ್ದೇಶಕರು, ಗ್ರಾಮೂಸೌ–2 ಕಾರ್ಯಕ್ರಮಗಳು ಇವರಿಗೆ ಸಲ್ಲಿಸುವುದು.
- ಮಹಿಳಾ ಕಿಸಾನ್ ಸಶಕ್ತೀಕರಣ ಪರಿಯೋಜನೆ (MKSP) ಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಿಡುಗಡೆ ಮಾಡಲಾದ ಅನುದಾನದ ಮೊದಲನೇ ಕಂತಿನ ಅನುದಾನವನ್ನು ಶೇಕಡ 60 ರಷ್ಟು ವೆಚ್ಚ ಮಾಡಿದ ನಂತರ ಉಪಯೋಗ ಪ್ರಮಾಣ ಪತ್ರದೊಂದಿಗೆ ಎರಡನೇ ಕಂತಿನ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸುವುದು.
- ಎರಡನೇ ಕಂತಿನ ಅನುದಾನಕ್ಕೆ ಪ್ರಸ್ತಾವನೆ ಸಲಿಸುವ ಮುನ್ನ ಹಣ ಬಳಕೆ ಮಾಡಿದ ಬಗ್ಗೆ ಬಳಕೆ ಪ್ರಮಾಣ ಪತ್ರ ಹಾಗೂ ವರ್ಷವಾರು ಆಡಿಟ್ ವರದಿ ವಿವರವಾದ ವೆಚ್ಚದ ತಃಖ್ತೆ ಮತ್ತು ಅನುಮೋದಿತ ಯೋಜನೆಯಂತೆ ಯೋಜನೆ ಅನುಷ್ಠಾನಗೊಳಿಸುತ್ತಿರುವ ಬಗ್ಗೆ designated agency ಯಿಂದ ಪ್ರಮಾಣ ಪತ್ರ ಪಡೆದು, ಧೃಢೀಕರಿಸಿ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖೆ: ಗ್ರಾಅಪ/08/PBS/2011, ದಿನಾಂಕ 29–03–2012ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ–2) ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1062

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಎಸ್‌ಜಿಎಸ್‌ವೈಯಡಿ 2011-12ನೇ ಸಾಲಿನ ರಾಜ್ಯದ ಪಾಲಿನ ಉಳಿಕೆ ಎರಡನೇ ಕಂತಿನ ಅನುದಾನವನ್ನು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1)ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/01/2011 ಎಸ್‌ಜಿಎಸ್‌ವೈ-I, ದಿನಾಂಕ 11-04-2011.

2) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/01/2011 ಎಸ್‌ಜಿಎಸ್‌ವೈ-I (9) ದಿನಾಂಕ 15-04-2011. (38) ದಿನಾಂಕ 15-04-2011 ಮತ್ತು (67) ದಿನಾಂಕ 15-04-2011.

3) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ 03-05-2011.

4) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ 21-06-2011, 22-11-2011, 03-02-2012, 17-03-2012 ಮತ್ತು 27-03-2012.

5) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 12022/11/2010-ಎಸ್‌ಜಿಎಸ್‌ವೈ-I (105) ದಿನಾಂಕ 15-09-2011.

6) ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ ಇವರ ಪತ್ರ ಸಂಖ್ಯೆ: ಆಇ 02 ಬಿಎಸ್‌ಜಿ 2011, ದಿನಾಂಕ 04-01-2012.

7) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/3/2011-ಎಸ್‌ಜಿಎಸ್‌ವೈ-I (205) ದಿನಾಂಕ 20-01-2012 (ಮೂರು ಪತ್ರಗಳು) ಮತ್ತು (213) ದಿನಾಂಕ 27-01-2012 (ಮೂರು ಪತ್ರಗಳು)

8) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 380 ವೆಚ್ಚ 6/2011, ದಿನಾಂಕ 05-03-2012

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75:25ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (2) ಮತ್ತು (5) ರ ಪತ್ರಗಳಲ್ಲಿ ಎಸ್‌ಜಿಎಸ್‌ವೈ ಯಡಿ 2011-12ನೇ ಸಾಲಿಗೆ 30 ಜಿಲ್ಲೆಗಳಿಗೆ ಒಂದನೇ ಕಂತಿನ ಅನುದಾನ ಒಟ್ಟು ₹43,31,50,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗಣವಾಗಿ ಓದಲಾಗಿದೆ (4)ರ ಆದೇಶಗಳಲ್ಲಿ ರಾಜ್ಯ ಸರ್ಕಾರ ತನ್ನ ಪಾಲಿನ ಒಂದನೇ ಕಂತಿನ ಅನುದಾನ ₹14,43,83,000 ಗಳನ್ನು ಬಿಡುಗಡೆ ಮಾಡಿದೆ.

ಎಸ್‌ಜಿಎಸ್‌ವೈ ಯಡಿ ಕೇಂದ್ರ ಸರ್ಕಾರ 2011-12ನೇ ಸಾಲಿನಲ್ಲಿ ರಾಜ್ಯದ 19 ಜಿಲ್ಲೆಗಳಿಗೆ ₹20,45,50,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ₹6,81,83,000 ಗಳನ್ನು ಬಿಡುಗಡೆ ಮಾಡಬೇಕಿತ್ತು. ಆದರೆ ರಾಜ್ಯದ ಆಯವ್ಯಯದಲ್ಲಿನ ಲಭ್ಯತೆಗನುಸಾರ ₹6,73,04,000 ಗಳನ್ನು ಬಿಡುಗಡೆ ಮಾಡಿದೆ.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯಿತಿಗೆ ಕೇಂದ್ರ ಸರ್ಕಾರವು ಎರಡನೇ ಕಂತಿನ ಅನುದಾನ ₹76,24,000 ಗಳನ್ನು ದಿನಾಂಕ 20-01-2012, ಓದಲಾಗಿದೆ (7)ರಲ್ಲಿ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ₹25,41,000 ಗಳನ್ನು ಬಿಡುಗಡೆ ಮಾಡಬೇಕಿತ್ತು. ಆದರೆ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ಆಯವ್ಯದಲ್ಲಿ ಒದಗಿಸಿದ ಅನುದಾನ ಲಭ್ಯತೆಗೆ ಸೀಮಿತಗೊಳಿಸಿ ₹16,64,000 ಗಳನ್ನು ಸರ್ಕಾರದ ಆದೇಶದ ಸಮಸಂಖ್ಯೆಯ ದಿನಾಂಕ 03-03-2012 ರಲ್ಲಿ ಬಿಡುಗಡೆ ಮಾಡಲಾಗಿದೆ. ಆರ್ಥಿಕ ಇಲಾಖೆಯ ಓದಲಾಗಿದೆ (8)ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ₹14,34,000 ಗಳನ್ನು ಹೆಚ್ಚುವರಿಯಾಗಿ ಪೂರಕ ಅಂದಾಜು-3 ರಲ್ಲಿ ಒದಗಿಸಿದೆ. ಆದಕಾರಣ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯಿತಿಗೆ ರಾಜ್ಯದ ಪಾಲಿನ ಎರಡನೇ ಕಂತಿನ ಉಳಿಕೆ ಅನುದಾನ ₹8,77,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ 29-03-2012**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2011-12ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಉಳಿಕೆ ಅನುದಾನ ₹8,77,000 ಗಳನ್ನು (ಎಂಟು ಲಕ್ಷದ ಎಪ್ಪತ್ತೇಳು ಸಾವಿರ ರೂ.ಮಾತ್ರ) ಗಳನ್ನು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ಮಂಜೂರಾತಿ ನೀಡಿ ಕೆಳಕಂಡ ಷರತ್ತುಗಳನ್ವಯ ಬಿಡುಗಡೆ ಮಾಡಿದೆ.

(ರೂ.ಗಳಲ್ಲಿ)

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿಲ್ಲಾ ಪಂ. ಕೋಡ್ | ಡಿ.ಡಿ.ಓ. ಕೋಡ್ | 2011-12ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆಮಾಡಬೇಕಾಗಿರುವ ಎರಡನೇ ಕಂತಿನ ಅನುದಾನ | 2011-12ನೇ ಸಾಲಿಗೆ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ಈಗಾಗಲೇ ಬಿಡುಗಡೆ ಮಾಡಿರುವ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನ | 2011-12ನೇ ಸಾಲಿನಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಎರಡನೇ ಕಂತಿನ ಉಳಿಕೆ ಅನುದಾನ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ದಕ್ಷಿಣ ಕನ್ನಡ | 409 | 1900ZZ0047 | 76,24,000 | 25,41,000 | 16,64,000 | 8,77,000 |

**ಷರತ್ತುಗಳು:–**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01 ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2011–2012ನೇ ಲಿಂಕ್ ಕೋಡ್ 2501–01–198–6–01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501–01–101–0–13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ–6)ಯ ಸಂಖ್ಯೆ ಆಇ 172 ವೆಚ್ಚ–6/2011, ದಿನಾಂಕ 30–03–2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007, ದಿನಾಂಕ 18–04–2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಅನುದಾನದ ಅಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2011–12ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ–ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಗ್ರಾಮೂಸೌ–2) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 8 ಪಿಬಿಎಸ್ 2011–12, ದಿನಾಂಕ 29–03–2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ದೀಪ**
ನಿರ್ದೇಶಕರು (ಗ್ರಾಮೂಸೌ–2) ಹಾಗೂ
ಪ. ನಿ. ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1063

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2011–12ನೇ ಸಾಲಿನ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ಬಾಗಲಕೋಟೆ, ಹಾಸನ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ–

**ಓದಲಾಗಿದೆ:**

1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–18014/01/2011–12 ಡಿಆರ್‌ಡಿಎ (ಎಸ್‌ಎಲ್ ನಂ. 10) ದಿನಾಂಕ 15–04–2011.
2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ 03–05–2011.
3) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ 20–08–2011. 22–11–2011, 03–03–2012 ಮತ್ತು 17–03–2012, ತಿದ್ದುಪಡಿ ದಿನಾಂಕ 07–03–2012 ಮತ್ತು 27–03–2012.
4) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/10/: 2011–12 ಡಿಆರ್‌ಡಿಎ (ಎಸ್‌ಎಲ್ ನಂ. 34) ದಿನಾಂಕ 12–07–2011 ಮತ್ತು (ಎಸ್‌ಎಲ್ ನಂ. 127) ದಿನಾಂಕ 19–01–2012.
5) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/10/: 2011–12 ಡಿಆರ್‌ಡಿಎ (ಎಸ್‌ಎಲ್ ನಂ. 151) ದಿನಾಂಕ 14–02–2012 (ಎಸ್‌ಎಲ್ ನಂ. 182) ದಿನಾಂಕ 29–02–2012 ಮತ್ತು (ಎಸ್‌ಎಲ್ ನಂ. 196) ದಿನಾಂಕ 14–03–2012.
6) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/10/: 2011–12 ಡಿಆರ್‌ಡಿಎ (ಎಸ್‌ಎಲ್ ನಂ. 221) ದಿನಾಂಕ 28–03–2012.

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತವೆ. 2011–12ನೇ ಸಾಲಿಗೆ ಕೇಂದ್ರ ಸರ್ಕಾರ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿರುವ

(1), (4) ಮತ್ತು (5)ರ ಪತ್ರಗಳಲ್ಲಿ ₹10,36,59,000 ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ₹3,45,43,000 ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ 2010–11ನೇ ಸಾಲಿನ ವರ್ಷಾಂತ್ಯದಲ್ಲಿ ಕೇಂದ್ರ ಸರ್ಕಾರವು ಚಿಕ್ಕಮಗಳೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಯೋಜನೆಯಡಿ ಹೆಚ್ಚುವರಿಯಾಗಿ ₹5,77,69,000 ಗಳನ್ನು ಬಿಡುಗಡೆ ಮಾಡಿತ್ತು. ಇದಕ್ಕನುಗುಣವಾಗಿ ಓದಲಾಗಿದೆ (2) ರನ್ವಯ ರಾಜ್ಯ ಸರ್ಕಾರವು, ರಾಜ್ಯದ ಪಾಲಿನ ಅನುದಾನ ₹1,98,25,000ನ್ನು 2011–12ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದಿಂದ ಭರಿಸಿ ಬಿಡುಗಡೆ ಮಾಡಿದ ಕಾರಣ, ಓದಲಾಗಿದೆ (3)ರ ಆದೇಶಗಳಲ್ಲಿ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನವನ್ನು ₹3,34,73,000 ಮಾತ್ರ ಬಿಡುಗಡೆ ಮಾಡಲಾಗಿದೆ.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (4) ಮತ್ತು (5)ರ ಪತ್ರಗಳಲ್ಲಿ ಬಿಜಾಪುರ, ಧಾರವಾಡ, ಗದಗ್, ಶಿವಮೊಗ್ಗ, ತುಮಕೂರು, ಬೆಂಗಳೂರು ಗ್ರಾಮಾಂತರ, ಚಿತ್ರದುರ್ಗ, ದಾವಣಗೆರೆ, ಗುಲ್ಬರ್ಗಾ, ಮೈಸೂರು, ರಾಮನಗರ, ಬೀದರ್ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನ ₹2,93,13,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ₹97,71,000 ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಜಿಲ್ಲಾ ಪಂಚಾಯಿತಿಗಳಿಗೆ 2011–12ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಲಭ್ಯತೆಗೆ ಸೀಮಿತಗೊಳಿಸಿ ₹81,51,000 ಗಳನ್ನು ಓದಲಾಗಿದೆ (3)ರ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿದೆ.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (6)ರ ಪತ್ರಗಳಲ್ಲಿ ಬಾಗಲಕೋಟೆ, ಹಾಸನ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ₹41,56,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವಾಗಿ ಒಟ್ಟು ₹13,85,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದರೆ ಹಾಸನ ಜಿಲ್ಲಾ ಪಂಚಾಯತಿಗೆ 2011–12ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಭರಿಸಿ ಬಿಡುಗಡೆ ಮಾಡಲು ಅನುದಾನ ಲಭ್ಯತೆ ಇಲ್ಲದ ಕಾರಣ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆಗೊಳಿಸಲು ಸಾಧ್ಯವಾಗುತ್ತಿಲ್ಲ ಬಾಗಲಕೋಟೆ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಮಾತ್ರ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನ ₹5,74,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಜಿವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ 29–03–2012**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2011–12ನೇ ಸಾಲಿನಲ್ಲಿ ಎರಡನೇ ಕಂತಿನ ಅನುದಾನವಾಗಿ ಬಾಗಲಕೋಟೆ, ಹಾಸನ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ₹5,74,000 ಗಳನ್ನು (ರೂ. ಐದು ಲಕ್ಷದ ಎಪ್ಪತ್ತನಾಲ್ಕು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2011–12ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ/ ಎರಡನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ/ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಬಾಗಲಕೋಟೆ | 461 | 2900ZZ0001 | 13,20,000 | 4,40,000 |
| 2 | ಹಾಸನ* | 410 | 1300ZZ0003 | 24,35,000 | 0 |
| 3 | ಉಡುಪಿ | 457 | 2000ZZ0001 | 4,01,000 | 1,34,000 |
| | | | ಒಟ್ಟು | 41,56,000 | 5,74,000 |

*ಹಾಸನ ಜಿಲ್ಲಾ ಪಂಚಾಯಿಗೆ 2011–12ನೇ ಸಾಲಿನ ಆಯವ್ಯಯದಲ್ಲಿ ಭರಿಸಿ ಬಿಡುಗಡೆ ಮಾಡಲು ಅನುದಾನ ಲಭ್ಯತೆ ಇಲ್ಲದ ಕಾರಣ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆಗೊಳಿಸಲು ಸಾಧ್ಯವಾಗುತ್ತಿಲ್ಲ.

**ಷರತ್ತುಗಳು:–**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ: "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6 ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪರಿಷ್ಕೃತ ಯೋಜನೆ) 2011–12 ಲಿಂಕ್ ಕೋಡ್ 2515–00–196–6–06" ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6)ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಬಾಗಲಕೋಟೆ, ಹಾಸನ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡುವ ಅನುದಾನದ ಅಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬಾಗಲಕೋಟೆ, ಹಾಸನ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಗ್ರಾಮೂಸೌ–2) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೆ ಕಳುಹಿಸುವುದು.

ಬಾಗಲಕೋಟೆ, ಹಾಸನ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು (ಗ್ರಾಮೂಸೌ–2) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ: ಗ್ರಾಅಪ 8 ಪಿಬಿಎಸ್ 2011–12, ದಿನಾಂಕ 29–03–2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ–2) ಹಾಗೂ

ಪ. ನಿ. ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. 1064 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ

ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ 28–03–2012

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ 27–03–2012 ರಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಯಡಿ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾಗಿ ಶಿವಮೊಗ್ಗ ಜಿಲ್ಲಾ ಪಂಚಾಯತಿಗೆ (ಕ್ರಮ ಸಂಖ್ಯೆ 3) ಬಿಡುಗಡೆ ಮಾಡಿರುವ ₹57,34,000 ರ ಬದಲಿಗೆ ₹56,40,000 ಎಂದು ಓದಿಕೊಳ್ಳತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ–2)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. 1065 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011 ಬೆಂಗಳೂರು, ದಿನಾಂಕ 29–03–2012**

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ: 29–03–2012 ರಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಯಡಿ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾಗಿ ಹಾಸನ ಜಿಲ್ಲಾ ಪಂಚಾಯತಿಗೆ (ಕ್ರಮ ಸಂಖ್ಯೆ 6) ಬಿಡುಗಡೆ ಮಾಡಿರುವ ₹24, 96,000 ರ ಬದಲಿಗೆ ₹10,32,000 ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1066 **ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ–2)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಶಿಕ್ಷಣ ಸಚಿವಾಲಯ

### ಸುತ್ತೋಲೆ

ಸಂಖ್ಯೆ: ಶಿಇ 203 ಆಂಆಸ 2012 ಬೆಂಗಳೂರು, ದಿನಾಂಕ 02–04–2012

**ವಿಷಯ :** ಸಾರ್ವಜನಿಕ ಸಂಗ್ರಹಣೆಯನ್ನು ಇ–ಸಂಗ್ರಹಣಾ ವೇದಿಕೆಯ ಮೂಲಕಕ್ರಮ ವಹಿಸುವ ಕುರಿತು

ಸರ್ಕಾರಿ ಇಲಾಖೆಗಳು ನಿರ್ಮಾಣ, ಸರಕು ಸಾಮಗ್ರಿ ಮತ್ತು ಸೇವೆಗಳ ಸಂಗ್ರಹಣೆಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಅನ್ವಯ ಕೈಗೊಳ್ಳಬೇಕಿರುತ್ತದೆ. ಮುಂದುವರೆದು ಸರ್ಕಾರವು ಸದರಿ ಅಧಿನಿಯಮವನ್ನು 27 ನವೆಂಬರ್ 2006 ರಲ್ಲಿ ತಿದ್ದುಪಡಿಗೊಳಿಸಿದ್ದು, ನಿರ್ಮಾಣ, ಸರಕು ಸಾಮಗ್ರಿ ಮತ್ತು ಸೇವೆಗಳ ಸಂಗ್ರಹಣೆಯನ್ನು ಇ–ಸಂಗ್ರಹಣೆ ಮೂಲಕ ಕ್ರಮವಹಿಸಲು

ಸೂಚಿಸಲಾಗಿರುತ್ತದೆ. ಬೇಡಿಕೆಗಳನ್ನು ಒಟ್ಟುಗೂಡಿಸಲು, ಬೆಲೆಪಟ್ಟಿಯ ಖರ್ಚನ್ನು ಕಡಿಮೆ ಮಾಡಲು, ಸ್ಥಿರವಾದ ಸಂಗ್ರಹಣಾ ವಿಧಾನವನ್ನು ರೂಢಿಗೆ ತರಲು ಮತ್ತು ಪಾರದರ್ಶಕತೆ ಉಂಟು ಮಾಡಲು, ಇ– ಸಂಗ್ರಹಣೆ ವಿಧಾನವು ಅವಶ್ಯಕ ಮತ್ತು ಸೂಕ್ತವಾಗಿರುತ್ತದೆ.

ಕರ್ನಾಟಕ ಸಚಿವಾಲಯದ ಶಿಕ್ಷಣ ಇಲಾಖೆ ಮತ್ತು ಅದರ ಅಧೀನ ಇಲಾಖೆಗಳು ದೈನಂದಿನ ಕಾರ್ಯದಲ್ಲಿ ನಿರ್ಮಾಣ, ಸರಕು ಸಾಮಗ್ರಿ ಮತ್ತು ಸೇವೆಗಳ ಸಂಗ್ರಹಣೆಯನ್ನು ಮಾಡುತ್ತಿದ್ದು, ಸದರಿ ಸಂಗ್ರಹಣೆಯನ್ನು ಇ–ಸಂಗ್ರಹಣೆ ಮೂಲಕ ಕೈಗೊಂಡಲ್ಲಿ ಸಂಗ್ರಹಣೆಯ ವೆಚ್ಚವನ್ನು ಕಡಿತಗೊಳಿಸಬಹುದಾಗಿದ್ದು ಮತ್ತು ಹೆಚ್ಚಿನ ಪಾರದರ್ಶಕತೆ ಉಂಟು ಮಾಡಬಹುದಾಗಿರುತ್ತದೆ. ಆದ್ದರಿಂದ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಅಧೀನ ಇಲಾಖೆಗಳು ಎಲ್ಲಾ ವಾರ್ಷಿಕ ಬೇಡಿಕೆಗಳನ್ನು ಒಟ್ಟುಗೂಡಿಸಿ ಸಂಗ್ರಹಣೆಯನ್ನು ಇ– ಸಂಗ್ರಹಣಾ ವೇದಿಕೆಯ ಮೂಲಕವೇ ಸಂಗ್ರಹಿಸಲು ಕ್ರಮವಹಿಸತಕ್ಕದ್ದು. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 29)ರ ಕಲಂ 18–ಎ ಉಪಕಲಂ (2)ರ ಉದ್ಧೃತ ಭಾಗವು ಕೆಳಕಂಡಂತಿದ್ದು;

"(2) with effect from such date, as may be specified by the Government, by notification, a procurement entity in respect of a class of procurement, if any, as may be notified shall procure its procurements through the e- procurement platform."

ಇದರಂತೆ ಇಲಾಖೆಯು ಸದರಿ ಕಲಂ 18–ಎ ರ ಉಪ ಕಲಂ (2) ರಡಿಯಲ್ಲಿ ಅಧಿಸೂಚನೆಯನ್ನು ಹೊರಡಿಸಲು ಅಧೀನ ಇಲಾಖೆ ಅಥವಾ ಸಂಬಂಧಿಸಿದ ಆಡಳಿತ ಇಲಾಖೆಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಬೇಕಾಗಿರುತ್ತದೆ. ಆದ್ದರಿಂದ ಶಿಕ್ಷಣ ಇಲಾಖೆಯ ಕಾರ್ಯವ್ಯಾಪ್ತಿಗೆ ಬರುವ ಎಲ್ಲಾ ಇಲಾಖೆಗಳಿಗೆ ಸಂಬಂಧಿಸಿದಂತೆ ಸದರಿ ಕಲಂ 18–ಎ ರ ಉಪಕಲಂ (2) ರಡಿಯಲ್ಲಿ ಅಧಿಸೂಚನೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ರ ವತಿಯಿಂದ ಹೊರಡಿಸಲು ಅನುವಾಗುವಂತೆ ಅಗತ್ಯ ಪ್ರಸ್ತಾವನೆಯನ್ನು ಇಲಾಖೆಗಳು ಮತ್ತು ಸಂಬಂಧಪಟ್ಟ ಇಲಾಖೆಯ ಸಚಿವಾಲಯದ ಆಡಳಿತ ಶಾಖೆಯು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಇ–ಆಡಳಿತ) ಗೆ ಸಲ್ಲಿಸಲು ಸೂಚಿಸಿದೆ.

**ಹೆಚ್.ಕೆ. ರವಿಮೂರ್ತಿ**
ಆಂತರಿಕ ಆರ್ಥಿಕ ಸಲಹೆಗಾರರು
ಹಾಗೂ ಸರ್ಕಾರದ ಉಪ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, ವಾರ್ತಾ, ಪ್ರವಾಸೋದ್ಯಮ ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಪಿ.ಆರ್. 1067

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಕೃತ ಜ್ಞಾಪನ

ಸಂಖ್ಯೆ: ಸಿಆಸುಇ 32 ಇಆಸು 2011 ಬೆಂಗಳೂರು, ದಿನಾಂಕ 30.03.2012

**ವಿಷಯ:** ಬೆಳಗಾವಿ ವಿಭಾಗದ ಬಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿ ಹಾಗೂ ಗುಲ್ಬರ್ಗಾ ವಿಭಾಗದಲ್ಲಿ ಏಪ್ರಿಲ್ ಮತ್ತು ಮೇ ತಿಂಗಳಿನ ಬೇಸಿಗೆ ಕಾಲದಲ್ಲಿ ಕಛೇರಿ ಕೆಲಸದ ವೇಳೆಯನ್ನು ನಿಗದಿಪಡಿಸುವ ಬಗ್ಗೆ.

**ಉಲ್ಲೇಖ:** 1) ದಿನಾಂಕ: 30.03.1995ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 84 ಇಆಸು 94.
2) ದಿನಾಂಕ: 17.03.2010 ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 21 ಇಆಸು 2008.
3) ದಿನಾಂಕ: 26.03.2011ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 32 ಇಆಸು 2011

1) ಗುಲ್ಬರ್ಗಾ ವಿಭಾಗದಲ್ಲಿರುವ ಮತ್ತು ಬೆಳಗಾಂ ವಿಭಾಗದ ಬಿಜಾಪುರ ಹಾಗೂ ಬಾಗಲಕೋಟೆ ಜಿಲ್ಲೆಯಲ್ಲಿರುವ ಕರ್ನಾಟಕ ಸರ್ಕಾರದ ಎಲ್ಲಾ ಸರ್ಕಾರಿ ಕಛೇರಿಗಳ, ಕಛೇರಿ ಕೆಲಸದ ವೇಳೆಯನ್ನು ಏಪ್ರಿಲ್ ಹಾಗೂ ಮೇ ತಿಂಗಳುಗಳಲ್ಲಿ ಬೆಳಿಗ್ಗೆ 8.00 ರಿಂದ ಮಧ್ಯಾಹ್ನ 1.30 ಘಂಟೆಯವರೆಗೆ ನಿರ್ವಹಿಸತಕ್ಕದ್ದೆಂದು ಮೇಲೆ (1) ರಲ್ಲಿ ಉಲ್ಲೇಖಿಸಿದ ದಿನಾಂಕ: 30.03.1995ರ ಸರ್ಕಾರಿ ಅಧಿಕೃತ ಜ್ಞಾಪನದನ್ವಯ ನಿಗದಿಪಡಿಸಲಾಗಿತ್ತು.

2) ತರುವಾಯ, ಗುಲ್ಬರ್ಗಾ ವಿಭಾಗದ ಎಲ್ಲಾ ಜಿಲ್ಲೆಗಳಲ್ಲಿ ಹಾಗೂ ಬೆಳಗಾವಿ ವಿಭಾಗದ ಬಿಜಾಪುರ ಹಾಗೂ ಬಾಗಲಕೋಟೆ ಜಿಲ್ಲೆಗಳಲ್ಲಿ 2010–11ನೇ ಸಾಲಿನಿಂದ ಜಾರಿಗೆ ಬರುವಂತೆ ಏಪ್ರಿಲ್ ಮತ್ತು ಮೇ ತಿಂಗಳಿನಲ್ಲಿ, ಎಲ್ಲಾ ಸರ್ಕಾರಿ ಕಛೇರಿಗಳ ಕೆಲಸದ ವೇಳೆಯು ಬೆಳಿಗ್ಗೆ 10.00 ರಿಂದ ಸಂಜೆ 5.30 ಘಂಟೆಯವರೆಗೆ ಇರತಕ್ಕದ್ದೆಂದು, ಮೇಲೆ (2) ರಲ್ಲಿ ಉಲ್ಲೇಖಿಸಿದ ದಿನಾಂಕ: 17.03.2010ರ ಸರ್ಕಾರಿ ಅಧಿಕೃತ–ಜ್ಞಾಪನದನ್ವಯ ನಿಗದಿಪಡಿಸಲಾಗಿದೆ.

3) ಈ ವಿಷಯವನ್ನು ಸರ್ಕಾರ ಪುನರ್ ಪರಿಶೀಲಿಸಿದೆ. ಅದರಂತೆ, ಮೇಲೆ (2) ರಲ್ಲಿ ಉಲ್ಲೇಖಿಸಿದ ದಿನಾಂಕ: 17.03.2010ರ ಅಧಿಕೃತ ಜ್ಞಾಪನವನ್ನು, ಈ ಮೂಲಕ ಭಾಗಶಃ ಮಾರ್ಪಡಿಸುತ್ತಾ, ಮೇಲೆ (1) ರಲ್ಲಿ ಉಲ್ಲೇಖಿಸಲಾದ ದಿನಾಂಕ: 30.03.1995ರ ಅಧಿಕೃತ ಜ್ಞಾಪನದನ್ವಯ ನಿಗದಿಪಡಿಸಿರುವಂತೆ, ಈಗ 2012–13ನೇ ಸಾಲಿನಲ್ಲಿ ಗುಲ್ಬರ್ಗಾ ವಿಭಾಗದ ಎಲ್ಲಾ ಜಿಲ್ಲೆಗಳು ಮತ್ತು ಬೆಳಗಾವಿ ವಿಭಾಗದ ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳಿಗೆ ಮಾತ್ರ ಅನ್ವಯಿಸುವಂತೆ ಏಪ್ರಿಲ್ ಮತ್ತು ಮೇ ತಿಂಗಳಿನಲ್ಲಿ ಸದರಿ ಜಿಲ್ಲೆಗಳಿಗೆ ಸಂಬಂಧಿಸಿದ ಎಲ್ಲಾ ರಾಜ್ಯ ಸರ್ಕಾರಿ ಕಛೇರಿಯ ವೇಳೆಯನ್ನು ಬೆಳಿಗ್ಗೆ 8.00 ರಿಂದ ಮಧ್ಯಾಹ್ನ 1.30 ಘಂಟೆಯವರೆಗೆ ನಿಗದಿಪಡಿಸಲಾಗಿದೆ. ಮುಂದುವರಿದು, ಮೇಲೆ (2) ರಲ್ಲಿ ಉಲ್ಲೇಖಿಸಿದ ದಿನಾಂಕ: 17.03.2010ರ ಅಧಿಕೃತ ಜ್ಞಾಪನದನ್ವಯ ನಿಗದಿಪಡಿಸಿದ ಕಛೇರಿ ಕೆಲಸದ ವೇಳೆಯು 2013–14ನೇ ಸಾಲಿಗೆ ಅನ್ವಯಿಸತಕ್ಕದ್ದೆಂದೂ ಸಹ ಈ ಮೂಲಕ ಸೂಚಿಸಿದೆ.

**ಅಬ್ದುಲ್ ರೆಹಮಾನ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಿ.ಆ.ಸು.ಇ (ಆಸು– ತರಬೇತಿ)

ಪಿ.ಆರ್. 1068

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ್ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜನ್ನು ಸುಧಾರಿಸಲು ಅಂದಾಜು ರೂ. 600.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ರವರ ಪತ್ರ ಸಂಖ್ಯೆ: ಕಜಮಂ/ವ್ಯನಿ/ಮುಅ/(ಉ)/ ಡಿಸಿಇ–1/ಹಳ್ಳಿಯಾಳು/3677/2010–11, ದಿ:21.01.2011

2) ಸರ್ಕಾರದ ಆದೇಶ ಸಂಖ್ಯೆ: ನಅಇ 23 ಯುಎಂಎಸ್ 2011 ದಿನಾಂಕ: 27.02.2012

3) ಸರ್ಕಾರದ ಆದೇಶ ಸಂಖ್ಯೆ: ನಅಇ 01 ಟಿಎಫ್ಟಿ 2008. ದಿನಾಂಕ: 16.05.2008.

ಹಳ್ಳಿಯಾಳ್ ಪಟ್ಟಣವು ಉತ್ತರ ಕನ್ನಡ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿ ಪ್ರಕಾರ 21,150 ಜನಸಂಖ್ಯೆ ಇದ್ದು, ಪ್ರಸ್ತುತ 25,000 ಇರುತ್ತದೆ. ಈ ಪಟ್ಟಣದ ವಾಸಿಗಳು ಬಹುತೇಕವಾಗಿ ಬಡವರಾಗಿದ್ದು, ಸೀಮಿತ ರೇಖೆಗಿಂತ ಆದಾಯವು ಕಡಿಮೆ ಮಟ್ಟದ್ದಾಗಿರುತ್ತದೆ. ಈ ಕ್ಷೇತ್ರದಲ್ಲಿ ನೀರು ಸಂಪರ್ಕಗಳಿಗೆ ಮೀಟರ್‌ಗಳನ್ನು ಅಳವಡಿಸಿರುವುದಿಲ್ಲ. ಜನತೆಗೆ ನೀರಿನ ಸುಧಾರಣೆಯು ಅಗತ್ಯವಿರುವ ಬಗ್ಗೆ ಬೇಡಿಕೆ ಬಂದಿರುತ್ತದೆ. ಈ ಕ್ಷೇತ್ರದ ಬೆಳವಣಿಗೆಯು ಶೇ. 80 ರಷ್ಟು ಗೃಹ ಉಪಯೋಗಕ್ಕಾಗಿ ಇದ್ದು, ಪ್ರಸ್ತುತ ಕಾಳಿ ನದಿ ಮೂಲವಾಗಿಟ್ಟುಕೊಂಡು ನೀರು ಸರಬರಾಜು ಯೋಜನೆಯನ್ನು ಏಪ್ರಿಲ್ 1999 ರಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿರುತ್ತದೆ. ಈ ಯೋಜನೆಯಡಿ 2026ರ ಅಂತ್ಯಕ್ಕೆ ನಿರೀಕ್ಷಿಸಲಾದ 35,000 ಜನಸಂಖ್ಯೆಗೆ ನೀರು ಸರಬರಾಜು ಮಾಡಲು ವಿನ್ಯಾಸಿಸಿ ಯೋಜನೆಯನ್ನು ಚಾಲನೆಗೊಳಿಸಲಾಗಿದೆ.

ಪ್ರಸ್ತುತ ಪಟ್ಟಣದ ಜನಸಂಖ್ಯೆಯು 25000ಕ್ಕೆ ಏರಿರುವುದರಿಂದ, ಹಾಲಿ ಕಾಳಿ ನದಿಯಿಂದ 4.54 ಎಂ.ಎಲ್.ಡಿ, ಸಾಮರ್ಥ್ಯದ ನೀರು ಸರಬರಾಜು ಯೋಜನೆಯಿಂದ ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡಲಾಗುತ್ತಿದೆ. ಪ್ರಸ್ತುತ ಹೊಸದಾಗಿ ಎರಡೂ ಬಡಾವಣೆಗಳನ್ನು ಆಶ್ರಯ ವಸತಿ ಯೋಜನೆಯಡಿಯಲ್ಲಿ ನಿರ್ಮಿಸಿದ್ದು, ಸದರಿ ವಸತಿ ಗೃಹಗಳು ಪಟ್ಟಣದಿಂದ ಸ್ವಲ್ಪ ದೂರದಲ್ಲಿ ಇರುತ್ತದೆ. ಈ ಬಡಾವಣೆಗಳಿಗೆ ನೆಲಮಟ್ಟದ ಜಲದ ಮೂಲದಿಂದ ನೀರಿನ ಸೌಲಭ್ಯ ಒದಗಿಸಿರುವುದಿಲ್ಲ. ಕೊಳವೆ ಬಾವಿಗಳ ಮೂಲಕ ನೀರನ್ನು ಈ ಬಡಾವಣೆಗಳಿಗೆ ಒದಗಿಸಿದ್ದು, ವಿದ್ಯುತ್ ಸರಬರಾಜಿನ ಕೊರತೆಯಿಂದ ಮತ್ತು ಕೊಳವೆ ಬಾವಿಗಳಲ್ಲಿ ನೀರಿನ ಕೊರತೆ ಕಡಿಮೆಯಾಗುವುದರಿಂದ ಸಮರ್ಪಕವಾಗಿ ಈ ಬಡಾವಣೆಗಳಿಗೆ ನೀರುಸರಬರಾಜು ಮಾಡಲಾಗುತ್ತಿಲ್ಲ. ಇದಲ್ಲದೆ, ಖಾನಾಪುರ–ತಾಳಗುಪ್ಪ ರಾಜ್ಯ ಹೆದ್ದಾರಿಯಲ್ಲಿ 2 ಹೊಸ ಬಡಾವಣೆಗಳು ಬಂದಿದ್ದು, ಇಲ್ಲಿಯೂ ಸಹ ಅದೇ ಪರಿಸ್ಥಿತಿ ಇರುತ್ತದೆ. ಆದ್ದರಿಂದ, ಬೇಸಿಗೆಯಲ್ಲಿ ನೀರಿನ ಅಭಾವ ಹೆಚ್ಚಾಗುತ್ತದೆ.

ಆದ್ದರಿಂದ, ಪ್ರಸ್ತುತ ಹಾಲಿ ಚಾಲ್ತಿಯಲ್ಲಿರುವ ಯೋಜನೆಯನ್ನು ಸುಧಾರಿಸಲು ಹಾಗೂ ವಿತರಣಾ ಕೊಳವೆ ಮಾರ್ಗಗಳನ್ನು ಹೆಚ್ಚಿಸಲು 2042ರಲ್ಲಿ ಅಂದಾಜಿಸಲಾದ 45000 ಜನಸಂಖ್ಯೆಗೆ ತಲಾ ದಿನಂಪ್ರತಿ 135 ಎಲ್.ಪಿ.ಸಿ.ಡಿ., ನೀರು ಸರಬರಾಜು ಮಾಡಲು ಯೋಜನೆಯ ಅಂದಾಜನ್ನು 2008–09ನೇ ಸಾಲಿನ ಮಂಡಳಿಯ ದರಪಟ್ಟಿಗಳನ್ನು 2010–11ನೇ ಸಾಲಿಗೆ ಮುಂದುವರೆಸಿದ್ದು, ಸದರಿ ದರಗಳ ಆಧಾರದ ಮೇಲೆ ಮತ್ತು ದರಪಟ್ಟಿಯಲ್ಲಿ ಅನ್ವಯಿಸದ ಐಟಂಗಳಿಗೆ ಮಾರುಕಟ್ಟೆ ಬೆಲೆಯನ್ನು ನಿಗದಿಪಡಿಸಿ, ಯೋಜನೆಯ ಅಂದಾಜನ್ನು ರೂ. 600.00 ಲಕ್ಷಗಳಿಗೆ ತಯಾರಿಸಿ, ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಯೋಜನೆಯನ್ನು 2011–12ನೇ ಸಾಲಿನ ಮಂಡಳಿಯ ಅನುಮೋದಿತ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ಸೇರಿಸಿದ್ದು, ಪ್ರಸ್ತುತ ಸಾಲಿನಲ್ಲಿ ರೂ. 200.00 ಲಕ್ಷಗಳನ್ನು (ಯೋಜನೆಯ 1/3 ಭಾಗದಷ್ಟು) ಅನುವು ಮಾಡಲಾಗಿದೆ.

ಸದರಿ ಪಟ್ಟಣಕ್ಕೆ ಈಗಾಗಲೇ ನೀರು ಸರಬರಾಜು ಯೋಜನೆಯನ್ನು ಮಂಡಳಿಯು 1999ರಲ್ಲಿ ಅನುಷ್ಠಾನಗೊಳಿಸಿದ್ದು ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಕೆ.ಎಮ್.ಆರ್.ಪಿ ಯೋಜನೆಯಲ್ಲಿ ಕೆಲವು ಕಾಮಗಾರಿಗಳನ್ನು ಕೈಗೊಳ್ಳಲು ಯೋಜನೆ ರೂಪಿಸಿರುವ ಹಿನ್ನಲೆಯಲ್ಲಿ ಪ್ರಸ್ತುತ ಪ್ರಸ್ತಾವನೆಯ ಅಗತ್ಯತೆ ಬಗ್ಗೆ ಮಂಡಳಿಯನ್ನು ಕೋರಲಾಗಿ ಮಂಡಳಿಯು ಮೇಲಿನ ಎರಡು ಯೋಜನೆಯಡಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳನ್ನು ಹೊರತುಪಡಿಸಿ ಬಾಕಿ ಕೈಗೊಳ್ಳಬೇಕಾದ ಕಾಮಗಾರಿಗಳನ್ನು ರೂ. 600.00 ಲಕ್ಷಗಳಲ್ಲಿ ಕೈಗೊಳ್ಳಲು ಯೋಜನೆ ರೂಪಿಸಿ ಸಲ್ಲಿಸಿರುವುದಾಗಿ ವರದಿ ನೀಡಿರುತ್ತದೆ.

ಸದರಿ ಯೋಜನೆಯ ಅಂದಾಜಿನಲ್ಲಿ ಮಂಡಳಿಯು ಎಸ್ಕಲೇಷನ್ ಟೆಂಡರ್ ಪ್ರೀಮಿಯಂಗೆ ಅವಕಾಶ ಕಲ್ಪಿಸಿದ್ದು ಈ ಎರಡು ವೆಚ್ಚಗಳನ್ನು ಸ್ಥಳೀಯ ಸಂಸ್ಥೆಗೆ ಭರಿಸಬೇಕಾಗಿರುವುದರಿಂದ ಅವುಗಳಿಗೆ ಅಂದಾಜು ಪಟ್ಟಿಯಿಂದ ಅಂದರೆ ರೂ. 55.58 ಲಕ್ಷಗಳನ್ನು ಕಡಿತಗೊಳಿಸಲಾಗಿದೆ. ಇದಲ್ಲದೆ ಇಟಿಪಿ ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇಕಡ 5 ಕ್ಕೆ ಮಿತಿಗೊಳಿಸಿ ಯೋಜನೆಯ ಅಂದಾಜಿನಲ್ಲಿ ರೂ. 23.16 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ. ಇದರಿಂದ ಯೋಜನೆಯ ಅಂದಾಜನ್ನು ರೂ. 498.11 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 03 ಯುಡಬ್ಲ್ಯೂಎಸ್ 2011 ಬೆಂಗಳೂರು, ದಿನಾಂಕ: 30.03.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆ ಹಳಿಯಾಳ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜು ವ್ಯವಸ್ಥೆಯನ್ನು ಸುಧಾರಿಸುವ ಯೋಜನೆಯನ್ನು ರೂ. 498.11 ಲಕ್ಷಗಳಲ್ಲಿ (ರೂ. ನಾಲ್ಕುನೂರ ತೊಂಭತ್ತೆಂಟು ಲಕ್ಷಗಳು ಮತ್ತು ಹನ್ನೊಂದು ಸಾವಿರ

ಮಾತ್ರ) ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿದೆ.

1) The Escalation charges should not form part of the estimate. It should be borne by the concerned ULB. The estimate is reduced to such extent.

2) ETP & contingencies are restricted to 5%

3) Adequate provision to be made by the Board in the following Years for timely completion of the Project.

4) Water rates as proposed by KUWS&DB have to be implemented to meet O & M cost of UGD.

5) KTPP provisions, quality control and timely completion should ensured.

6) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

7) ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

8) ಯೋಜನೆಯ ಆರ್ಥಿಕ ಮಾದರಿಯಂತೆ ಸ್ಥಳೀಯ ಸಂಸ್ಥೆಯ ವಂತಿಕೆಯಾದ ಶೇಕಡ 5 ರಷ್ಟು ಮೊತ್ತವನ್ನು ಸ್ಥಳೀಯ ಸಂಸ್ಥೆಯು ನೀಡಲು ಒಪ್ಪಿ ಸೂಕ್ತ ಠರಾವು ಯೋಜನೆಯನ್ನು ಕೈಗೆತ್ತಿಕೊಳ್ಳತಕ್ಕದ್ದು.

9) ಈ ಯೋಜನೆಯಡಿ ಅಗತ್ಯವಿರುವ ಭೂಮಿಯನ್ನು ಪಟ್ಟಣ ಪಂಚಾಯತಿಯ ವತಿಯಿಂದ ಮಂಡಳಿಗೆ ಹಸ್ತಾಂತರಿಸಲು ಸೂಕ್ತ ಠರಾವನ್ನು ಪಾಸು ಮಾಡಿ ಸದರಿ ಭೂಮಿಯನ್ನು ಹಸ್ತಾಂತರಿಸಿದ ನಂತರ ಕಾಮಗಾರಿಗಳನ್ನು ಪ್ರಾರಂಭಿಸುವುದು.

ಈ ಆದೇಶವನ್ನು ಆದೇಶಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16.05.2008ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/135/ಇಎಕ್ಸ್‌ಪಿ–9/2011, ದಿನಾಂಕ 17.03.2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವರಾವ್**

ಪಿ.ಆರ್. 1069

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ವಿರಾಜಪೇಟೆ ಪಟ್ಟಣದ ಸೈಬರ್ ಕಾಫಿ ವರ್ಕ್ಸ್‌ನಿಂದ ಜಲಶುದ್ಧೀಕರಣದವರೆಗೆ 200 ಮಿ.ಮಿ. ವ್ಯಾಸದ ಹೊಸ ಡಿ.ಐ. ಏರು ಕೊಳವೆ ಮಾರ್ಗವನ್ನು ಅಂದಾಜು ರೂ. 138.00 ಲಕ್ಷಗಳಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :** 1) ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ವಿರಾಜಪೇಟೆ ರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ /ಮೈಸೂರು/ವಿರಾಜಪೇಟೆ/ 3959/2011–12, ದಿ: 22.02.12.

2) ಸರ್ಕಾರದ ಆದೇಶ ಸಂಖ್ಯೆ: ನಅಇ 23 ಯುಎಂಎಸ್ 2011 ದಿನಾಂಕ: 27.02.2012.

3) ಸರ್ಕಾರದ ಆದೇಶ ಸಂಖ್ಯೆ: ನಅಇ 01 ಟಿಎಫ್‌ಟಿ 2008. ದಿನಾಂಕ: 16.05.2008.

ವಿರಾಜಪೇಟೆ ಪಟ್ಟಣಕ್ಕೆ ಶಾಶ್ವತ ನೀರು ಸರಬರಾಜು ವ್ಯವಸ್ಥೆಯನ್ನು ಕಲ್ಪಿಸಲು ವಿರಾಜಪೇಟೆ ಪಟ್ಟಣದಿಂದ 11.7 ಕಿ.ಮೀ. ದೂರದಲ್ಲಿರುವ ಬೇತ್ರಿ ಗ್ರಾಮದಲ್ಲಿ ಹರಿದು ಹೋಗುವ ಕಾವೇರಿ ನದಿಯಿಂದ 2 ನೇ ಹಂತದ ನೀರು ಸರಬರಾಜು ಯೋಜನೆಯನ್ನು ಕೈಗೊಳ್ಳಲು 2031 ನೇ ಇಸವಿಗೆ ಅಂದಾಜಿಸಿದ 24.000 ಜನಸಂಖ್ಯೆಗೆ ದಿನಂಪ್ರತಿ ತಲಾ 70 ಲೀಟರ್‌ನಂತೆ ವಿನ್ಯಾಸಿಸಿ ಯೋಜನೆಯ ಅಂದಾಜು ಪಟ್ಟಿಯನ್ನು 1999–2000ನೇ ಸಾಲಿನ ದರಪಟ್ಟಿಯ ಪ್ರಕಾರ ರೂ. 260.00 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಯುಡಿಡಿ/58/ಯುಡಬ್ಲ್ಯೂಎಸ್/99 ದಿನಾಂಕ: 19.10.2000 ರಲ್ಲಿ ನೀಡಲಾಗಿದೆ. ಈ ಯೋಜನೆಯನ್ನು ದಿನಾಂಕ: 28.02.2004 ರಂದು ಚಾಲನೆಗೊಳಿಸಲಾಗಿದೆ.

ವಿರಾಜಪೇಟೆ ಪಟ್ಟಣದ ಎರಡನೇ ಹಂತದ ಯೋಜನೆಯಲ್ಲಿ ಪಟ್ಟಣದಿಂದ 12.2ಕಿ.ಮೀ. ದೂರದಲ್ಲಿರುವ ಬೇತ್ರಿ ಬಳಿಯ ಕಾವೇರಿ ನದಿಯ ಮೂಲಸ್ಥಾವರದಿಂದ ಕೇವಲ 9.2 ಕಿ.ಮೀ ಮಾತ್ರ ಹೊಸದಾಗಿ ಕಚ್ಚಾ ನೀರಿನ 200 ಮೀ.ಮೀ. ವ್ಯಾಸದ ಡಿ.ಐ. ಏರು ಕೊಳವೆ ಮಾರ್ಗವನ್ನು ಅಳವಡಿಸಿ ಕದನೂರಿನ ಸೈಬರ್ ಕಾಫಿ ವರ್ಕ್ಸ್ ಬಳಿ 1968ರಲ್ಲಿ ಚಾಲನೆಗೊಳಿಸಿದ ಮೊದಲನೇ ಹಂತದಲ್ಲಿ ಅಳವಡಿಸಿದ 200 ಮಿ. ಮೀ ವ್ಯಾಸದ ಸಿಐ. ಉದ್ದದ ಏರು ಕೊಳವೆ ಮಾರ್ಗದಲ್ಲಿ ಆಗಾಗ್ಗೆ ನೀರು ಸೋರುವಿಕೆ ಆಗುತ್ತಿದ್ದು, ನೀರು ಸರಬರಾಜಿಗೆ ತೀವ್ರ ತೊಂದರೆಯಾಗುತ್ತಿದೆ. ಅದಲ್ಲದೆ, ಈ 3 ಕಿ.ಮೀ. ನಲ್ಲಿ ಹಳೆಯ ಕೊಳವೆ ಮಾರ್ಗವು ರಸ್ತೆಯ ಮಧ್ಯೆದಲ್ಲಿದ್ದು, ಈ ರಸ್ತೆಯಲ್ಲಿ ವಾಹನಗಳು ಅಧಿಕವಾಗಿ ಓಡಾಡುತ್ತಿರುತ್ತದೆ. ಇದರಿಂದಾಗಿ ನೀರು ಸೋರುವಿಕೆಯು ಅಧಿಕವಾಗಿದೆ. ಇದರಿಂದ ವಿರಾಜಪೇಟೆ ಪಟ್ಟಣದ ನೀರು ವಿತರಣಾ ಕಾರ್ಯದಲ್ಲಿ ಅಡಚಣೆ ಉಂಟಾಗುತ್ತಿದ್ದು ಜನರಿಗೆ ಸಮರ್ಪಕ ನೀರು ಸರಬರಾಜು ಮಾಡಲು ತೊಂದರೆ ಉಂಟಾಗುತ್ತಿದೆ. ಈ ತೊಂದರೆಗಳ ಶಾಶ್ವತ ಪರಿಹಾರಕ್ಕಾಗಿ ಸೈಬರ್ ಕಾಫಿ ವರ್ಕ್ಸ್‌ನಿಂದ ಜಲಶುದ್ಧೀಕರಣ ಘಟಕದವರೆಗೂ ಹೊಸ ಕೊಳವೆ ಮಾರ್ಗ ಅಳವಡಿಸುವುದೇ ಸೂಕ್ತ ಪರಿಹಾರವಾಗುತ್ತದೆಂದು ತಾಂತ್ರಿಕ ಅಭಿಪ್ರಾಯವಿರುತ್ತದೆ.

ಈ ಮೇಲಿನ ಕಾರಣಗಳಿಂದಾಗಿ, ವಿರಾಜಪೇಟೆ ಪಟ್ಟಣದ ಸೈಬರ್ ಕಾಫಿ ವರ್ಕ್ಸ್‌ನಿಂದ ಜಲಶುದ್ಧೀಕರಣದ ವರೆಗೆ 200 ಮಿ.ಮೀ. ವ್ಯಾಸದ ಕೆ–7 ಕ್ಲಾಸ್ ಡಿ.ಐ. ಕೊಳವೆ ಮಾರ್ಗವನ್ನು ಒದಗಿಸಿ, ಅಳವಡಿಸುವ ಕಾಮಗಾರಿಯ ಅಂದಾಜನ್ನು 2011–12ನೇ ಸಾಲಿನ ಮಂಡಳಿ ಹಾಗೂ ಮಂಗಳೂರು ವೃತ್ತದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ದರಪಟ್ಟಿಯಂತೆ ರೂ. 138.00 ಲಕ್ಷಗಳಿಗೆ ತಯಾರಿಸಲಾಗಿದೆ.

ಈ ಯೋಜನೆಯನ್ನು ಸರ್ಕಾರವು ದಿನಾಂಕ: 20.07.2011 ರಂದು ಹೊರಡಿಸಿದ ಆದೇಶದಲ್ಲಿ ನಿಗದಿಪಡಿಸಿದಂತೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಪ್ರಸ್ತಾವನೆಯನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಮೇಲೆ ಓದಲಾದ ಕ್ರಮಾಂಕ (1) ರ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಯೋಜನೆಯನ್ನು ಮೇಲೆ ಓದಲಾದ ಕ್ರಮಾಂಕ (2) ರ ಆದೇಶದಲ್ಲಿ ಮಂಡಳಿಯ 2011–12ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ಸೇರಿಸಿ ರೂ. 50.00 ಲಕ್ಷಗಳ ಮೊತ್ತವನ್ನು ಪ್ರಸ್ತುತ ಸಾಲಿನಲ್ಲಿ ಅನುವು ಮಾಡಲಾಗಿದೆ.

| ಕ್ರಮ ಸಂಖ್ಯೆ | ವಿವರ | ಮೊತ್ತ |
|---|---|---|
| 1) | ಸರ್ಕಾರದಿಂದ ಸಾಲ (ಶೇ.95) | ರೂ. 131.10 ಲಕ್ಷಗಳು |
| 2) | ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ.5) | ರೂ. 6.90 ಲಕ್ಷಗಳು |
| | **ಒಟ್ಟು** | **ರೂ. 138.00 ಲಕ್ಷಗಳು** |

ಮೇಲೆ ಓದಲಾದ ಕ್ರಮಾಂಕ (3) ರ ಆದೇಶದಲ್ಲಿ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ನಅಇ 01 ಟಿಎಫ್‌ಪಿ 2008, ದಿನಾಂಕ: 16.05.2008 ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ರೂ. 5.00 ಕೋಟಿಗಳಿಗೂ ಕಡಿಮೆ ಮೊತ್ತವಿರುವ ಮತ್ತು ಪ್ರಸ್ತುತ ಸಾಲಿನಲ್ಲಿ ಸದರಿ ಯೋಜನೆಗೆ ಸೂಕ್ತ ಹಣಕಾಸಿನ ವ್ಯವಸ್ಥೆ ಒದಗಿಸಿರುವ ಯೋಜನೆಗಳ ಅನುಮೋದನೆಯನ್ನು ನೀಡಲು ಅಧಿಕಾರ ನಿಯೋಜನೆ ಮಾಡಲಾಗಿದೆ. ಈ ಯೋಜನೆಗೆ ಮೇಲೆ ಓದಲಾದ ಕ್ರಮಾಂಕ (2) ರ ಆದೇಶದಲ್ಲಿ ಸೂಕ್ತ ಮೊತ್ತವನ್ನು ಅನುವು ಮಾಡಿ ಮಂಡಳಿಯ ಕ್ರಿಯಾ ಯೋಜನೆಯಲ್ಲಿ ಸೇರಿಸಿರುವ ಹಿನ್ನೆಲೆಯಲ್ಲಿ ಈ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಬಹುದಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 05 ಯುಡಬ್ಲ್ಯೂಎಸ್ 2012 ಬೆಂಗಳೂರು, ದಿನಾಂಕ: 30.03.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿರಾಜಪೇಟೆ ಪಟ್ಟಣದ ಸೈಬರ್ ಕಾಫಿ ವರ್ಕ್ಸ್‌ನಿಂದ ಜಲಶುದ್ಧೀಕರಣದವರೆಗೆ 200 ಮಿ.ಮೀ. ವ್ಯಾಸದ ಹೊಸ ಡಿ.ಐ. ಏರು ಕೊಳವೆ ಮಾರ್ಗವನ್ನು ಅಂದಾಜು ರೂ. 138.00 ಲಕ್ಷಗಳಲ್ಲಿ (ರೂ. ನೂರ ಮೂವತ್ತೆಂಟು ಲಕ್ಷಗಳು ಮಾತ್ರ) ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿದೆ.

1) The consent of the ULB shall be obtained for the extra cost that might occur due to deviations, extra item works or variations in the Scheme.
2) Adequate provision to be made by the Board in the following years for timely completion of the Project.
3) Water rates as proposed by KUWS& DB have to be implemented to meet O & M cost of UGD.
4) KTPP Provisions, quality control and timely completion should ensured.
5) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
6) ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.
7) ಈ ಯೋಜನೆಯಡಿ ಅಗತ್ಯವಿರುವ ಭೂಮಿಯನ್ನು ಪಟ್ಟಣ ಪಂಚಾಯಿತಿಯ ವತಿಯಿಂದ ಮಂಡಳಿಗೆ ಹಸ್ತಾಂತರಿಸಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಹಾಗೂ ಯೋಜನೆಯನ್ನು ಕಾರ್ಯಗತ ಮಾಡುವ ಸಮಯದಲ್ಲಿ ದರಗಳ ಹೆಚ್ಚಳಗಳಿಂದ ಹಾಗೂ ಇನ್ನಿತರ ಕಾರಣಗಳಿಂದ ಅಂದಾಜು ಮೊತ್ತದಲ್ಲಿ ಪರಿಷ್ಕರಣೆ ಉಂಟಾದಲ್ಲಿ ಸ್ಥಳೀಯ ಸಂಸ್ಥೆಯೇ ಭರಿಸಲು ಒಪ್ಪಿರುವ ಹಿನ್ನೆಲೆಯಲ್ಲಿ ಹೆಚ್ಚುವರಿ ಮೊತ್ತವನ್ನು ಸ್ಥಳೀಯ ಸಂಸ್ಥೆಯಿಂದ ಪಡೆಯುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ವಸತಿ ಕಾನೂನು ಮತ್ತು ನಗರಾಭಿವೃದ್ಧಿ ಇಲಾಖೆ ರವರ ಟಿಪ್ಪಣಿ ಸಂಖ್ಯೆ: ವನಇ 148 ಆಂಆಸ 2012 ದಿನಾಂಕ: 28.03.2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವರಾವ್**

ಪಿ.ಆರ್. 1070

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ವಸತಿ ಸಚಿವಾಲಯ

**ವಿಷಯ :** ಶಿಕಾರಿಪುರ ಪಟ್ಟಣದ ವಿವಿಧ ಕೊಳಚೆ ಪ್ರದೇಶಗಳಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ವಇ 33 ಕೊಮಂಲೆ 2010, ದಿ: 03–02–2011.

2) ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ರವರ ಪತ್ರ ಸಂಖ್ಯೆ: ಕಕೊನಿಮ/ ಆಯುಕ್ತರು/ ಶಿಕಾರಿಪುರ– ಅಭಿವೃದ್ಧಿ/2011–12/369. ದಿನಾಂಕ: 12–09–2011.

3) ಸರ್ಕಾರದ ಆದೇಶ ಸಂಖ್ಯೆ: ವಇ 33 ಕೊಮಂಲೆ 2010, ದಿ:15–03–2012.

4) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 191 ವೆಚ್ಚ–9/2012, ದಿನಾಂಕ: 29–03–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಶಿಕಾರಿಪುರ ಪಟ್ಟಣದ ಘೋಷಿತ 08 ಕೊಳಚೆ ಪ್ರದೇಶಗಳಲ್ಲಿ ರಸ್ತೆ, ಚರಂಡಿ, ಅಡ್ಡಮೋರಿ ಮತ್ತು ತಡೆಗೋಡೆ ಕಾಮಗಾರಿಗಳನ್ನು ಕೈಗೊಳ್ಳಲು ₹5.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (2) ರಲ್ಲಿ ಆಯುಕ್ತರು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರು ಶಿಕಾರಿಪುರ ಪಟ್ಟಣದ ಘೋಷಿತ ಕೊಳಚೆ ಪ್ರದೇಶಗಳಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಬಾಕಿ ಬಿಡುಗಡೆ ಮಾಡಬೇಕಾಗಿರುವ ₹10.00 ಕೋಟಿಗಳ ಅನುದಾನ ಬಿಡುಗಡೆ ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಕ್ರಮ ಸಂಖ್ಯೆ (3) ರ ಸರ್ಕಾರದ ಆದೇಶದಲ್ಲಿ ಶಿಕಾರಿಪುರ ಪ್ಪಟಣದ ಘೋಷಿತ 08 ಕೊಳಚೆ ಪ್ರದೇಶಗಳಲ್ಲಿ ರಸ್ತೆ, ಚರಂಡಿ, ಅಡ್ಡಮೋರಿ ಮತ್ತು ತಡೆಗೋಡೆ ಕಾಮಗಾರಿಗಳನ್ನು ಕೈಗೊಳ್ಳಲು ₹2.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.

ಕ್ರಮ ಸಂಖ್ಯೆ (4)ರಲ್ಲಿ ಆರ್ಥಿಕ ಇಲಾಖೆಯು 2011–12ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2216–03–800–0–08–133 (ಯೋಜನೆ) Ashraya SDP ಯಡಿ ಉಳಿತಾಯವಾಗಿರುವ ರೂ. 800.00 ಲಕ್ಷಗಳ ಅನುದಾನವನ್ನು ಕೊಳಚೆ ಸುಧಾರಣೆ ಯೋಜನೆಯಡಿ ಮರು ಹೊಂದಾಣಿಕೆ ಮಾಡುವ ಪ್ರಸ್ತಾಪಿತ ವಿಷಯದ ಮೇಲೆ ಕ್ರಮ ತೆಗೆದುಕೊಂಡು ಸರ್ಕಾರಿ ಆದೇಶ ಸಂಖ್ಯೆ: ಆಇ 452 ಬಿಆರ್‌ಎಸ್ 2011, ದಿನಾಂಕ: 29–03–2012 ರಂದು ಆದೇಶವನ್ನು ಹೊರಡಿಸಲಾಗಿದೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 33 ಕೊಮಂಲೆ 2010 ಬೆಂಗಳೂರು, ದಿನಾಂಕ: 30–03–2012**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಶಿಕಾರಿಪುರ ಪಟ್ಟಣದ ಘೋಷಿತ ಕೊಳಚೆ ಪ್ರದೇಶಗಳಲ್ಲಿ ಅಭಿವೃದ್ಧಿ ಕಾಮಗಾರಿಗಳಾದ ರಸ್ತೆ, ಚರಂಡಿ, ಅಡ್ಡಮೋರಿ ಮತ್ತು ತಡೆಗೋಡೆ ಕಾಮಗಾರಿಗಳನ್ನು 08 ಕೊಳಚೆ ಪ್ರದೇಶದಲ್ಲಿ ಕೈಗೊಳ್ಳಲು ₹8.00 ಕೋಟಿಗಳ (ಎಂಟು ಕೋಟಿ ರೂ. ಗಳು ಮಾತ್ರ) ಬಿಡುಗಡೆ ಮಾಡಿದ್ದು, ಸದರಿ ಮೊತ್ತವನ್ನು 2011–12ನೇ ಸಾಲಿನ ಲೆಕ್ಕಶೀರ್ಷಿಕೆ 2217–04–191–2–02–106 ಯಡಿಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ಈ ಅನುದಾನವನ್ನು ಈ ಕೆಳಕಂಡ ನಿಬಂಧನೆಗೊಳಪಟ್ಟು ಬಿಡುಗಡೆಗೊಳಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 191 ವೆಚ್ಚ–9/2012, ದಿನಾಂಕ: 29–03–2012ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1071

**ಜಿ.ಆರ್ ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

## ವಸತಿ ಸಚಿವಾಲಯ

**ವಿಷಯ :** ತೇರದಾಳ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.–

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಂ 1999 ದಿನಾಂಕ: 10.05.2000.

2) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಸ್ 2008, ದಿನಾಂಕ: 31.12.2008.

3) ಶ್ರೀ ಸಿದ್ದು ಸವದಿ, ಮಾನ್ಯ ಸರ್ಕಾರಿ ಮುಖ್ಯ ಸಚೇತಕರು, ಕರ್ನಾಟಕ ವಿಧಾನ ಸಭೆ ಇವರ ಪತ್ರ ದಿನಾಂಕ 19–01–2012.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಬಾಗಲಕೋಟೆ ಜಿಲ್ಲೆಯ, ತೇರದಾಳ ನಗರ ಆಶ್ರಯ ಸಮಿತಿಗೆ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಅಧಿಕಾರೇತರ ಸದಸ್ಯರನ್ನು ನೇಮಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ (3)ರ ಪತ್ರದಲ್ಲಿ ಸದರಿ

ಸಮಿತಿಯಲ್ಲಿ ಶ್ರೀ ಭರಮಪ್ಪ ಭೀಮಪ್ಪ ಬಜಂತ್ರಿ ಇವರು ಮರಣ ಹೊಂದಿದ್ದು, ಸದರಿಯವರ ಸ್ಥಾನಕ್ಕೆ ಶ್ರೀ ಮಾರುತಿ ಭರಮಪ್ಪ ವಾಜಂತ್ರಿ ಸಾ: ತೇರದಾಳ ಇವರನ್ನು ತೇರದಾಳ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರಾಗಿ ನಾಮ ನಿರ್ದೇಶನ ಮಾಡಿ ನೇಮಿಸುವಂತೆ ಕೋರಿದ್ದು, ಅದರಂತೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ವಇ 53 ಹೆಚ್‌ಎಎಸ್ 2012, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2012**

ತೇರದಾಳ ಪಟ್ಟಣ ಆಶ್ರಯ ಸಮಿತಿಗೆ ಈ ಮೊದಲು ನೇಮಿಸಿದ್ದ ಅಧಿಕಾರೇತರ ಸದಸ್ಯರಾದ ಶ್ರೀ ಭರಮಪ್ಪ ಭೀಮಪ್ಪ ಬಜಂತ್ರಿ (ಪ.ಜಾ) ಇವರ ಸ್ಥಾನಕ್ಕೆ ಶ್ರೀ ಮಾರುತಿ ಭರಮಪ್ಪ ವಾಜಂತ್ರಿ ಸಾ: ತೇರದಾಳ (ಪ.ಜಾ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1072

**ಬಿ. ಶಂಕರಪ್ಪ**

ಪೀಠಾಧಿಕಾರಿ–2, ವಸತಿ ಇಲಾಖೆ.

## ವಸತಿ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ವಿಜಯಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನಾಮನಿರ್ದೇಶಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ: 10.05.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ಬೆಂಗಳೂರು ಗ್ರಾಮಾಂತರ ಜಿಲ್ಲೆ ವಿಜಯಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ವಇ 21 ಹೆಚ್‌ಎಎಸ್ 2012, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2012**

ಬೆಂಗಳೂರು ಗ್ರಾಮಾಂತರ ಜಿಲ್ಲೆ ವಿಜಯಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ರಾಮಕೃಷ್ಣಮೂರ್ತಿ ಬಿನ್ ಆರ್. ಸತ್ಯನಾರಾಯಣಮೂರ್ತಿ, ಸುಜ್ಞಾನನಗರ, ವಿಜಯಪುರ | ಸಾಮಾನ್ಯ |
| 2 | ಶ್ರೀ ಬಲಮುರಿ ಶ್ರೀನಿವಾಸ ಬಿನ್ ಗೋಪಾಲಪ್ಪ, 18ನೇ ವಾರ್ಡ್, ವಿಜಯಪುರ | ಹಿ.ವರ್ಗ |
| 3 | ಶ್ರೀ ಎನ್. ವೆಂಕಟೇಶ್ ಬಿನ್ ನಾರಾಯಣಸ್ವಾಮಿ 12ನೇ ವಾರ್ಡ್, ದುರ್ಗಮ್ಮ ಕಾಲೋನಿ, ವಿಜಯಪುರ | ಎಸ್.ಸಿ. |
| 4 | ಶ್ರೀಮತಿ ನಸೀಮಾ ಬಾನು ಕೋಂ. ಇಕ್ಬಾಲ್ ಅಹಮದ್ ವೆಂಕಟರಮಣ ಸ್ವಾಮಿ ಬೀದಿ, ವಿಜಯನಗರ ಟೌನ್. | ಅ.ಸಂ. (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1073

**ಬಿ. ಶಂಕರಪ್ಪ**

ಪೀಠಾಧಿಕಾರಿ–2, ವಸತಿ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ** :– ಶ್ರೀ ಶ್ರೀನಿವಾಸ ಬಾಬುರಾವ್ ಕುಲಕರ್ಣಿ, ಪ್ರಥಮ ದರ್ಜೆ ಸಹಾಯಕ, ಉಪ ಖಜಾನೆ, ಸಿಂದಗಿ ಬಿಜಾಪುರ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ** :– ಅಪರ ನಿಬಂಧಕರು, ವಿಚಾರಣೆಗಳು–8 ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. : ಕಂಪ್ಲೇಂಟ್/ಉಪಲೋಕ್/ಬಿಜಿಎಂ–774/2006/ಎಆರ್ಇ 8/ದಿನಾಂಕ : 12–03–2012 ಮತ್ತು ಉಪ ಲೋಕಾಯುಕ್ತರ–1 ಕರ್ನಾಟಕ ರಾಜ್ಯ ಇವರ ವರದಿ ದಿನಾಂಕ : 01–03–2012.

**ಪ್ರಸ್ತಾವನೆ:–**

ಅಪರ ನಿಬಂಧಕರು, ವಿಚಾರಣೆಗಳು–8 ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 12–03–2012ರ ಪತ್ರದೊಂದಿಗೆ ಕಳುಹಿಸಿರುವ ಉಪ ಲೋಕಾಯುಕ್ತರು–1 ರವರು ದಿನಾಂಕ : 01–03–2012ರ ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ನಿಯಮ 12(3)ರ ಅಡಿಯಲ್ಲಿ ನೀಡಿರುವ ವರದಿಯಲ್ಲಿ ಶ್ರೀ ಶ್ರೀನಿವಾಸ ಬಾಬುರಾವ್ ಕುಲಕರ್ಣಿ, ಪ್ರಥಮ ದರ್ಜೆ ಸಹಾಯಕ, ಖಜಾನೆ ಇಲಾಖೆ, ಅವರು ಉಪ ಖಜಾನೆ, ಸಿಂದಗಿ, ಬಿಜಾಪುರ ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀ ಬಾಪುಗೌಡ ರಾಯನಗೌಡ ಪಾಟೀಲರವರ ಹೆಂಡತಿ ಶ್ರೀಮತಿ ಮಹಾದೇವಿ, ಸಹ ಶಿಕ್ಷಕಿ ಇವರ ಸಂಬಳದ ಬಿಲ್ಲನ್ನು ಪಾಸು ಮಾಡಿ ಚೆಕ್ ವಿತರಿಸಲು ರೂ. 1000/–ಗಳ ಲಂಚ ಕೇಳಿ ಅದನ್ನು ಪಡೆಯುತ್ತಿದ್ದಾಗಲೇ ದಿನಾಂಕ : 19–01–2006 ರಂದು ಕರ್ನಾಟಕ ಲೋಕಾಯುಕ್ತರ ಪೊಲೀಸ್ ಬಲೆಗೆ ಸಿಕ್ಕಿಬಿದ್ದಿದ್ದು ಈ ಬಗ್ಗೆ ನಡೆದ ಮುಂದಿನ ತನಿಖೆಯಿಂದಾಗಿ ಸಂಗ್ರಹವಾಗಿರುವ ಸಂಗತಿಗಳು, ಮಾಹಿತಿ, ದಾಖಲೆ ಆಧಾರಗಳಿಂದ ಸದರಿ ನೌಕರರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1)ರಡಿಯಲ್ಲಿ ಉಕ್ತವಾದ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಸ್ಥಿರಪಟ್ಟಿದ್ದು ಸದರಿ ದುರ್ನಡತೆ ಸಂಬಂಧದಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಇಲಾಖಾ ವಿಚಾರಣಾ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರನ್ವಯ ಪ್ರಕರಣವನ್ನು ಉಪ ಲೋಕಾಯುಕ್ತಕ್ಕೆ ವಹಿಸುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಪ್ರಕರಣವನ್ನು ಪೂರ್ಣ ಪ್ರಮಾಣದ ವಿಚಾರಣೆಗಾಗಿ ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 51 ಅಖಇ 2012, ಬೆಂಗಳೂರು, ದಿನಾಂಕ: 18–04–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಶ್ರೀನಿವಾಸ ಬಾಬುರಾವ್ ಕುಲಕರ್ಣಿ, ಪ್ರಥಮ ದರ್ಜೆ ಸಹಾಯಕ, ಖಜಾನೆ ಇಲಾಖೆ ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ನಡೆಯಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಎಲ್. ರಮೇಶ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 1339 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ** :– ಶ್ರೀ ಎಂ. ಅಶೋಕ್ ಕುಮಾರ್, ಅಪರ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಹಿಂದಿನ ಸೇವೆಯನ್ನು ಪಿಂಚಣಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ** :– ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ : ಸಿಎಸ್ಎ 403, ಎಸ್‌ಪಿಎಫ್ 2011/7264, ದಿನಾಂಕ : 08–03–2012.

**ಪ್ರಸ್ತಾವನೆ:–**

ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಎಂ. ಅಶೋಕ್ ಕುಮಾರ್, ಅಪರ ನಿಯಂತ್ರಕರು, ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ಸಹಾಯಕ ನಿಯಂತ್ರಕರಾಗಿ ಆಯ್ಕೆಗೊಂಡು ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ದಿನಾಂಕ : 21–12–1982 ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇವೆಗೆ ಸೇರುವ ಮುನ್ನ ದಿನಾಂಕ : 15–06–1978 ರಿಂದ 30–12–1982 ರವರೆಗೆ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಸಹಾಯಕ ಉದ್ಯೋಗಾಧಿಕಾರಿಯಾಗಿ ಸೇವೆ ಸಲ್ಲಿಸಿದ್ದು, ಸದರಿ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 224(ಬಿ)ರನ್ವಯ ಪಿಂಚಣಿ ಸೌಲಭ್ಯಗಳಿಗಾಗಿ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲು ಪ್ರಸ್ತಾವನೆ ಸಲ್ಲಿಸಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 97 ರಾಲೆಪ 2012, ಬೆಂಗಳೂರು, ದಿನಾಂಕ: 18–04–2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಶ್ರೀ ಎಂ. ಅಶೋಕ್ ಕುಮಾರ್, ಅಪರ ನಿಯಂತ್ರಕರು, ಇವರು ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇರುವ ಪೂರ್ವದಲ್ಲಿ ದಿನಾಂಕ : 15–06–1978 ರಿಂದ 30–12–1982 ರವರೆಗೆ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಸಹಾಯಕ ಉದ್ಯೋಗಾಧಿಕಾರಿಯಾಗಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 224(ಬಿ)ರನ್ವಯ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಎಲ್. ರಮೇಶ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 1340 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**ಕಂದಾಯ ಸಚಿವಾಲಯ**

**ವಿಷಯ** :– ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು, ಯಲ್ಲದಕೆರೆ ಗ್ರಾಮದ ವಿವಿಧ ಸರ್ವೆ ನಂಬರುಗಳ ಒಟ್ಟು 440–05 ಎಕರೆ ಸರ್ಕಾರಿ ಜಮೀನನ್ನು ಮೆ. ಟ್ರಾನ್ಸ್ ಇಂಡಿಯಾ ಶಿಪ್ಪಿಂಗ್ ಸರ್ವೀಸಸ್ ಪ್ರೈ ಲಿ., ರವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** :– ಪತ್ರ ಸಂಖ್ಯೆ : ಎಲ್‌ಎನ್‌ಡಿ/ಸಿಆರ್/198/08–09, ದಿನಾಂಕ : 19–01–2011.

**ಪ್ರಸ್ತಾವನೆ:–**

ಜಿಲ್ಲಾಧಿಕಾರಿ, ಚಿತ್ರದುರ್ಗ ಇವರು ಮೇಲೆ ಓದಲಾದ ಪತ್ರದಲ್ಲಿ ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು, ಯಲ್ಲದಕೆರೆ ಗ್ರಾಮದ ವಿವಿಧ ಸರ್ವೆ ನಂಬರುಗಳ ಒಟ್ಟು 440–05 ಎಕರೆ ಸರ್ಕಾರಿ ಜಮೀನನ್ನು ಮೆ. ಟ್ರಾನ್ಸ್ ಇಂಡಿಯಾ ಶಿಪ್ಪಿಂಗ್ ಸರ್ವೀಸಸ್ ಪ್ರೈ. ಲಿಮಿಟೆಡ್., ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆ ಪ್ರಕಾರ ಮೆ. ಟ್ರಾನ್ಸ್ ಇಂಡಿಯಾ ಶಿಪ್ಪಿಂಗ್ ಸರ್ವೀಸಸ್ ಪ್ರೈ ಲಿ., ಇವರಿಗೆ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಜಮೀನು ಮೂಲತಃ ಸೇಂದಿವನ ಜಮೀನಾಗಿದ್ದು ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 59/ಎಲ್‌ಜಿಪಿ/2000, ದಿನಾಂಕ : 22–02–2003ರ ಆದೇಶದನ್ವಯ ಕಂದಾಯ ಇಲಾಖೆಗೆ ವರ್ಗಾವಣೆಯಾಗಿತ್ತು. ಪ್ರಶ್ನಿತ ಜಮೀನುಗಳು ಖಿಲ್ಲಾ ಇದ್ದು ಬೆಲೆ ಬಾಳುವ ಮರಗಿಡಗಳು ಇರುವುದಿಲ್ಲ. ಅನಧಿಕೃತ ಕಟ್ಟಡಗಳಿರುವುದಿಲ್ಲ ಅಧಿಕ ಪ್ರಸರಣದ ವಿದ್ಯುತ್ ಮಾರ್ಗ ಹಾದು ಹೋಗಿರುವುದಿಲ್ಲ. ಅದಲ್ಲದೆ ಜಮೀನು ಮಂಜೂರಾತಿಗೆ ಗ್ರಾಮಸ್ಥರ ಆಕ್ಷೇಪಣೆ ಇರುವುದಿಲ್ಲ.

ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯವರು ಹೊರಡಿಸಿರುವ ದಿನಾಂಕ : 5–6–2009ರ ಅಧಿಸೂಚನೆಯಲ್ಲಿ ಯಲ್ಲದಕೆರೆ ಗ್ರಾಮದ ಸ.ನಂ. 228, 229, 231, 232, 234 ಮತ್ತು 236ರ ಒಟ್ಟು ವಿಸ್ತೀರ್ಣ 531.21 ಎಕರೆ ಸರ್ಕಾರಿ ಜಮೀನನ್ನು ಕೈಗಾರಿಕಾ ಪ್ರದೇಶವೆಂದು ಘೋಷಿಸಲಾಗಿದ್ದು ಮೆ: ಟ್ರಾನ್ಸ್ ಇಂಡಿಯಾ ಶಿಪ್ಪಿಂಗ್ ಸರ್ವೀಸಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು, ಯಲ್ಲದಕೆರೆ ಗ್ರಾಮದಲ್ಲಿ 0.5

ಎಂ.ಟಿ.ಪಿ.ಎ. ಸ್ಟೀಲ್ ಪ್ಲಾಂಟ್ ಮತ್ತು 72 ಎಂಡಬ್ಲ್ಯೂ ಕ್ಯಾಪ್ಟೀವ್ ಪವರ್ ಪ್ಲಾಂಟ್ ಸ್ಥಾಪಿಸುವ ಸಲುವಾಗಿ ಅನುಮತಿ ನೀಡಲು ದಿನಾಂಕ : 19–06–2010ರಂದು ನಡೆದ ರಾಜ್ಯ ಉನ್ನತ ಮಟ್ಟದ ಸಮಿತಿಯಲ್ಲಿ ತೀರ್ಮಾನಿಸಲಾಗಿದೆ.

ದಿನಾಂಕ : 19–06–2010 ರಂದು ರಾಜ್ಯ ಉನ್ನತ ಮಟ್ಟದ ಸಮಿತಿಯ ನಿರ್ಣಯದ ಹಾಗೂ ಆದೇಶ ಸಂಖ್ಯೆ : ಸಿಐ 373 ಎಸ್‌ಪಿಐ 2010, ದಿನಾಂಕ : 15–07–2010ರ ಪ್ರಕಾರ ಮೆ: ಟ್ರಾನ್ಸ್ ಇಂಡಿಯಾ ಶಿಪ್ಪಿಂಗ್ ಸರ್ವಿಸಸ್ ಪ್ರೈ ಲಿ., ಇವರಿಗೆ ಮಂಜೂರು ಮಾಡಬೇಕಾಗಿರುವುದರಿಂದ ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಮಂಜೂರು ಮಾಡುವ ಬದಲು ಕೆ.ಐ.ಎ.ಡಿ.ಬಿ.ರವರಿಗೆ ವರ್ಗಾಯಿಸಬೇಕೆಂದು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಕೋರಿರುತ್ತದೆ.

ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು, ಯಲ್ಲದಕೆರೆ ಗ್ರಾಮದ ಸ.ನಂ. 228/ಪಿ ರಲ್ಲಿ 90.33 ಎಕರೆ, 229/ಪಿ ರಲ್ಲಿ 67.17 ಎಕರೆ, 230/ಪಿ ರಲ್ಲಿ 98.32 ಎಕರೆ 231/ಪಿ ರಲ್ಲಿ 61.01 ಎಕರೆ 232/ಪಿ ರಲ್ಲಿ 80.36 ಎಕರೆ 236/ಪಿ ರಲ್ಲಿ 41.06 ಎಕರೆ ಒಟ್ಟು 440.05 ಎಕರೆ ಜಮೀನನ್ನು ಸದರಿ ಪ್ರಚಲಿತ ಮಾರುಕಟ್ಟೆ ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969)ರ ನಿಯಮ 22 ರನ್ವಯ ಕೈಗಾರಿಕಾ ಉದ್ದೇಶಕ್ಕಾಗಿ ಮೆ: ಟ್ರಾನ್ಸ್ ಇಂಡಿಯಾ ಶಿಪ್ಪಿಂಗ್ ಸರ್ವಿಸಸ್ ಪ್ರೈ. ಲಿ., ಇವರಿಗೆ ಕೆ.ಐ.ಎ.ಡಿ.ಬಿ.ರವರ ಮೂಲಕ ಮಂಜೂರು ಮಾಡಬಹುದೆಂದು ದಿನಾಂಕ : 19–06–2010 ರಂದು ನಡೆದ ಉನ್ನತ ಮಟ್ಟದ ಸಮಿತಿಯು ಶಿಫಾರಸ್ಸು ಮಾಡಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 102 ಎಲ್‌ಜಿಸಿ 2010, ಬೆಂಗಳೂರು, ದಿನಾಂಕ: 30–04–2012**

ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು, ಯಲ್ಲದಕೆರೆ ಗ್ರಾಮದ ಸ.ನಂ.228/ಪಿ ರಲ್ಲಿ 90.33 ಎಕರೆ, 229/ಪಿ ರಲ್ಲಿ 67.17 ಎಕರೆ, 230/ಪಿ ರಲ್ಲಿ 98.32 ಎಕರೆ 231/ಪಿ ರಲ್ಲಿ 61.01 ಎಕರೆ 232/ಪಿ ರಲ್ಲಿ 80.36 ಎಕರೆ 236/ಪಿ ರಲ್ಲಿ 41.06 ಎಕರೆ ಒಟ್ಟು 440.05 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 22ರಡಿ ಕೆ.ಐ.ಎ.ಡಿ.ಬಿ ರವರ ಮೂಲಕ ಮೆ: ಟ್ರಾನ್ಸ್ ಇಂಡಿಯಾ ಶಿಪ್ಪಿಂಗ್ ಸರ್ವಿಸಸ್ ಪ್ರೈ. ಲಿಮಿಟೆಡ್, ಬೆಂಗಳೂರು ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರ ಹಾಗೂ ನಿಯಮಗಳನ್ವಯ ಇತರೆ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಲಾಗಿದೆ.

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವಿಧಿಸುವ ಷರತ್ತುಗಳನ್ನು ಸಹ ಪಾಲಿಸತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ : ಆಇ/644/ವೆಚ್ಚ–7/2011, ದಿನಾಂಕ : 23–07–2011 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಜೆ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–3)

ಪಿ.ಆರ್. ನಂ. 1347

## ಒಳಾಡಳಿತ ಸಚಿವಾಲಯ

**ವಿಷಯ** :– ನ್ಯಾಯಮೂರ್ತಿ ಶ್ರೀ ಆರ್. ಜಿ. ವೈದ್ಯನಾಥ ವಿಚಾರಣಾ ಆಯೋಗಕ್ಕೆ ಹಣ ಬಿಡುಗಡೆ.

**ಓದಲಾಗಿದೆ :–** 1) ದಿನಾಂಕ : 09–03–2012ರ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 04 ಪಿಸಿಇ 2012.

2) ದಿನಾಂಕ : 09–04–2012ರ ಸಮ ಸಂಖ್ಯೆಯ ಸರ್ಕಾರಿ ಆದೇಶ.

3) ಕಾರ್ಯದರ್ಶಿ, ನ್ಯಾಯಮೂರ್ತಿ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗರವರ ಪತ್ರ ಸಂಖ್ಯೆ : ಆರ್‌ಜಿವಿಸಿ 44/2012, ದಿನಾಂಕ : 04–05–2012.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ದಿನಾಂಕ : 02–03–2012 ರಂದು ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೋಲಿಸರ ನಡುವೆ ನಡೆದ ಘರ್ಷಣೆಯ ಕುರಿತು ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ, ನಿವೃತ್ತ ನ್ಯಾಯಾಧೀಶರು ಇವರ ನೇತೃತ್ವದಲ್ಲಿ ಏಕ ಸದಸ್ಯ ವಿಚಾರಣಾ ಆಯೋಗವನ್ನು ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ, ವಿಚಾರಣಾ ಆಯೋಗದವರು ಸದರಿ ಆಯೋಗದ ಖರ್ಚು–ವೆಚ್ಚಗಳನ್ನು ಭರಿಸಲು ಅನುಕೂಲವಾಗುವಂತೆ ಪ್ರಾರಂಭಿಕವಾಗಿ ರೂ. 8,00,000/– (ರೂಪಾಯಿ ಎಂಟು ಲಕ್ಷಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲಾಗಿತ್ತು. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗ ಅವರು ಆಯೋಗವು ಪ್ರಾರಂಭಿಕ ಕಾರ್ಯ ಚಾಲನೆ ಮಾಡಿದ್ದು, ತತ್ಸಂಬಂಧ ಹೆಚ್ಚುವರಿ ರೂ. 30,00,000/– (ರೂಪಾಯಿ ಮೂವತ್ತು ಲಕ್ಷಗಳು ಮಾತ್ರ) ಗಳನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 04 ಪಿಸಿಇ 2012, ಬೆಂಗಳೂರು, ದಿನಾಂಕ: 09–05–2012**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ನ್ಯಾಯಮೂರ್ತಿ ಶ್ರೀ ಆರ್. ಜಿ. ವೈದ್ಯನಾಥ, ವಿಚಾರಣಾ ಆಯೋಗಕ್ಕೆ ತನ್ನ ಸಹಾಯಕ ಸಿಬ್ಬಂದಿಯ ವೇತನ, ಪ್ರಾಸಂಗಿಕ ಖರ್ಚು–ವೆಚ್ಚ ಹಾಗೂ ಲೇಖನ ಸಾಮಗ್ರಿಗಳು ಮತ್ತು ಇತರೆ ಸಾಮಗ್ರಿಗಳನ್ನು ಖರೀದಿಸಲು ಅನುಕೂಲವಾಗುವಂತೆ 2012–2013ನೇ ಸಾಲಿನ ಆರ್ಥಿಕ ವರ್ಷಕ್ಕೆ ಸಂಬಂಧಿಸಿದಂತೆ ರೂ. 15,00,000/– (ರೂಪಾಯಿ ಹದಿನೈದು ಲಕ್ಷಗಳು ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ಇತರ ವಿಚಾರಣಾ ಆಯೋಗ"** ಅಡಿಯಲ್ಲಿ ಭರಿಸುವಂತೆ ಹೆಚ್ಚುವರಿ ಹಣವನ್ನು ಬಿಡುಗಡೆ ಮಾಡಲಾಗಿದೆ.

ಸದರಿ ಆಯೋಗದಲ್ಲಿ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸುವ ಅಧಿಕಾರಿಯನ್ನು ಹಣವನ್ನು ಹಿಂತೆಗೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ಸಹ ನೇಮಿಸಿದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ : 10–07–1996 ರಲ್ಲಿ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 1348 ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** :– ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ಹಾಗೂ ಮಂಡ್ಯ ತಾಲ್ಲೂಕು ಕೆ.ಡಿ.ಪಿ.ಗೆ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ** :– 1) ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ : 07–08–1995.

2) ಉಪಾಧ್ಯಕ್ಷರು, ಭಾರತೀಯ ಜನತಾ ಪಾರ್ಟಿ ಬೆಂಗಳೂರು, ಇವರ ಪತ್ರದ ಸಂಖ್ಯೆ ರಾಕಾ/ನಾನಿ/180/2012, ದಿನಾಂಕ : 30–01–2012 ಹಾಗೂ ಸಂಖ್ಯೆ : ರಾಕಾ/ನಾನಿ/213/2012, ದಿನಾಂಕ : 13–02–2012.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ದಿನಾಂಕ : 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಪತ್ರಗಳಲ್ಲಿ ಉಪಾಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು, ಇವರ ಶಿಫಾರಸ್ಸಿನ ಮೇರೆಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ಹಾಗೂ ಮಂಡ್ಯ ತಾಲ್ಲೂಕು ಕೆ.ಡಿ.ಪಿ.ಗೆ ತಾಲ್ಲೂಕು ಮಟ್ಟದ ತಾಲ್ಲೂಕಿನ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮ ನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 71 ಯೋವಿವಿ 2009, ಬೆಂಗಳೂರು, ದಿನಾಂಕ: 07–05–2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ಹಾಗೂ ಮಂಡ್ಯ ತಾಲ್ಲೂಕು ಕೆ.ಡಿ.ಪಿ.ಗೆ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಕೆಳಕಂಡ ಆರು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲಾಗಿದೆ.

**ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕು ಕೆಡಿಪಿಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ನಿಂಗೇಗೌಡ ಬಿನ್ ತಿಬ್ಬೇಗೌಡ, ದೇವೇಗೌಡನ ಕೊಪ್ಪಲು, ಪಾಂಡವಪುರ ತಾಲ್ಲೂಕು | ಸಾಮಾನ್ಯ |
| 2. | ಶ್ರೀಮತಿ ವನಜಾಕ್ಷಿ ಕೋಂ ಅಂಕೇಗೌಡ, ಚಿನಕುರುಳಿ, ಪಾಂಡವಪುರ ತಾಲ್ಲೂಕು | ಮಹಿಳೆ |
| 3. | ಶ್ರೀ ಜಿ. ಮಂಜುನಾಥ್ ಬಿನ್ ಗುರುಲಿಂಗೇಗೌಡ, ತಿಮ್ಮನಕೊಪ್ಪಲು, ಪಾಂಡವಪುರ ತಾಲ್ಲೂಕು | ಸಾಮಾನ್ಯ |
| 4. | ಶ್ರೀ ಪುಟ್ಟರಾಜು ಬಿನ್ ಕಾಳಯ್ಯ, ಕಡಬ, ಪಾಂಡವಪುರ ತಾಲ್ಲೂಕು | ಎಸ್. ಸಿ. |
| 5. | ಶ್ರೀ ಎ. ಸಗಾಯ್ ರಾಜ್ ಬಿನ್ ಆರೋಕ್ಯ ಸ್ವಾಮಿ, ಪಾಂಡವಪುರ | ಎಸ್.ಸಿ. |
| 6. | ಶ್ರೀ ಕೃಷ್ಣೇಗೌಡ ಬಿನ್ ಕಾಳೇಗೌಡ, ಚಿಕ್ಕಾಡೆ, ಪಾಂಡವಪುರ ತಾಲ್ಲೂಕು | ಹಿಂ.ವರ್ಗ |

**ಮಂಡ್ಯ ತಾಲ್ಲೂಕು ಕೆಡಿಪಿ ಸಮಿತಿಗೆ**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ಹೆಚ್.ಎಸ್.ನವೀನ್‌ಕುಮಾರ್ ಬಿನ್ ಲೇ. ಶಂಕರೇಗೌಡ, ಹುಚ್ಚಲಗೆರೆ, ಕನ್ನಲಿ ಅಂಚೆ, ಮಂಡ್ಯ ತಾಲ್ಲೂಕು | ಸಾಮಾನ್ಯ |
| 2. | ಶ್ರೀ ದೇವರಾಜೇಗೌಡ ಬಿನ್ ಪೂಟಾಸಿಗೌಡ, ಕಲ್ಮಂಟಿದೊಡ್ಡಿ, ಕೆರಗೋಡು ಅಂಚೆ, ಮಂಡ್ಯ ತಾಲ್ಲೂಕು | ಸಾಮಾನ್ಯ |
| 3. | ಶ್ರೀ ರಾಮಯ್ಯ ಬಿನ್ ಲಕ್ಕಯ್ಯ, ಕೀಲಾರ ಗ್ರಾಮ & ಅಂಚೆ, ಮಂಡ್ಯ ತಾಲ್ಲೂಕು | ಎಸ್.ಸಿ. |
| 4. | ಶ್ರೀಮತಿ ಪುಣ್ಯವತಿ ಕೋಂ ಬಸವರಾಜಪ್ಪ, ಬಸರಾಳು ಗ್ರಾಮ & ಅಂಚೆ, ಮಂಡ್ಯ ತಾಲ್ಲೂಕು | ಮಹಿಳೆ |
| 5. | ಶ್ರೀ ವರದರಾಜು ಬಿನ್ ಚನ್ನಯ್ಯ, ಮಾರಗೌಡನಹಳ್ಳಿ ಗ್ರಾಮ & ಅಂಚೆ, ಮಂಡ್ಯ ತಾಲ್ಲೂಕು | ಹಿಂ.ವರ್ಗ |
| 6. | ಶ್ರೀ ಎ.ಎಂ. ಜೋಸೆಫ್ ಬಿನ್ ಲೇ. ಎಸ್. ದಾಸ್, 1ನೇ ಕ್ರಾಸ್, ನೆಹರು ನಗರ, ಮಂಡ್ಯ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. ನಂ. 1350

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** :– ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ಸೃಜಿಸಲಾಗಿರುವ ಕಾನೂನು ಅಧಿಕಾರಿಗಳ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :–**
1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 408 ಸಅಸೇ 2008, ದಿನಾಂಕ : 06–09–2008.
2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 594 ಸಅಸೇ 2009, ದಿನಾಂಕ : 03–09–2009.
3) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 39 ಸಅಸೇ 2010, ದಿನಾಂಕ : 15–06–2011.
4) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 246 ಸಅಸೇ 2011, ದಿನಾಂಕ : 13–05–2011.
5) ಕಂದಾಯ ಇಲಾಖೆಯ ಕಡತ ಸಂಖ್ಯೆ : ಕಂಇ 26 ಭೂಸಾವ್ಯಾ 2008.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯಲ್ಲಿ 3 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ : 05–08–2008 ರಿಂದ ಜಾರಿಗೆ ಬರುವಂತೆ 1 ವರ್ಷದ ಅವಧಿಗೆ ಸೃಜಿಸಲಾಗಿದೆ. ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲೆ ಕ್ರಮಸಂಖ್ಯೆ (1)ರಲ್ಲಿ ಸೃಜಿಸಲಾದ 3 ಕಾನೂನು ಅಧಿಕಾರಿ ಹುದ್ದೆಗಳ ಪೈಕಿ 2 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ದಿನಾಂಕ : 5–8–2009 ರಿಂದ 31–3–2010 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಅದೇ ರೀತಿ ಕ್ರಮ ಸಂಖ್ಯೆ (3 ಮತ್ತು 4 ರಲ್ಲಿ) ದಿನಾಂಕ : 1–4–2010 ರಿಂದ 31–3–2012 ರವರೆಗೆ ಸದರಿ ಹುದ್ದೆಗಳನ್ನು ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಕಂದಾಯ ಇಲಾಖೆಯ ಕಡತದಲ್ಲಿ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ದಿನಾಂಕ : 31–3–2012 ರವರೆಗೆ ಮುಂದುವರೆಸಿರುವ 2 ಕಾನೂನು ಅಧಿಕಾರಿ ಹುದ್ದೆಗಳನ್ನು ಇನ್ನು ಒಂದು ವರ್ಷದವರೆಗೆ ಮುಂದುವರಿಸುವುದು ಅವಶ್ಯಕವಾಗಿರುವುದರಿಂದ, 2 ಕಾನೂನು ಅಧಿಕಾರಿ ಹುದ್ದೆಗಳನ್ನು ದಿನಾಂಕ : 1–4–2012 ರಿಂದ 31–3–2013 ರವರೆಗೆ ಮುಂದುವರೆಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 226 ಸಅಸೇ 2012, ಬೆಂಗಳೂರು, ದಿನಾಂಕ: 07–05–2012**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶದಲ್ಲಿ ದಿನಾಂಕ : 31–03–2012 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾದ 2 ಕಾನೂನು ಅಧಿಕಾರಿಗಳ ಹುದ್ದೆಗಳನ್ನು ದಿನಾಂಕ : 01–04–2012 ರಿಂದ ದಿನಾಂಕ : 31–03–2013ರ ವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಕೆ. ಲಕ್ಷ್ಮೀನಾರಾಯಣರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್. ನಂ. 1354

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ** :– 2012–13ನೇ ಸಾಲಿನ ಮುಂದುವರೆದ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :–** 1) ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 498 ಕಸಧ 2012, ದಿನಾಂಕ : 03–04–2012.

2) ಸರ್ಕಾರದ ತಿದ್ದುಪಡಿ ಸಂಖ್ಯೆ : ಕಸಂವಾಪ್ರ 498 ಕಸಧ 2012, ದಿನಾಂಕ : 30–04–2012.

3) ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಅ.ಸ.ಪ.ಸಂಖ್ಯೆ : ಕಸನಿ/24/ಲೆಕ್ಕ 4/2011–12, ದಿನಾಂಕ : 31–03–2012.

**ಪ್ರಸ್ತಾವನೆ:–**

ಓದಲಾದ (1) ಮತ್ತು (2)ರ ಆದೇಶಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2011–12ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು 2012–13ನೇ ಸಾಲಿನಲ್ಲಿ ಮುಂದುವರೆಸಲು ಮಂಜೂರಾತಿಯನ್ನು ನೀಡಲಾಗಿದೆ. ಓದಲಾದ (3)ರ ಪತ್ರದಲ್ಲಿ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು 2011–12ನೇ ಸಾಲಿನ ಮುಂದುವರೆದ ಕಾರ್ಯಕ್ರಮಗಳಿಗೆ 2012–13ನೇ ಸಾಲಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಒದಗಿಸಲಾಗಿರುವ ಅಂದಾಜುಗಳಿಗೆ ಕ್ರಿಯಾ ಯೋಜನೆ (ಯೋಜನೆ ಶೀರ್ಷಿಕೆಯಡಿ ರೂ. 13515.74 ಲಕ್ಷಗಳು ಹಾಗೂ ಯೋಜನೇತರ ಶೀರ್ಷಿಕೆಯಡಿ ರೂ. 2628.58 ಲಕ್ಷಗಳು) ಮುಂದುವರೆದ ಯೋಜನೆಗಳನ್ನು ಸಿದ್ಧಪಡಿಸಿ ಕಾರ್ಯಕ್ರಮಗಳನ್ನು ಜಾರಿಗೆ ತರಲು ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 498 ಕಸಧ 2012, ಬೆಂಗಳೂರು, ದಿನಾಂಕ: 30–04–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಿಸಿದಂತೆ 2012–13ನೇ ಸಾಲಿನಲ್ಲಿ ಹಮ್ಮಿಕೊಳ್ಳಲಾದ ಅನುಬಂಧದಲ್ಲಿ ಸೂಚಿಸಿರುವ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳಿಗೆ ಈ ಕೆಳಕಂಡ ಷರತ್ತುಗಳೊಂದಿಗೆ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

1. ಮುಂದುವರೆದ ಯೋಜನಾ ಕಾರ್ಯಕ್ರಮಗಳಲ್ಲಿ ಹೊಸ ಘಟಕಗಳ ಹಾಗೂ ಹುದ್ದೆಗಳ ಸೃಜನೆ ಇದ್ದಲ್ಲಿ, ಪ್ರತ್ಯೇಕವಾಗಿ ಮಂಜೂರಾತಿಯನ್ನು ಪಡೆಯುವುದು.
2. ಆರ್ಥಿಕ ಇಲಾಖೆಯ ಮಿತವ್ಯಯ ಆದೇಶಕ್ಕೆ ಒಳಪಟ್ಟು ಸಿಬ್ಬಂದಿ ಸೃಜನೆ, ವಾಹನ ಮತ್ತು ಪೀಠೋಪಕರಣಗಳ ಖರೀದಿ ಇವುಗಳಿಗೆ ಸಂಬಂಧಿಸಿದಂತೆ ಸರ್ಕಾರದ ಪೂರ್ವಾನುಮತಿ ಪಡೆದು ಕ್ರಮ ಕೈಗೊಳ್ಳುವುದು.
3. ಮುಂದುವರೆದ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಂದರ್ಭದಲ್ಲಿ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಟಿ.ಎಫ್.ಪಿ. 2010, ದಿನಾಂಕ : 30–04–2010 ರಲ್ಲಿ ಇಲಾಖಾ ಮುಖ್ಯಸ್ಥರಿಗೆ ಹಾಗೂ ಇನ್ನಿತರ ಕ್ಷೇತ್ರ ಅಧಿಕಾರಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ನಿಯಮಗಳು 2000ನ್ನು ಕಡ್ಡಾಯವಾಗಿ ಪಾಲಿಸುವುದು.
5. ಸಂಘ–ಸಂಸ್ಥೆಗಳಿಗೆ ಸಹಾಯಧನ ಬಿಡುಗಡೆ ಮಾಡುವ ಸಂದರ್ಭದಲ್ಲಿ ಹಾಲಿ ಇರುವ ಮಾರ್ಗಸೂಚಿ ಪ್ರಕಾರ ಪರಿಶೀಲಿಸಿ ಅನುದಾನ ಬಿಡುಗಡೆ ಮಾಡುವ ಬಗ್ಗೆ ಕ್ರಮ ಕೈಗೊಳ್ಳುವುದು.
6. ಪುಸ್ತಕ ಪ್ರಕಟಣೆ, ಖರೀದಿ ಮತ್ತು ಪ್ರೋತ್ಸಾಹ ಧನಕ್ಕೆ ಸಂಬಂಧಿಸಿದಂತೆ ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ ಪ್ರಕಾರ ಕ್ರಮ ಕೈಗೊಳ್ಳುವುದು.
7. ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಅನುದಾನ ಹಂಚಿಕೆ ಕುರಿತಂತೆ ನಡೆಯುವ ಸಭೆಯ ನಿರ್ಣಯದನ್ವಯ ಪೂಲ್ ಅಥವಾ ನಾನ್ ಪೂಲ್ ಅನುದಾನದ ಹಂಚಿಕೆ ಬಗ್ಗೆ ಹೊರಡಿಸುವ ಆದೇಶದನ್ವಯ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

ಪಿ.ಆರ್. ನಂ. 1358

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** :– ರಾಜ್ಯದ ಗ್ರಾಮ ಪಂಚಾಯತಿಗಳಲ್ಲಿ ಹೊಸದಾಗಿ ಸೃಜಿಸಿದ "ದ್ವಿತೀಯ ದರ್ಜೆ ಲೆಕ್ಕ ಸಹಾಯಕರ" ಹುದ್ದೆಗೆ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರವನ್ನು ನಿರ್ಧಿಷ್ಟಪಡಿಸುವ ಬಗ್ಗೆ.

**ಓದಲಾಗಿದೆ :–** 1) ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 569 ಗ್ರಾಪಂಅ 2006, ದಿನಾಂಕ : 31–03–2008.

2) ಸರ್ಕಾರದ ಅಧಿಸೂಚನೆ ಸಂಖ್ಯೆ : ಗ್ರಾಅಪ 181 ಗ್ರಾಪಂಕಾ 2011, ದಿನಾಂಕ : 31–03–2012.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 31–03–2008 ರ ಸರ್ಕಾರದ ಆದೇಶದಲ್ಲಿ ರಾಜ್ಯದ ಗ್ರಾಮ ಪಂಚಾಯಿತಿಗಳಲ್ಲಿ ವೇತನ ಶ್ರೇಣಿ ರೂ. 5,800–10,500 ರಲ್ಲಿ 2500 ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳನ್ನು ಸೃಜಿಸಲಾಗಿದೆ. ಈ ಹುದ್ದೆಗಳಿಗೆ ನೇಮಕಾತಿ ಮಾಡುವ ಬಗ್ಗೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಲಾಗಿದೆ.

ಈ ಹುದ್ದೆಗಳಿಗೆ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರವನ್ನು ನಿರ್ದಿಷ್ಟಪಡಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ಷೆಡ್ಯೂಲ್ (2)ರಲ್ಲಿ ಸೇರಿಸಿ ಆದೇಶ ಹೊರಡಿಸಬೇಕಿದೆ. ಆದರೆ ಈ ಹುದ್ದೆಗಳಿಗೆ ಜರೂರಾಗಿ ನೇರ ನೇಮಕಾತಿ

ಮಾಡುವ ಅವಶ್ಯಕತೆಯಿದ್ದು, ತಿದ್ದುಪಡಿ ಹೊರಡಿಸಲು ಸಾಕಷ್ಟು ಸಮಯಾವಕಾಶದ ಕೊರತೆಯಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ಷೆಡ್ಯೂಲ್ (2) ಕ್ಕೆ ತಿದ್ದುಪಡಿ ಹೊರಡಿಸುವುದನ್ನು ಬಾಕಿಯಿರಿಸಿ, ಕಾರ್ಯಕಾರಿ ಆದೇಶದ ಮುಖಾಂತರ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳನ್ನು ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರವನ್ನಾಗಿ ನೇಮಿಸಲು ಸರ್ಕಾರವು ನಿರ್ಣಯಿಸಿದೆ.

ಅದರಂತೆ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 139 ಗ್ರಾಪಂಕಾ 2012, ಬೆಂಗಳೂರು, ದಿನಾಂಕ: 05–04–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ಷೆಡ್ಯೂಲ್ (2) ಕ್ಕೆ ತಿದ್ದುಪಡಿ ಹೊರಡಿಸುವುದನ್ನು ಬಾಕಿಯಿರಿಸಿ, ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳನ್ನು ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರವನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. ನಂ. 1360

## COMMERCE & INDUSTRIES SECRETARIAT

**Sub :** Approval to the change of location and mode of acquisition for the Project Proposal of M/s. KNK Corporation Pvt. Ltd., to establish a “1.2 MMTPA Pellet Plant and Stainless Steel with Co-generation of Power-35MW”.

**READ :**
1) Government Order No. CI 42 SPI 2011, Bangalore, Dated 23-2-2011.
2) Government Order No. CI 42 SPI 2011, Bangalore dated : 29-12-2011.
3) Representation of KNK Corporation Private Limited, dated : 6-1-2012.

**PREAMBLE :**

The project proposal of M/s KNK Corporation Private Limited to establish a limit for manufacture of “1.2 MTPA Pellet Plant and Stainless Steel with Cogeneration of power-35MW”, with an investment of Rs. 899.00 crores in 280 Ha (700 acres) at Mulwad village, Basavanabagewadi Taluk, Bijapur District, to be acquired and allotted by KIADB as approved in the 24th SHLCC meeting held on 24-1-2011 and Government Order was issued to that effect vide reference (1).

In Government Order referred at (2) above Government was pleased to accord approval of change of location from Mulawad Village, Basavanabagewadi Taluk, Bijapur District to Chinchalakatti Village, Badami Taluk, Bagalkot District for the project proposed by KNK Corporation Pvt. Ltd., approved vide Government Order No. CI 42 SPI 2011, dated 23-2-2011.

M/s. KNK Corporation Pvt. Ltd., has submitted its request for change of location from Chinchalakatti village, Badami Taluk, Bagalkot District to Kotekal village (Guleda gudda) Badami Taluk, Bagalkot District and permission to draw water from Krishna river or Ghataprabha river in Bagalkot District.

The Government has examined the proposal of the company in all aspects and hence the following order.

**GOVERNMENT ORDER NO. CI 42 SPI 2012, BANGALORE, DATED : 18-4-2012.**

Government is pleased to accord approval for change of location from Chinchalakatti village, Badami Taluk, Bagalkot District to Kotekal village (Guleda gudda) Badami Taluk, Bagalkot District and acquisition of land through KIADB with consent from the

farmers (70:30)/U/s 109 of KLR Act, for the project proposal of M/s. KNK Corporation Pvt. Ltd., approved vide Government Order No. CI 42 SPI 2011, dated : 23-2-2011. Other conditions mentioned in the said Government Order remain the same.

By Order and in the name of the Governor of Karnataka,
**JYOTHI R.J.**
Desk Officer (Technical Cell)
Commerce & Industries Department.

**P.R. 1247**

## ಒಳಾಡಳಿತ ಸಚಿವಾಲಯ

**ವಿಷಯ :** ನಕ್ಸಲರ ಶರಣಾಗತಿಯ ಕುರಿತು.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಅವರ ದಿನಾಂಕ : 20–10–2010 ರ ಪತ್ರ ಸಂಖ್ಯೆ : ಜೆ1 ಎಂಎಜಿ 81/2010–11
2. ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಅವರ ದಿನಾಂಕ : 14–2–2011ರ ಪತ್ರ ಸಂಖ್ಯೆ : ಆರ್‌ಡಿಸಿ/ಸಿಕೆಎಂ/10/2011.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆಯವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ (1) ಕುಮಾರಿ ಮಲ್ಲಿಕ (2) ಕೋಮಲ (3) ಜಯ ಎಂಬ ಹೆಸರಿನ ಮೂರು ಮಹಿಳಾ ನಕ್ಸಲರು ದಿನಾಂಕ : 15–10–2011 ರಂದು ಶರಣಾಗತರಾಗಿರುತ್ತಾರೆ. ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಪೊಲೀಸ್ ಅಧೀಕ್ಷಕರು ಚಿಕ್ಕಮಗಳೂರು ಅವರು ಶ್ರೀ ಅಗಲಗಂಚಿ ವೆಂಕಟೇಶ್ @ ಗಂಗಮೂಲ ವೆಂಕಟೇಶ್ ಎಂಬ ಹೆಸರಿನ ನಕ್ಸಲನು ಶರಣಾಗತಿ ಹೊಂದಿ ಸಾಮಾನ್ಯ ಜೀವನ ನಡೆಸುತ್ತಿದ್ದಾರೆಂದು ತಿಳಿಸಿರುತ್ತಾರೆ. ಆದ್ದರಿಂದ ಈ ಆದೇಶ

### ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 128 ಎಸ್‌ಎಸ್‌ಟಿ 2010, ಬೆಂಗಳೂರು, ದಿನಾಂಕ : 19–4–2012.

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಈ ಕೆಳಗೆ ಹೆಸರಿಸಿರುವ ನಕ್ಸಲರ ಶರಣಾಗತಿಯನ್ನು ಸರ್ಕಾರವು ಸ್ವಾಗತಿಸುತ್ತದೆ. ಹಾಗೂ ಜಿಲ್ಲಾ ಆಡಳಿತವು ಕೈಗೊಂಡ ಕ್ರಮವನ್ನು ಸ್ಥಿರೀಕರಿಸುತ್ತದೆ.

1. ಶ್ರೀ ಅಗಲಗಂಚಿ ವೆಂಕಟೇಶ್ @ ಗಂಗಮೂಲ ವೆಂಕಟೇಶ್ ಸನ್ ಆಫ್ ಲೇಟ್ ಚಂದ್ರೇಗೌಡ, 29 ವರ್ಷ, ಎಸ್.ಟಿ. (ಗೌಡ್ಲು) ಅಗಲಗಂಚಿ ಗಿನಿಕಲ್ ವಿಲೇಜ್, ಶೃಂಗೇರಿ ತಾಲ್ಲೂಕ್, ಚಿಕ್ಕಮಗಳೂರು ಜಿಲ್ಲೆ.
2. ಕುಮಾರಿ ಮಲ್ಲಿಕ @ ಕವಿತ ಅತಿಯಪ್ಪನವರ ಮಗಳು, 26 ವರ್ಷ ವಕ್ಕಲಿಗ, ಕುಂದುರಮನಿ, ಯಲಿಮಡಾಳು ಗ್ರಾಮ, ದುರ್ಗದ ಬೆಟ್ಟ ಅಂಚೆ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.
3. ಶ್ರೀಮತಿ ಜಯ @ ರಂಜಿತಾ ಗಿಡ್ಡೇಗೌಡರ ಮಗಳು, 28 ವರ್ಷ, ಗೌಡ್ಲು ಜಾತಿ, ವರ್ಲೆ, ಮೆಗೂರು ಗ್ರಾಮ ಮತ್ತು ಅಂಚೆ, ಮೆಗುಂಡ ಹೋಬಳಿ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.
4. ಕುಮಾರಿ ಕೋಮಲ@ ಎಳಗೊಂಡ ಕೋಮಲ, ತಿಮ್ಮೇಗೌಡರ ಮಗಳು, 21 ವರ್ಷ, ಗೌಡ್ಲು ಜಾತಿ, ಯಡಗುಂದ, ಮೆಗುಂಡ ಹೋಬಳಿ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

ಜಿಲ್ಲಾಧಿಕಾರಿ, ಚಿಕ್ಕಮಗಳೂರು ಹಾಗೂ ಮುಖ್ಯಕಾರ್ಯನಿರ್ವಹಕ ಅಧಿಕಾರಿ, ಚಿಕ್ಕಮಗಳೂರು ಜಿಲ್ಲಾ ಪಂಚಾಯತ್ ಇವರುಗಳು ಶರಣಾಗತರಾದ ನಕ್ಸಲರ ಬೇಡಿಕೆಗಳನ್ನು ಅವಗಾಹಿಸಿ ಅವಶ್ಯವಿರುವ ಮೂಲಭೂತ ಸೌಕರ್ಯಗಳು ಹಾಗೂ ಇನ್ನಿತರೆ ಸೌಕರ್ಯಗಳನ್ನು ಅಭಿವೃದ್ಧಿವಂಚಿತ ಪ್ರದೇಶಗಳಿಗೆ ಒದಗಿಸುವ ಬಗ್ಗೆ ಕ್ರಮ ಜರುಗಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವುದು. ಸಾಧ್ಯವಾದಷ್ಟು ಮಟ್ಟಿಗೆ ಇಂತಹ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸುವ ನಿಟ್ಟಿನಲ್ಲಿ, ಸೇತುವೆ/ರಸ್ತೆಗಳಂತಹ ಮತ್ತು ಕುಡಿಯುವ ನೀರು ಒದಗಿಸುವಂತಹ ಕಾಮಗಾರಿಗಳನ್ನು 2012–13ನೇ ಸಾಲಿನ ಕ್ರಿಯಾಯೋಜನೆಯಲ್ಲಿ ಸೇರಿಸಿಕೊಂಡು ಕಾರ್ಯರೂಪಕ್ಕೆ ತರಲು ಎಲ್ಲಾ ಪ್ರಯತ್ನ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ ವೈ.ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

**ಪಿ.ಆರ್. 1252**

## ಒಳಾಡಳಿತ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಒಇ 55 ಪಿಪಿಇ 2012, ಬೆಂಗಳೂರು, ದಿನಾಂಕ : 19–4–2012**

ಸರ್ಕಾರದ ಆದೇಶ ಸಂಖ್ಯೆ : ಒಇ 55 ಪಿಪಿಇ 2012, ದಿನಾಂಕ : 14–3–2012ಕ್ಕೆ ಲಗತ್ತಿಸಿರುವ ಅನುಬಂಧದ ಕ್ರಮ ಸಂಖ್ಯೆ : 15, 17 ಮತ್ತು 38 ರಲ್ಲಿನ ಅಂಕಣ (3)ರ ಆರಂಭದಲ್ಲಿ "ಹೆಚ್ಚುವರಿ" ಎಂಬ ಪದವನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಸರ್ಕಾರಿ ಆದೇಶ ಸಂ. ಒಇ 55 ಪಿಪಿಇ 2012, ದಿನಾಂಕ : 14–3–2012 ರಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ).

**ಪಿ.ಆರ್. 1253**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಆಕುಕ 100 ಐಎಂಎಂ 2011, ಬೆಂಗಳೂರು, ದಿನಾಂಕ : 21–4–2012**

ಸರ್ಕಾರದ ಆದೇಶ ಸಂಖ್ಯೆ : ಆಕುಕ 154 ಐಎಂಎಂ 2008, ದಿನಾಂಕ : 15–12–2008 ರಲ್ಲಿ "ನಾಗರಾಜ್ ಸುಂಕದ್" ಎಂದಿರುವುದಕ್ಕೆ ಬದಲಾಗಿ "ನಾಗರಾಜ್" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎನ್. ಹರಿಣಿಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ಭಾರತೀಯ ವೈದ್ಯ ಪದ್ಧತಿ).

**ಪಿ.ಆರ್. 1260**

## ನಗರಾಭಿವೃದ್ಧಿ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ನಅಇ 45 ಮೈಅಪ್ರಾ 2011, ಬೆಂಗಳೂರು, ದಿನಾಂಕ : 11–4–2012**

ಸರ್ಕಾರದ ಆದೇಶ ಸಂಖ್ಯೆ : ನಅಇ 45 ಮೈಅಪ್ರಾ 2011, ದಿನಾಂಕ : 29–6–2011 ರಲ್ಲಿನ ಆದೇಶದ ಭಾಗದಲ್ಲಿ "ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ ಬೇಲೂರು–ಹಳೇಬೀಡು ಪಟ್ಟಣದ ಹಾಗೂ ಸುತ್ತಮುತ್ತಲಿನ 36 ಗ್ರಾಮಗಳನ್ನು ಒಟ್ಟಾಗಿ ಸೇರಿಸಿ 8133.85 ಹೆಕ್ಟೇರ್ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಕಾರಣಗಳಿಂದ ಹಾಸನ ಜಿಲ್ಲೆ ಚನ್ನರಾಯಪಟ್ಟಣ ಯೋಜನಾ ಪ್ರದೇಶಕ್ಕೆ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4–ಎ(3) ರನ್ವಯ ಬೇಲೂರು–ಹಳೇಬೀಡು ಪಟ್ಟಣ ಹಾಗೂ ಸುತ್ತಮುತ್ತಲಿನ 36 ಗ್ರಾಮಗಳನ್ನೊಳಗೊಂಡಂತೆ ಅನುಬಂಧ–1 ಹಾಗೂ ಅನುಬಂಧ–2 ರಲ್ಲಿ ತೋರಿಸಿದಂತೆ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿ ಆದೇಶಿಸಿದೆ" ಎಂಬುದರ ಬದಲಾಗಿ

"ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ ಬೇಲೂರು–ಹಳೇಬೀಡು ಪಟ್ಟಣದ ಹಾಗೂ ಸುತ್ತಮುತ್ತಲಿನ 36 ಗ್ರಾಮಗಳನ್ನು ಒಟ್ಟಾಗಿ ಸೇರಿಸಿ 8133.85 ಹೆಕ್ಟೇರ್ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4–ಎ(3) ರನ್ವಯ ಬೇಲೂರು–ಹಳೇಬೀಡು ಪಟ್ಟಣ ಹಾಗೂ ಸುತ್ತಮುತ್ತಲಿನ 36 ಗ್ರಾಮಗಳನ್ನೊಳಗೊಂಡಂತೆ ಅನುಬಂಧ–1 ಹಾಗೂ ಅನುಬಂಧ–2 ರಲ್ಲಿ ತೋರಿಸಿದಂತೆ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿ ಆದೇಶಿಸಿದೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಮುಂದುವರೆದು ಅನುಬಂಧ–1 ರಲ್ಲಿ ಕ್ರ.ಸಂ. 27 ರಲ್ಲಿ ತಲಗೇರಿನ್ನಾಪುರದಿಂದ ಕ್ರ.ಸಂ. 35 ರಲ್ಲಿ ಸೋಮಾಪುರ (ಕಸಬಾ) ಎಂಬುದರ ಬದಲಾಗಿ

ಕ್ರ.ಸಂ. 27 ಆತಲಗೇರಿ (28) ಚನ್ನಾಪುರ (29) ಗೊಟ್ರವಳ್ಳಿ (3) ಕೆಲ್ಲೂರು (31) ಸುರಾಪುರ (32) ನಿಡಗೋಡು (33) ಬಂಟೇನಹಳ್ಳಿ (34) ಕಲ್ಲಹಳ್ಳಿ ಎ.ಎಂ. ಕಾವಲು (35) ಚೀಲನಾಯಕನಹಳ್ಳಿ (36) ಸೋಮಪುರ (ಕಸಬಾ) ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1262**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಶ್ರೀ ಎಸ್.ವಿ. ಸಂಕನೂರ, ಪ್ರಾಚಾರ್ಯರು, ಇವರನ್ನು ಧಾರವಾಡ ಪ್ರಾದೇಶಿಕ ವಿಜ್ಞಾನ ಕೇಂದ್ರದ ಸರ್ವಸದಸ್ಯರ ಮಂಡಳಿಯಲ್ಲಿ (General Body) ಖಾಲಿ ಇರುವ ಸ್ಥಾನಕ್ಕೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ವಿಯಇ 153 ವಿತ್ರಮ 2002, ದಿನಾಂಕ : 19–11–2003.
2. ನಿರ್ದೇಶಕರು, (ತಾಂತ್ರಿಕ) ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಬೆಂಗಳೂರು ಇವರ ಪತ್ರ ದಿನಾಂಕ : 26–11–2011.
3. ಸದಸ್ಯ–ಕಾರ್ಯದರ್ಶಿ, ಧಾರವಾಡ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ, ಧಾರವಾಡ, ಇವರ ಪತ್ರ ಸಂಖ್ಯೆ : DRSCS/2012/02/794, ದಿನಾಂಕ : 20–3–2012.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಧಾರವಾಡ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯನ್ನು ಸ್ಥಾಪಿಸುವ ನಿಟ್ಟಿನಲ್ಲಿ ಅಧಿಕಾರಿಗಳು/ಅಧಿಕಾರೇತರ 13 ಜನ ಸದಸ್ಯರುಗಳನ್ನೊಳಗೊಂಡಂತೆ ಸರ್ವಸದಸ್ಯರ ಮಂಡಳೀಯನ್ನು (General Body) ರಚಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು (ತಾಂತ್ರಿಕ) ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರು ಮತ್ತು ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಪತ್ರದಲ್ಲಿ ಸದಸ್ಯ ಕಾರ್ಯದರ್ಶಿ, ಧಾರವಾಡ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ, ಧಾರವಾಡ ಇವರುಗಳು ಧಾರವಾಡ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯ ಸರ್ವಸದಸ್ಯರ ಮಂಡಳಿಯ ಸದಸ್ಯರುಗಳಲ್ಲಿ ಒಬ್ಬರಾದ ಡಾ॥ ನಾಗಲೋಟಿ ಮಠ ಇವರು ನಿಧನರಾಗಿದ್ದು, ಇವರ ನಿಧನದಿಂದಾಗಿ ಖಾಲಿ ಇರುವ ಸ್ಥಾನಕ್ಕೆ ಶ್ರೀ ಎಸ್.ವಿ. ಸಂಕನೂರ, ಪ್ರಾಚಾರ್ಯರು, ಜಗದ್ಗುರು ಶಿವಾನಂದ ಪದವಿ ಪೂರ್ವ ವಿಜ್ಞಾನ ಮಹಾವಿದ್ಯಾಲಯ ಕಳಸಾಪೂರ ರಸ್ತೆ, ಗದಗ, ಇವರನ್ನು ಧಾರವಾಡ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯ ಸರ್ವಸದಸ್ಯರ ಮಂಡಳಿಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡುವಂತೆ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆ ಸಲ್ಲಿಸಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 230 ವಿತ್ರಮ 2011, ಬೆಂಗಳೂರು, ದಿನಾಂಕ : 20–4–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಎಸ್.ವಿ. ಸಂಕನೂರ, ಪ್ರಾಚಾರ್ಯರು, ಜಗದ್ಗುರು ಶಿವಾನಂದ ಪದವಿ ಪೂರ್ವ ವಿಜ್ಞಾನ ಮಹಾವಿದ್ಯಾಲಯ ಕಳಸಾಪೂರ ರಸ್ತೆ, ಗದಗ, ಇವರನ್ನು ಧಾರವಾಡ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯ ಸರ್ವಸದಸ್ಯರ ಮಂಡಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮದ್ಭಾವಿ ಎ.ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ (ವಿ&ತಂ)

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಪಿ.ಆರ್. 1264**

## ENERGY SECRETARIAT

**SUB :** Revision of pension, gratuity & Leave encashment of former Chairman and Members of KERC.

**READ :**

1) KERC ltr No. A/01/3/250, dated : 9-2-2012.
2) Note No. EN 11 PSR 2011.

1. The Secretary, KERC in the letter dated 9-2-2012 cited under reference has requested to revise the pensionary benefits of former Chairman & Members of KERC as per Notification No. EN 25 PSR 2009, dated 8-9-2009.
2. In exercise of powers conferred by section 57 of the Karnataka Electricity Reforms Act 1999, the Government of Karnataka has revised the pensionary benefits vide KERC (Chairman and other members remuneration, allowance and conditions of service) Rules 2000 (Amendment) with effect from 1st day of January 2006.
3. His Excellency the Governor of Karnataka has accorded approval for sanction of revised pension, gratuity and leave surrender to former Chairman and members of KERC. Hence this order.

**GOVERNMENT ORDER NO. EN 11 PSR 2012, BANGALORE, DATED : 17-4-2012.**

1. In the circumstances explained in the preamble, the Government is pleased to accord approval for revision of pension, Gratuity and Leave Encashment to the former Chairman and Members of KERC as detailed below :

**(Amount in Rs.)**

| **Sl. No.** | **Name** | **Designation** | **Pension** | | **With Effect from** | **Gratuity already Paid** | **Revised Gratuity sanctioned** | **Leave encash ment already paid** | **Revised leave encash ment sanction ed** |
|---|---|---|---|---|---|---|---|---|---|
| | | | Existing | Revised sanctioned | | | | | |
| 1. | Mr. Philipose Matthai | Chairman | 9144.00 | 18288.00 | 1-1-2006 | Nil | Nil | Nil | Nil |
| 2. | Mr. H.R. Gopal | Member | 3253.00 | 4879.00 | 1-4-2004 | Nil | Nil | Nil | Nil |
| | | | | 10019.00 | 1-1-2006 | Nil | Nil | Nil | Nil |
| 3. | Mrs. Nalini M.K. Menon | Member | 2788.00 | 4182.00 | 1-4-2004 | Nil | Nil | Nil | Nil |
| | | | | 8588.00 | 1-1-2006 | Nil | Nil | Nil | Nil |
| 4. | Mr. H.S. Subramanya | Member | 6272.00 | 12882.00 | 12-3-2008 | 38274.00 | 143136.00 | 127495.00 | 225439.00 |
| 5. | Mr. S.D. Ukkali | Member | 6969.00 | 14313.00 | 14-7-2008 | 69523.00 | 200490.00 | 193322.00 | 296725.00 |

2. The revised pension, Gratuity and leave surrender approved in this order is with effect from the date noted against the concerned former Chairman, Members, KERC as in the above table.
3. The above revised amounts are subject to deduction of the amounts already paid.

By Order and in the name of the Governor of Karnataka,

**KOUSALYA**

Under Secretary to Government,

Energy Department.

**P.R. 1268**

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಸಚಿವಾಲಯ

**ವಿಷಯ :** ಮೈಸೂರಿನ ಚಾಮರಾಜೇಂದ್ರ ಸರ್ಕಾರಿ ದೃಶ್ಯಕಲಾ ಕಾಲೇಜಿನ (ಕಾವಾ) ಆಡಳಿತ ಮಂಡಳಿಯನ್ನು ಸಲಹಾ ಸಮಿತಿ (ಅಡ್ವೈಸರಿ ಕಮಿಟಿ) ಎಂದು ಬದಲಾಯಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಡಿ 4 ಎಂಎಸ್ಎ 81, ದಿನಾಂಕ : 4-12-1981.
2. ಸರ್ಕಾರಿ ಆದೇಶ ಸಂಖ್ಯೆ : ಸಂಕಇ 105 ಕರಅ 93, ದಿನಾಂಕ : 25-2-1994.
3. ಸರ್ಕಾರಿ ಆದೇಶ ಸಂಖ್ಯೆ : ಸಂಕಇ 24 ಕರಅ 96, ದಿನಾಂಕ : 10-12-1996.
4. ಮಾನ್ಯ ಕನ್ನಡ ಮತ್ತು ಸಂಸ್ಕೃತಿ, ಸಣ್ಣನೀರಾವರಿ ಹಾಗೂ ಜವಳಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ : 30-4-2011 ರಂದು ನಡೆದ ಕಾವಾ ಸಂಸ್ಥೆಯ ಆಡಳಿತ ಮಂಡಳಿ ಸಭೆಯ ನಿರ್ಣಯ
5. ಡೀನ್, ಕಾವಾ, ಮೈಸೂರುರವರ ಪತ್ರ ಸಂಖ್ಯೆ : ಸಿಎವಿ :ಸಿ-1:ಆಮಸ : 2011-12/701, ದಿನಾಂಕ : 2-8-2011.

**ಪ್ರಸ್ತಾವನೆ :**

ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ (ಕಾವಾ) ಸ್ಥಾಪನೆಯಾದ ಪ್ರಾರಂಭದಲ್ಲಿ ಕೆಲಸ ಕಾರ್ಯಗಳು ಸುಗಮವಾಗಿ ಹಾಗೂ ಶೀಘ್ರವಾಗಿ ನಡೆಸಲು ಅನುಕೂಲವಾಗುವಂತೆ ಓದಲಾದ (1) (2) ಮತ್ತು (3)ರ ಆದೇಶದಲ್ಲಿ ಸರ್ಕಾರವು ಕ್ರಮವಾಗಿ ಆಡಳಿತ ಮಂಡಳಿಯನ್ನು ರಚಿಸಿ ಕಾಲಕಾಲಕ್ಕೆ ಮಾರ್ಪಾಟು ಮಾಡಿರುತ್ತದೆ. ಪ್ರಾರಂಭದಿಂದ ಈವರೆಗೂ ಈ ಆಡಳಿತ ಮಂಡಳಿಯು ಶೈಕ್ಷಣಿಕ ಹಾಗೂ ಆಡಳಿತಾತ್ಮಕ ವಿಷಯಗಳ ಕುರಿತು ಸಭೆ ನಡೆಸಿ ತೀರ್ಮಾನ ಕೈಗೊಳ್ಳುತ್ತಿರುತ್ತದೆ. ಕಾವಾ ಸಂಸ್ಥೆಗೆ ತನ್ನದೇ ಆದ ಆಡಳಿತ ಮಂಡಳಿ ಇರುವುದರಿಂದ ಸದರಿ ಸಂಸ್ಥೆಯನ್ನು ಒಂದು ಸ್ವಾಯತ್ತ ಸಂಸ್ಥೆ ಎಂದು ಪರಿಭಾವಿಸುತ್ತಿರುವುದರಿಂದ ಸದರಿ ಆಡಳಿತ ಮಂಡಳಿಯನ್ನು ಸಲಹಾ ಸಮಿತಿ ಎಂದು ಬದಲಾಯಿಸಲು ಓದಲಾದ (4)ರ ಸಭೆಯಲ್ಲಿ ಚರ್ಚಿಸಿ ನಿರ್ಣಯಿಸಲಾಗಿದೆ ಎಂದು ತಿಳಿಸಿ ಓದಲಾದ (5)ರ ಪತ್ರದಲ್ಲಿ ಡೀನ್, ಕಾವಾ, ಮೈಸೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ತತ್ಸಂಬಂಧ ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 958 ಕಸಧ 2011, ಬೆಂಗಳೂರು, ದಿನಾಂಕ : 26–4–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರಿನ ಚಾಮರಾಜೇಂದ್ರ ಸರ್ಕಾರಿ ದೃಶ್ಯಕಲಾ ಕಾಲೇಜಿನ (ಕಾವಾ) ಆಡಳಿತ ಮಂಡಳಿಯನ್ನು "ಸಲಹಾ ಸಮಿತಿ" ಎಂದು ಪುನರ್‌ನಾಮೀಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ವಿ. ರಾಮಚಂದ್ರರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ.

**ಪಿ.ಆರ್. 1279**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ : 7–8–1995.
2. ಭಾರತೀಯ ಜನತಾ ಪಾರ್ಟಿ, ರಾಜ್ಯ ಉಪಾಧ್ಯಕ್ಷರು ಅವರ ಪತ್ರದ ಸಂಖ್ಯೆ : ರಾಕಾ/ನಾನಿ/159/2012, ದಿನಾಂಕ : 1–2–2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಉಪಾಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಶಿಫಾರಸ್ಸಿನ ಮೇರೆಗೆ ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು ಮಟ್ಟದ ಕೆ.ಡಿ.ಪಿ. ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮ ನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 67 ಯೋವಿವಿ 2009, ಬೆಂಗಳೂರು, ದಿನಾಂಕ : 25ನೇ ಏಪ್ರಿಲ್ 2012.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಸನ ಜಿಲ್ಲೆ ತಾಲ್ಲೂಕು ಮಟ್ಟದ ಕೆ.ಡಿ.ಪಿ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಕೆಳಕಂಡ ಆರು (6) ಜನರನ್ನು ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲಾಗಿದೆ.

ಹಾಸನ ಜಿಲ್ಲೆ : ಸಕಲೇಶಪುರ ತಾಲ್ಲೂಕು ಕೆ.ಡಿ.ಪಿ. ಸಮಿತಿ

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1. | ಶ್ರೀಮತಿ ನೇತ್ರಾವತಿ ಕೋಂ ಮಂಜುನಾಥ, ಬಾಳ್ಳುಪೇಟೆ ಅಂಚೆ, ಬೆಳಗೋಡು ಹೋಬಳಿ, ಸಕಲೇಶಪುರ ತಾಲ್ಲೂಕು | ಮಹಿಳೆ |

| ಕ್ರ ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 2. | ಶ್ರೀ ಡಿ. ರಾಜಕುಮಾರ್ ಬಿನ್ ಕೆ.ಎಸ್. ದೇವಯ್ಯ ಕ್ಯಾಮನಹಳ್ಳಿ ಗ್ರಾಮ & ಅಂಚೆ, ಹಾನುಬಾಳು ಹೋಬಳಿ, ಸಕಲೇಶಪುರ ತಾಲ್ಲೂಕು | ಸಾಮಾನ್ಯ |
| 3. | ಶ್ರೀ ಮಂಜುನಾಥ ಸಂಘಿ ಬಿನ್ ಸಂಘಿ ಸಿದ್ದೇಗೌಡ ನೀಕನಹಳ್ಳಿ ಗ್ರಾಮ, ದೇವಾಲದಕೆರೆ ಅಂಚೆ, ಸಕಲೇಶಪುರ ತಾಲ್ಲೂಕು | ಸಾಮಾನ್ಯ |
| 4. | ಶ್ರೀ ಮಾಸವಳ್ಳಿ ಚಂದ್ರ ಬಿನ್ ಈರಯ್ಯ, ಮಾಸವಳ್ಳಿ ಗ್ರಾಮ, ಹಲಸುಲಿಗೆ ಅಂಚೆ, ಕಸಬಾ ಹೋಬಳಿ, ಸಕಲೇಶಪುರ ತಾಲ್ಲೂಕು | ಎಸ್.ಸಿ. |
| 5. | ಶ್ರೀ ಸಂದೇಶ್ ಬಿನ್ ಚಂದ್ರಶೇಖರ್, ಹೆಬ್ಬನಹಳ್ಳಿ ಗ್ರಾಮ, ಮೂಗಲಿ ಅಂಚೆ, ಸಕಲೇಶಪುರ ತಾಲ್ಲೂಕು | ಹಿಂ. ವರ್ಗ |
| 6. | ಶ್ರೀ ಸುಲೈಮಾನ್ ಬಿನ್ ಖಾದ್ರಿ ಬೇರಿ, ಆನೇಮಹಲ್ ಗ್ರಾಮ & ಅಂಚೆ, ಸಕಲೇಶಪುರ ತಾಲ್ಲೂಕು | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ 1&2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಪಿ.ಆರ್. 1281**

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : Sri AC Keshavamurthy, IFS ಇವರ ದಿನಾಂಕ : 28–2–2012 ಮತ್ತು 29–2–2012 ರ ನವದೆಹಲಿ ಭೇಟಿ ಬಗ್ಗೆ ಘಟನೋತ್ತರ ಅನುಮೋದನೆ

**ಓದಲಾಗಿದೆ :** ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಾಷ್ಟ್ರೀಯ ಅರಣ್ಯ ಅಭಿವೃದ್ಧಿ ಮತ್ತು ಬೊಂಬು ಮಿಷನ್ ಯೋಜನೆ) ಬೆಂಗಳೂರುರವರ ಪತ್ರ ದಿನಾಂಕ : 24–2–2012.

**ಪ್ರಸ್ತಾವನೆ :**

Government of India, Ministry of Environment and Forests, National Afforestation and Eco-Development Board, New Delhi ಇವರು ನವದೆಹಲಿಯಲ್ಲಿ ದಿನಾಂಕ : 28–2–2012 ಮತ್ತು 29–2–2012 ರಂದು ಆಯೋಜಿಸಿರುವ Workshop on one year bridging plan under Green India Mission ನಲ್ಲಿ ಭಾಗವಹಿಸಲು ಸರ್ಕಾರದ ಅನುಮತಿ ನೀಡುವಂತೆ, Sri AC Keshavamurthy, IFS ರವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು, ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ : ಅಪಜೀ 31 ಅತಶಿ 2012, ಬೆಂಗಳೂರು, ದಿನಾಂಕ : 26–4–2012.

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ Sri AC Keshavamurthy, IFS, ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಾಷ್ಟ್ರೀಯ ಅರಣ್ಯ ಅಭಿವೃದ್ಧಿ ಮತ್ತು ಬೊಂಬು ಮಿಷನ್ ಯೋಜನೆ), ಬೆಂಗಳೂರು ಇವರು ನವದೆಹಲಿಯಲ್ಲಿ ದಿನಾಂಕ : 28–2–2012 ಮತ್ತು 29–2–2012 ರಂದು ನಡೆದ Workshop on one year bridging plan under Green India Mission ನಲ್ಲಿ ಭಾಗವಹಿಸಲು ನವದೆಹಲಿಗೆ ಭೇಟಿ ನೀಡಿದ ಪ್ರವಾಸಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆ ನೀಡಲಾಗಿದೆ.

ಸದರಿ ಪ್ರವಾಸಕ್ಕೆ ನಿಯಮಾನುಸಾರದಂತೆ, ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆಯನ್ನು ಪಡೆಯಲು ಅಧಿಕಾರಿಯು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು),

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಪಿ.ಆರ್. 1282**

## ತೋಟಗಾರಿಕೆ ಸಚಿವಾಲಯ

**ವಿಷಯ** : ಉಡುಪಿ ಜಿಲ್ಲೆಯ ರಾಮಸಮುದ್ರ, ತೋಟಗಾರಿಕೆ ಕ್ಷೇತ್ರದಲ್ಲಿ 10.00 ಎಕರೆ ಪ್ರದೇಶವನ್ನು ಕೋಟಿ ಚೆನ್ನಯ್ಯ ಥೀಮ್ ಪಾರ್ಕ್ ನಿರ್ಮಾಣಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**

1. ಉಪ ವಿಭಾಗಾಧಿಕಾರಿ, ಕುಂದಾಪುರ ಇವರ ಆದೇಶ ಸಂ. ಎಡಿಎಸ್/ಎಲ್‌ಎಸ್‌ಡಿ/ಸಿಆರ್.9/2008–09, ದಿನಾಂಕ : 24–5–2008.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ತೋಇ/ತೋಅನಿ/ಕ್ಷೇಸ/ಸತೋಅ–2/7/2008–09, ದಿನಾಂಕ : 13–8–2008.
3. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ED/KSHDA/AHO–2/07/2008–09, ದಿನಾಂಕ : 17–3–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ. ಸಂ. 1 ರ ಉಪ ವಿಭಾಗಾಧಿಕಾರಿ, ಕುಂದಾಪುರ ಇವರ ದಿನಾಂಕ : 24–5–2008ರ ಆದೇಶದಲ್ಲಿ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ರಾಮಸಮುದ್ರ ತೋಟಗಾರಿಕೆ ಕ್ಷೇತ್ರದಲ್ಲಿ 97.70 ಎಕರೆ ಜಮೀನನ್ನು ಕೋಟಿಚೆನ್ನಯ್ಯ ಥೀಮ್ ಪಾರ್ಕ್ ನಿರ್ಮಾಣದ ಉದ್ದೇಶಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಹಸ್ತಾಂತರಿಸಲು ಕಾಯ್ದಿರಿಸಲಾಗಿದೆ ಮೇಲೆ ಓದಲಾದ ಕ್ರ.ಸಂ. 2 ರ ಪತ್ರದಲ್ಲಿ ಕೋಟಿಚೆನ್ನಯ್ಯ ಥೀಮ್ ಪಾರ್ಕ್‌ನ ಜಮೀನು ಮೂಲತಃ ತೋಟಗಾರಿಕೆ ಇಲಾಖೆಯ ಒಡೆತನದಲ್ಲಿರುವುದರಿಂದ ಇಲಾಖೆಯ ಸಹಮತಿ ಇಲ್ಲದೆ ಇಲಾಖೆಯ ಜಮೀನನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಕಾಯ್ದಿರಿಸಿರುವ ಉಪ ವಿಭಾಗಾಧಿಕಾರಿ, ಕುಂದಾಪುರ ಇವರ ಆದೇಶವನ್ನು ರದ್ದುಪಡಿಸಿ ಪ್ರಸ್ತಾಪಿತ ಜಮೀನನ್ನು ತೋಟಗಾರಿಕೆ ಇಲಾಖೆಯಲ್ಲಿಯೇ ಮುಂದುವರೆಸಲು ಕ್ರಮ ಕೈಗೊಳ್ಳುವಂತೆ ಕೋರಲಾಗಿದೆ. ಈ ಬಗ್ಗೆ ಕಂದಾಯ ಇಲಾಖೆಯನ್ನು ಕೋರಲಾಗಿ ಕಂದಾಯ ಇಲಾಖೆಯು ಕೋಟಿ ಚನ್ನಯ್ಯ ಥೀಮ್ ಪಾರ್ಕಿಗೆ 30.00 ಎಕರೆ ಜಮೀನನ್ನು ನೀಡಲು ಅಭಿಪ್ರಾಯ ನೀಡಿದೆ. ಕಂದಾಯ ಇಲಾಖೆಯ ಸಹಮತಿಯನ್ವಯ ಕೋಟಿ ಚನ್ನಯ್ಯ ಥೀಮ್ ಪಾರ್ಕಿಗೆ 30.00 ಎಕರೆ ಜಮೀನನ್ನು ಹಸ್ತಾಂತರಿಸುವ ಪ್ರಸ್ತಾವನೆಯನ್ನು ದಿನಾಂಕ : 27–1–2012 ರಂದು ನಡೆದ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 9ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಚರ್ಚಿಸಿ ದಿನಾಂಕ : 2–11–2009 ರಂದು ನಡೆದ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿ 3ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ನಿರ್ಣಯಿಸಿದಂತೆಯೇ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ರಾಮಸಮುದ್ರ ತೋಟಗಾರಿಕೆ ಕ್ಷೇತ್ರದಲ್ಲಿ 10.00 ಎಕರೆ ಜಮೀನನ್ನು ಕೋಟಿಚೆನ್ನಯ್ಯ ಥೀಮ್ ಪಾರ್ಕ್ ನಿರ್ಮಾಣದ ಉದ್ದೇಶಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಹಸ್ತಾಂತರಿಸಲು ತೀರ್ಮಾನಿಸಿರುವುದರಿಂದ ಅದರಂತೆ ಸೂಕ್ತ ಆದೇಶ ಹೊರಡಿಸುವಂತೆ ಮೇಲೆ ಕ್ರ.ಸಂ. 3ರಲ್ಲಿ ಓದಲಾದ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

### ಸರ್ಕಾರದ ಆದೇಶ ಸಂಖ್ಯೆ : ಕೃತೋಇ 251 ತೋಇವಿ 2008, ಬೆಂಗಳೂರು, ದಿನಾಂಕ : 27–4–2012.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಉಡುಪಿ ಜಿಲ್ಲೆಯ ರಾಮಸಮುದ್ರ ತೋಟಗಾರಿಕೆ ಕ್ಷೇತ್ರದಲ್ಲಿ 10.00 ಎಕರೆ ಪ್ರದೇಶವನ್ನು ಕೋಟಿಚೆನ್ನಯ್ಯ ಥೀಮ್‌ಪಾರ್ಕ್ ನಿರ್ಮಾಣದ ಉದ್ದೇಶಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಹಸ್ತಾಂತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

**ಪಿ.ಆರ್. 1283**

## ತೋಟಗಾರಿಕೆ ಸಚಿವಾಲಯ

**ವಿಷಯ** : ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು ಕಸಬಾ ಹೋಬಳಿ ಬೇಲಿಮಲ್ಲೂರು ತೋಟಗಾರಿಕೆ ಕ್ಷೇತ್ರದ ಸರ್ವೆನಂ. 101, 102 ಮತ್ತು 103ರ ಪೂರ್ವ ದಿಕ್ಕಿನ 0.27 ಎಕರೆ ಪ್ರದೇಶವನ್ನು ಸಾರ್ವಜನಿಕ ಕಾಲುದಾರಿಗಾಗಿ ಬಿಟ್ಟುಕೊಡುವ ಬಗ್ಗೆ.

**ಓದಲಾಗಿದೆ :**

1. ತಹಶೀಲ್ದಾರ್, ಹೊನ್ನಾಳಿ ತಾಲ್ಲೂಕುರವರ ಪತ್ರ ಸಂಖ್ಯೆ : ಎಲ್‌ಎನ್‌ಡಿ/ಸಿಆರ್/60/2011–12, ದಿನಾಂಕ : 19–9–2011.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ED/KSHDA/AHO–1/12/2011–12, ದಿನಾಂಕ : 6–3–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ. ಸಂ. 1 ರ ಪತ್ರದಲ್ಲಿ ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು ಕಸಬಾ ಹೋಬಳಿ ಬೇಲಿಮಲ್ಲೂರು ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 101, 102 ಮತ್ತು 103ರಲ್ಲಿ ಗೊಲ್ಲರಹಳ್ಳಿ, ಮಾಸಡಿ ಮತ್ತು ಬೇಲಿ ಮಲ್ಲೂರು ಗ್ರಾಮದ ರೈತರುಗಳು ಬಂಡಿ ದಾರಿಯನ್ನು ಉಪಯೋಗಿಸುತ್ತಿದ್ದು, ನೂರಾರು ಎಕರೆ ಜಮೀನುಗಳಿಗೆ ಹೋಗುವ ರೈತರುಗಳಿಗೆ ಅನುಕೂಲವಾಗಿದ್ದು, ಹಾಲಿ ಸದರಿ ಸರ್ವೆ ನಂಬರುಗಳಲ್ಲಿ ಇರುವ ತೋಟಗಾರಿಕೆ ಫಾರಂ ಮಧ್ಯದಲ್ಲಿನ ಬಂಡಿದಾರಿಯನ್ನು ಮುಚ್ಚಿರುವುದರಿಂದ ರೈತರಿಗೆ ಕೃಷಿ ಚಟುವಟಿಕೆಗಳಿಗಾಗಿ ಜಮೀನುಗಳಿಗೆ ಓಡಾಡಲು ಅನಾನುಕೂಲವಾಗಿರುತ್ತದೆ. ಆದ್ದರಿಂದ ಸರ್ವೆ ನಂ. 101, 102 ಮತ್ತು 103ರ ತೋಟಗಾರಿಕೆ ಕ್ಷೇತ್ರದಲ್ಲಿ Diagonal ಆಗಿರುವ ಕಾಲುದಾರಿಯನ್ನು ಕ್ಷೇತ್ರದ ಪೂರ್ವಭಾಗದ ಗಡಿಯ ಪಕ್ಕಕ್ಕೆ ಸ್ಥಳಾಂತರಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಮೇಲೆ ಓದಲಾದ ಕ್ರ.ಸಂ. 2 ರ ಪತ್ರದಲ್ಲಿ ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕು ಕಸಬಾ ಹೋಬಳಿ ಬೇಲಿಮಲ್ಲೂರು ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 101, 102 ಮತ್ತು 103 ರಲ್ಲಿ ಹಾದುಹೋಗುವ ಕಾಲು ದಾರಿಗೆ (0.24 ಎಕರೆ) ಬದಲಾಗಿ ಸದರಿ ತೋಟಗಾರಿಕೆ ಕ್ಷೇತ್ರದ ಸಮಗ್ರ ರಕ್ಷಣೆಯ ದೃಷ್ಟಿಯಿಂದ ಪೂರ್ವ ದಿಕ್ಕಿನಲ್ಲಿ 0.27 ಎಕರೆ ಪ್ರದೇಶವನ್ನು ಸಾರ್ವಜನಿಕ ಕಾಲುದಾರಿಗೆ ಬಿಟ್ಟುಕೊಡಲು ದಿನಾಂಕ : 27-1-2012 ರಂದು ನಡೆದ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 9ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಚರ್ಚಿಸಿ ತೀರ್ಮಾನಿಸಿರುವುದರಿಂದ ಅದರಂತೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಕೃತೋಇ 217 ತೋಇವಿ 2011, ಬೆಂಗಳೂರು, ದಿನಾಂಕ : 27-4-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು ಕಸಬಾ ಹೋಬಳಿ ಬೇಲಿಮಲ್ಲೂರು ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 101, 102 ಮತ್ತು 103ರ ಮಧ್ಯದಲ್ಲಿ ಹಾದುಹೋಗುವ ಕಾಲುದಾರಿಗೆ (0.24 ಎಕರೆ) ಬದಲಾಗಿ ಇದೇ ಪ್ರದೇಶದ ಪೂರ್ವ ದಿಕ್ಕಿನಲ್ಲಿ 0.27 ಎಕರೆ ಪ್ರದೇಶವನ್ನು ಸಾರ್ವಜನಿಕ ಕಾಲುದಾರಿಗೆ ಬಿಟ್ಟುಕೊಡಲು ಕಂದಾಯ ಇಲಾಖೆಗೆ ಹಸ್ತಾಂತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

**ಪಿ.ಆರ್. 1284**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರ ನಗರದ ವಿತರಣಾ ಜಾಲವನ್ನು ಅಂದಾಜು ರೂ. 1336.00 ಲಕ್ಷಗಳಲ್ಲಿ ನವೀಕರಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ : ಕಜಿಮಂ : ತಾಂತ್ರಿಕ : ನೀಸಯೋ-ಚಿಕ್ಕಬಳ್ಳಾಪುರ : 2070 : 2011-12, ದಿನಾಂಕ : 30-9-2011.

**ಪ್ರಸ್ತಾವನೆ :**

ಚಿಕ್ಕಬಳ್ಳಾಪುರ ನಗರವು ಜಿಲ್ಲಾ ಕೇಂದ್ರವಾಗಿದ್ದು, 2001ರ ಜನಗಣತಿಯಂತೆ ಪಟ್ಟಣದ ಜನಸಂಖ್ಯೆಯು 54.938 ಇದ್ದು ಪ್ರಸ್ತುತ ಜನಸಂಖ್ಯೆ 70,000 ಇರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2031ರಲ್ಲಿ 87,989 ಮತ್ತು 2041ರಲ್ಲಿ 1,02,948 ಆಗಬಹುದೆಂದು ಅಂದಾಜಿಸಬಹುದಾಗಿದೆ. ಹಾಲಿ ಈ ನಗರಕ್ಕೆ ಜಕ್ಕಲಮಡುಗು ಜಲಾಶಯ ಮೂಲದಿಂದ 3ನೇ ಹಂತದ ನೀರು ಸರಬರಾಜು ಯೋಜನೆಯನ್ನು ಕಲ್ಪಿಸುವ ರೂ. 2700.00 ಲಕ್ಷಗಳ ಅಂದಾಜಿನಲ್ಲಿ ಕಾಮಗಾರಿಯನ್ನು ಕೈಗೆತ್ತಿಕೊಂಡಿದ್ದು, ಮುಕ್ತಾಯದ ಹಂತದಲ್ಲಿರುತ್ತದೆ. ಸದ್ಯದಲ್ಲಿಯೇ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು.

ನಗರದಲ್ಲಿ ಹಾಲಿ ಇರುವ ವಿತರಣಾ ವ್ಯವಸ್ಥೆಯು ತುಂಬಾ ಹಿಂದೆ ಅಳವಡಿಸಲಾಗಿದ್ದು ನೀರಿನ ಸೋರುವಿಕೆಯು ತುಂಬಾ ಹೆಚ್ಚಾಗಿದ್ದು, ವಿತರಣಾ ಜಾಲದ ವ್ಯವಸ್ಥೆಯು ತುಂಬಾ ಕಡಿಮೆಯಾಗಿದೆ. ಇದರಿಂದ ನೀರು ಸರಬರಾಜು ವಿತರಣೆಯು ಅಸಮರ್ಪಕವಾಗಿದ್ದು, ಸ್ಥಳೀಯ ನಿವಾಸಿಗಳು ತೆರೆದ ಗುಂಡಿಗಳಿಂದ ನೀರು ತೆಗೆದುಕೊಂಡು ಬಳಸುತ್ತಿದ್ದಾರೆ. ಹಾಲಿ ವಿತರಣಾ ವ್ಯವಸ್ಥೆಯನ್ನು ಪುನರುಜ್ಜೀವನಗೊಳಿಸುವುದು ಬಹಳ ಮುಖ್ಯವಾಗಿರುತ್ತದೆ. ಆದಕಾರಣ ಚಿಕ್ಕಬಳ್ಳಾಪುರ ನಗರಕ್ಕೆ ವಿತರಣಾ ವ್ಯವಸ್ಥೆಯನ್ನು ರೂ. 1336.00 ಲಕ್ಷಗಳ ಅಂದಾಜಿನಲ್ಲಿ 2011-12ನೇ ಸಾಲಿನ ದರಪಟ್ಟಿ ಮತ್ತು ಮಾರುಕಟ್ಟೆ ದರಗಳನ್ನಾಧರಿಸಿ ಯೋಜನೆಯನ್ನು ವಿನ್ಯಾಸಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ : ನಅಇ 07 ಯುಡಬ್ಲ್ಯೂಎಸ್ 2011, ದಿನಾಂಕ : 20-7-2011 ರಲ್ಲಿ ಹೊರಡಿಸಲಾದ ಹೊಸ ಆರ್ಥಿಕ

ಮಾದರಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಕಂಡ ಆರ್ಥಿಕ ಮಾದರಿಯಂತೆ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (60%) | ರೂ. 801.60 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (30%) | ರೂ. 400.80 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ಕೊಡುಗೆ (10%) | ರೂ. 133.60 ಲಕ್ಷಗಳು |
| **ಒಟ್ಟು** | **ರೂ. 1336.00 ಲಕ್ಷಗಳು** |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ರೂ. 534.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಚಿಕ್ಕಬಳ್ಳಾಪುರ ಸ್ಥಳೀಯ ಸಂಸ್ಥೆಯು ಸದರಿ ಯೋಜನೆಯಡಿ ಭರಿಸಬೇಕಾಗಿರುವ ತನ್ನ ಪಾಲಿನ ಮೊತ್ತವಾದ ರೂ. 133.60 ಲಕ್ಷಗಳನ್ನು (ಶೇಕಡ 10 ) ಹಾಗೂ ರೂ. 400.80 ಲಕ್ಷಗಳನ್ನು ಆರ್ಥಿಕ ಸಂಸ್ಥೆಗಳಿಂದ ಸಾಲ ಪಡೆಯಲು ಮತ್ತು ಸದರಿ ಮೊತ್ತವನ್ನು ಬಡ್ಡಿ ಸಮೇತವಾಗಿ ಮರುಪಾವತಿ ಮಾಡಲು ಒಪ್ಪಿರುತ್ತದೆ. ಇದಲ್ಲದೆ ಯೋಜನೆಯ ಕಾರ್ಯಗತ ಮಾಡುವ ಸಮಯದಲ್ಲಿ ಸಾಮಾಗ್ರಿಗಳ–ಬೆಲೆ ಏರಿಕೆಯಿಂದ ಅಥವಾ ಏಸ್ಕಲೇಷನ್, ಟೆಂಡರ್ ಪ್ರಮೀಯಂ ಮೊದಲಾದ ಅನಿರೀಕ್ಷಿತ ಕಾರಣಗಳಿಂದ ಹೆಚ್ಚಾದ ವೆಚ್ಚವನ್ನು ಭರಿಸಲು ಮತ್ತು ಅವಶ್ಯವಿರುವ ಭೂಮಿಯನ್ನು ನಗರ ಸಭೆಯಿಂದ ನೀಡಲು ಹಾಗೂ ಯೋಜನೆಯನ್ನು ಕಾರ್ಯಗತಗೊಳಿಸಿದ ನಂತರ ಅದರ ನಿರ್ವಹಣೆಯನ್ನು ನೋಡಿಕೊಳ್ಳಲು ಒಪ್ಪಿಗೆ ಸೂಚಿಸಿರುತ್ತದೆ. ಆದ್ದರಿಂದ ಯೋಜನೆಯ ಅಂದಾಜು ಮೊತ್ತದಲ್ಲಿ ರೂ. 126.23 ಲಕ್ಷಗಳನ್ನು ಹೊರತು ಪಡಿಸಬೇಕಾಗಿರುತ್ತದೆ. ಇ.ಟಿ.ಪಿ. ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ.5% ಕ್ಕೆ ಮಿತಿಗೊಳಿಸಲು ಮೂಲ ಅಂದಾಜು ಮೊತ್ತವಾದ ರೂ. 1051.92 ಲಕ್ಷಗಳಿಗೆ ರೂ. 52.60 ಲಕ್ಷಗಳನ್ನು ಮತ್ತು ಇತರೆ ವೆಚ್ಚಗಳಾದ ರೂ. 0.08 ಲಕ್ಷಗಳನ್ನು ಸೇರಿಸಿ ಯೋಜನೆಯ ಅಂದಾಜನ್ನು ರೂ. 1336.00 ಲಕ್ಷಗಳಿಂದ ರೂ. 1104.60 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 15 ಯುಡಬ್ಲ್ಯೂಎಸ್ 2011, ಬೆಂಗಳೂರು, ದಿನಾಂಕ : 21–4–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಚಿಕ್ಕಬಳ್ಳಾಪುರ ನಗರದ ವಿತರಣಾ ಜಾಲವನ್ನು ನವೀಕರಿಸುವ ಯೋಜನೆಯನ್ನು ಅಂದಾಜು ರೂ. 1104.60 ಲಕ್ಷಗಳಲ್ಲಿ (ರೂ. ಒಂದು ಸಾವಿರದ ಒಂದುನೂರ ನಾಲ್ಕು ಲಕ್ಷಗಳು ಮಾತ್ರ) ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. The ULB has agreed to bear the Escalation and tender premium charges hence the estimate is reduced to such extent.
2. ETP & contingencies are restricted to 5%.
3. Adequate provision to be made by the Board in the following years for timely completion of the Project.
4. Water rates as proposed by KUWS &DB have to be implemented to meet O & M cost of UGD.
5. KTPP provisions, quality control and timely completion should ensured.
6. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
7. ಸದರಿ ಕಾಮಗಾರಿಯನ್ನು ನಿಗಧಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಎಫ್‌ಡಿ 590 ಇಎಕ್ಸ್‌ಪಿ–9 2011 ದಿನಾಂಕ : 30–11–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1285**

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ : ಇಡಿ 107 ಟಿವಿಇ 2011, ಬೆಂಗಳೂರು, ದಿನಾಂಕ : 16–4–2012.**

ದಿನಾಂಕ : 17–6–2011 ರ ಸರ್ಕಾರಿ ಆದೇಶ ಸಂಖ್ಯೆ : ಇಡಿ 09 ಟಿವಿಇ 2011ರ ಆದೇಶ ಭಾಗದಲ್ಲಿ ನಮೂದಾಗಿರುವ ಉಪ ಕಂಡಿಕೆಯನ್ನು ಈ ಕೆಳಗಿನಂತೆ ಮರುಪ್ರತಿಸ್ಥಾಪಿಸಲಾಗಿದೆ.

"ಶ್ರೀ ನರಸಿಂಹಚಾರ್ ಪುರೋಹಿತ್ ಇವರು ದಿನಾಂಕ : 1–7–1984ರ ಪೂರ್ವದಲ್ಲಿ ನೇಮಕಹೊಂದಿದ್ದು ದಿನಾಂಕ : 1–7–1994 ರಂದು ಹತ್ತು ವರ್ಷಗಳ ಸೇವೆಯನ್ನು ಪೂರೈಸಿ ಸೇವೆಯಲ್ಲಿ ಮುಂದುವರೆದು ದಿನಾಂಕ : 10–12–1998 ರಂದು ನಿಧನರಾಗಿರುವ ಅಂಶಗಳನ್ನು ಅವಲೋಕಿಸಿ, ಮೃತರ ಕುಟುಂಬವು ಕುಟುಂಬ ವೇತನ ಸೌಲಭ್ಯಗಳನ್ನು ಪಡೆಯಲು ಅನುವಾಗಲು, ಈ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಇವರ ಸೇವೆಯನ್ನು ಸಕ್ರಮಗೊಳಿಸಿ, ಸದರಿಯವರು ಸಲ್ಲಿಸಿರುವ ಸೇವಾ ಅವಧಿಗೆ ಅನುಗುಣವಾಗಿ ಲಭ್ಯವಾಗಬಹುದಾದ ವೇತನ ನಿಗಧಿಪಡಿಸಿ, ಅದರಂತೆ ಅವರ ಕುಟುಂಬದ ಅರ್ಹ ಸದಸ್ಯರಿಗೆ ಕುಟುಂಬ ಪಿಂಚಣಿ ಹಾಗೂ ಇತರೆ ಆರ್ಥಿಕ ಸೌಲಭ್ಯಗಳನ್ನು ನೀಡಲು ಆದೇಶಿಸಲಾಗಿದೆ."

ಈ ತಿದ್ದುಪಡಿ ಆದೇಶವನ್ನು ದಿನಾಂಕ : 31–1–2012 ರ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 1411 ಸೇ–1/11 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಪಟಗಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ),

ಶಿಕ್ಷಣ ಇಲಾಖೆ.

**ಪಿ.ಆರ್. 1288**

**ಸಹಕಾರ ಸಚಿವಾಲಯ**

**ವಿಷಯ :** ಶ್ರೀ ಶ್ರೀ ಲಕ್ಷ್ಮೀನರಸಿಂಹ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., ಮೈಸೂರು ಇದರ 2010–11ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**

1. ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು, ಇವರ ಆದೇಶ ಸಂಖ್ಯೆ : ಡಿಆರ್‌ಎಂ/ಬಿ1 ಎಕ್ಸ್‌ಜಿಎಂ/ಸಿಆರ್–61/2011–12, ದಿನಾಂಕ : 16–9–2011.
2. ಅಧ್ಯಕ್ಷರು, ಶ್ರೀ ಶ್ರೀ ಲಕ್ಷ್ಮೀನರಸಿಂಹ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., ಮೈಸೂರು, ಇವರ ದಿನಾಂಕ : 3–3–2012ರ ಮನವಿ.

**ಪ್ರಸ್ತಾವನೆ :**

ಶ್ರೀ ಶ್ರೀ ಲಕ್ಷ್ಮೀನರಸಿಂಹ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., ಮೈಸೂರು, ಇವರಿಗೆ ಸಂಘದ 2010–11ನೇ ಸಾಲಿನ ಮಹಾಸಭೆಯನ್ನು ದಿನಾಂಕ : 31–3–2012 ರೊಳಗೆ ನಡೆಸಲು ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಅನುಮತಿ ನೀಡಲಾಗಿತ್ತು.

ಸದರಿ ಸಂಘದ ಅಧ್ಯಕ್ಷರು ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ : 3–3–2012ರ ಮನವಿಯಲ್ಲಿ ಈ ಸಂಘವು ಮೈಸೂರು ತಾಲ್ಲೂಕು ಬೆಳವಾಡಿ/ಹುಯಿಲಾಳ ಗ್ರಾಮಗಳಲ್ಲಿ ಮೆ॥ ಸ್ಕೈಟಾಪ್ ಬಿಲ್ಡರ್ಸ್ ಪ್ರೈ ಲಿ., ಮೂಲಕ ನಿವೇಶನಗಳನ್ನು ರಚಿಸುತ್ತಿದ್ದು, ಸದರಿ ಜಮೀನಿನಲ್ಲಿ ಕಾಮಗಾರಿ ಕೆಲಸವು ಪೂರ್ಣಗೊಂಡಿಲ್ಲದೇ ಇರುವುದರಿಂದ ಹಾಗೂ ವಾರ್ಷಿಕ ಮಹಾಸಭೆಯ ದಿನಾಂಕದಂದು ಸದಸ್ಯರುಗಳಿಗೆ ನಿವೇಶನವನ್ನು ಮಂಜೂರು ಮಾಡಲಾಗುವುದು ಎಂದು ಈ ಹಿಂದೆ ತಿಳಿಸಿದ್ದು, ಅನಿವಾರ್ಯ ಕಾರಣಗಳಿಂದಾಗಿ ನಿವೇಶನಗಳನ್ನು ಸಕಾಲದಲ್ಲಿ ಮಂಜೂರು ಮಾಡಲು ಸಾಧ್ಯವಾಗುತ್ತಿಲ್ಲವಾದುದರಿಂದ 2010–11ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ : 30–9–2012ರೊಳಗಾಗಿ ನಡೆಸಲು ಕಾಲಾವಕಾಶವನ್ನು ನೀಡಬೇಕೆಂದು ಕೋರಿರುತ್ತಾರೆ.

ಈ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 48 ಸಿಎಲ್ಎಮ್ 2012, ಬೆಂಗಳೂರು, ದಿನಾಂಕ : 25-4-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಶ್ರೀ ಲಕ್ಷ್ಮೀನರಸಿಂಹ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ನಿ., ಮೈಸೂರು, ಇದರ 2010-11ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು 30-9-2012 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ :

**27ರ ಪ್ರಕರಣದಲ್ಲಿ :**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ :**

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30-9-2012 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಸಿ. ಸತೀಶ್**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 1298**

## ಸಹಕಾರ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಸಇ 68 ಸಸಂನೋ 2011, ಬೆಂಗಳೂರು, ದಿನಾಂಕ : 5ನೇ ಮೇ, 2012.**

ಸರ್ಕಾರದ ಆದೇಶ ಸಂಖ್ಯೆ : ಸಇ 68 ಸಸಂನೋ 2011, ದಿನಾಂಕ : 9-1-2012 ರ ಆದೇಶ ಭಾಗದ 4ನೇ ಸಾಲಿನಲ್ಲಿರುವ "ಸಹಕಾರ ಸಂಘಗಳ ಉಪ ನಿಬಂಧಕರು, ಹಾಗೂ ಜಿಲ್ಲಾ ನೋಂದಾಣಾಧಿಕಾರಿ ಚಿತ್ರದುರ್ಗ" ಎಂಬುದಕ್ಕೆ ಬದಲಾಗಿ 'ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಹಕಾರ ಇಲಾಖೆ.

**ಪಿ.ಆರ್. 1361**

## ತೋಟಗಾರಿಕೆ ಸಚಿವಾಲಯ

**ವಿಷಯ** : ಮಂಗಳೂರು ಮಹಾನಗರ ಪಾಲಿಕೆ ಒಳಚರಂಡಿ ಕಾಮಗಾರಿಗೆ ಪಡೀಲ್ ತೋಟಗಾರಿಕೆ ಕ್ಷೇತ್ರದಲ್ಲಿ 0.18 ಸೆಂಟ್ ಜಮೀನು ನೀಡುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ಸಂ. ಇ3/ಸಿಆರ್-4/ 2009-10, ದಿನಾಂಕ : 23-4-2011.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ED/KSHDA/AHO-2/04/ 2010-11, ದಿನಾಂಕ : 6-3-2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ. ಸಂ. 1 ರಲ್ಲಿ ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ಇವರು ಮಹಾನಗರ ಪಾಲಿಕೆಯು KUIDFC ವತಿಯಿಂದ ADB ಯೋಜನೆಯಡಿ ಒಳಚರಂಡಿ ಕಾಮಗಾರಿಯನ್ನು ತುರ್ತಾಗಿ ನಿರ್ವಹಿಸಬೇಕಾಗಿರುವುದರಿಂದ, ಮಂಗಳೂರು ತಾಲ್ಲೂಕು ಅಳಪೆ

ಗ್ರಾಮದ ಪಡೀಲ್ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 23–1– A1Cರಲ್ಲಿ 0.18 ಸೆಂಟ್ ಸ್ಥಳವನ್ನು ಮಂಗಳೂರು ಮಹಾನಗರ ಪಾಲಿಕೆಗೆ ಒದಗಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ದಿನಾಂಕ : 27–1–2012 ರಂದು ನಡೆದ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 9ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಚರ್ಚಿಸಿ ಮಂಗಳೂರು ತಾಲ್ಲೂಕು ಅಳಪೆ ಗ್ರಾಮದ ಪಡೀಲ್ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 23–1–A1C ರಲ್ಲಿ 0.18 ಸೆಂಟ್ ಸ್ಥಳವನ್ನು ಭೂಸ್ವಾಧೀನ ನಿಯಮದನ್ವಯ ಪರಿಹಾರ ಪಡೆಯುವ ಷರತ್ತಿಗೊಳಪಟ್ಟು ಮಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸಲು ತೀರ್ಮಾನಿಸಿರುವುದರಿಂದ ಅದರಂತೆ ಸೂಕ್ತ ಆದೇಶ ಹೊರಡಿಸುವಂತೆ ಮೇಲೆ ಕ್ರ.ಸಂ. 2ರಲ್ಲಿ ಓದಲಾದ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ : ತೋಇ 165 ತೋಇವಿ 2012, ಬೆಂಗಳೂರು, ದಿನಾಂಕ : 10–5–2012.**

ಪ್ರಸ್ತಾವನೆಯನ್ನು ಪರಿಶೀಲಿಸಿ ಮಂಗಳೂರು ತಾಲ್ಲೂಕು ಅಳಪೆ ಗ್ರಾಮದ ಪಡೀಲ್ ತೋಟಗಾರಿಕೆ ಕ್ಷೇತ್ರದ ಸರ್ವೆ ನಂ. 23–1– A1Cರಲ್ಲಿ 0.18 ಸೆಂಟ್ ಸ್ಥಳವನ್ನು ಭೂಸ್ವಾಧೀನ ನಿಯಮದನ್ವಯ ಪರಿಹಾರ ಪಡೆಯುವ ಷರತ್ತಿಗೊಳಪಟ್ಟು ಮಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

**ಪಿ.ಆರ್. 1364**

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಭಾರತಿ ಎಸ್, ಬೆರಳಚ್ಚುಗಾರರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಸೇವೆಯನ್ನು ಕಂದಾಯ ಇಲಾಖೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ :**

1. ಶ್ರೀಮತಿ ಭಾರತಿ ಎಸ್. ಬೆರಳಚ್ಚುಗಾರರು, ರವರ ಮನವಿ ದಿನಾಂಕ : 6–12–2010
2. ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ರವರ ಪತ್ರ ಸಂಖ್ಯೆ : ಸಿಎಸ್ಎಫ್/ಇಎಸ್‌ಟಿ (1)/172/2010–11, ದಿನಾಂಕ : 11–2–2011.
3. ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗ, ಇವರ ಪತ್ರ ಸಂಖ್ಯೆ : ಕಂ/ಪ್ರಾಆಗು/ಇಎಸ್ಎ/108/2010–11, ದಿನಾಂಕ : 30–8–2011.

**ಪ್ರಸ್ತಾವನೆ :**

ಶ್ರೀಮತಿ ಭಾರತಿ ಎಸ್, ಬೆರಳಚ್ಚುಗಾರರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರು ಪ್ರಸ್ತುತ ಪ್ರಾದೇಶಿಕ ಆಯುಕ್ತರು ಕಛೇರಿ ಗುಲ್ಬರ್ಗಾ ಇಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದು ಸದರಿ ನೌಕರರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಮನವಿಯಲ್ಲಿ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗರವರಿಗೆ ತನ್ನ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 1977ರ ನಿಯಮ 16(ಎ)(ii) ರನ್ವಯ ಕಂದಾಯ ಇಲಾಖೆಯಲ್ಲಿ ಸೇವೆಯನ್ನು ವಿಲೀನಗೊಳಿಸಬೇಕೆಂದು ಕೋರಿರುತ್ತಾರೆ ಹಾಗೂ ಕಂದಾಯ ಇಲಾಖೆಯಲ್ಲಿ ವಿಲೀನಗೊಳಿಸಿದಲ್ಲಿ ನನ್ನ ಜೇಷ್ಠತೆಯನ್ನು ಕಂದಾಯ ಇಲಾಖೆಯ ಗುಲ್ಬರ್ಗಾ ಜಿಲ್ಲೆಯಲ್ಲಿ ಸಮಾನಾಂತರ ಹುದ್ದೆಯ ವೃಂದದ ಕೊನೆಯಲ್ಲಿ ನಿಗದಿ ಪಡಿಸಲು ತನ್ನ ಅಭ್ಯಂತರವಿರುವುದಿಲ್ಲವೆಂದು ತಿಳಿಸಿರುತ್ತಾರೆ.

2. ಕರ್ನಾಟಕ ಸಿವಿಲ್ ಸೇವೆಗಳು 1977ರ ನಿಯಮ 16(ಎ)(ii) ರಲ್ಲಿ ಸರ್ಕಾರ ಸಮಾನ ದರ್ಜೆ ಹುದ್ದೆಗಳಿಗೆ ಕಾರಣಗಳನ್ನು ಲಿಖಿತ ಮೂಲಕ ದಾಖಲಿಸಿ ಒಂದು ಇಲಾಖೆಯ ನೌಕರರನ್ನು ಇನ್ನೊಂದು ಇಲಾಖೆಗೆ ವರ್ಗಾವಣೆ ಮೂಲಕ ನೇಮಿಸಲು ಆಸ್ಪದ ಕಲ್ಪಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಶ್ರೀಮತಿ ಭಾರತಿ ಎಸ್. ಬೆರಳಚ್ಚುಗಾರರು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಿಂದ ಕಂದಾಯ ಇಲಾಖೆಯಲ್ಲಿ ವಿಲೀನಗೊಳಿಸಲು ಒಪ್ಪಿಗೆ ನೀಡಿ ವಿಲೀನದ ನಂತರ ಸದರಿಯವರನ್ನು ಇಲಾಖೆಯಿಂದ ಬಿಡುಗಡೆಗೊಳಿಸಲಾಗುವುದೆಂದು ತಿಳಿಸಿರುತ್ತಾರೆ.

3. ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗ, ಇವರ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಶ್ರೀಮತಿ ಭಾರತಿ ಎಸ್. ಬೆರಳಚ್ಚುಗಾರರ ಇವರನ್ನು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಿಂದ ಗುಲ್ಬರ್ಗಾ ಜಿಲ್ಲಾ ಕಂದಾಯ ಘಟಕದಲ್ಲಿ ವಿಲೀನಗೊಳಿಸಿಕೊಳ್ಳಲು ಒಪ್ಪಿಗೆ ನೀಡಿರುತ್ತಾರೆ. ಈ ವಿವರಗಳ ಹಿನ್ನೆಲೆಯಲ್ಲಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 28 ಎಂವಿಎಸ್ 2011, ಬೆಂಗಳೂರು, ದಿನಾಂಕ : 8–5–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಭಾರತಿ ಎಸ್. ಬೆರಳಚ್ಚುಗಾರರು ಇವರ ಸೇವೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1977ರ ನಿಯಮ 16(ಎ)(ii) ರಡಿ ಈ ಕೆಳಕಂಡ ಷರತ್ತಿಗೊಳಪಟ್ಟು ಕಂದಾಯ ಇಲಾಖೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಿ, ಗುಲ್ಬರ್ಗಾ ಜಿಲ್ಲಾ ಕಂದಾಯ ಘಟಕದ ಬೆರಳಚ್ಚುಗಾರರ ವೃಂದದಲ್ಲಿ ನೇಮಿಸಿ ಆದೇಶಿಸಲಾಗಿದೆ.

1. ಸಂಬಂಧಪಟ್ಟ ನೌಕರರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಯ ವೇತನ ಶ್ರೇಣಿ ಮತ್ತು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಯ ವೇತನ ಶ್ರೇಣಿಗಳು ಸಮಾನ ವೇತನ ಶ್ರೇಣಿಗಳಾಗಿರತಕ್ಕದ್ದು.
2. ಸಂಬಂಧಪಟ್ಟ ನೌಕರರು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಕಂದಾಯ ಇಲಾಖೆಯ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ, ನೇಮಕಾತಿ ಹೊಂದಿದ ಎರಡು ವರ್ಷಗಳ ಅವಧಿಯಲ್ಲಿ ತೇರ್ಗಡೆ ಹೊಂದತಕ್ಕದ್ದು.
3. ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16(ಎ)(ii) ರಡಿ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಸೇವಾವಧಿಯಲ್ಲಿ ಒಮ್ಮೆ ಮಾತ್ರ ಮಾಡಬಹುದು.
4. ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮಾವಳಿಗಳು 1957ರ ನಿಯಮ 6ರ ಮೊದಲನೆ ಪರಂತುಕದನ್ವಯ ಸದರಿಯವರು ಕಂದಾಯ ಇಲಾಖೆಯ ಸೇವೆಗೆ ಸೇರುವ ದಿನಾಂಕದಿಂದ ಪರಿಗಣಿಸತಕ್ಕದ್ದು.
5. ನೌಕರರು ವರ್ಗಾವಣೆ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಭಾನುಮತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–ಎ).

**ಪಿ.ಆರ್. 1365**

## ಕಂದಾಯ ಸಚಿವಾಲಯ

**ವಿಷಯ :** ಚಿತ್ರದುರ್ಗ ಅರಣ್ಯ ವಿಭಾಗದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಹೊಸದುರ್ಗ ತಾಲ್ಲೂಕಿನ ಚಿಕ್ಕಬ್ಯಾಲದಕೆರೆ ಗ್ರಾಮದ ಸ.ನಂ. 10 ಮತ್ತು ಸ.ನಂ. 130 ಹಾಗೂ ಗುಡ್ಡದ ನೇರಲಕೆರೆ ಗ್ರಾಮದ ಸ.ನಂ. 100 ರಲ್ಲಿ ಒಟ್ಟು 600–00 ಎಕರೆ ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸುವ ಬಗ್ಗೆ

**ಓದಲಾಗಿದೆ :** ಪತ್ರ ಸಂಖ್ಯೆ : ಎಲ್‌ಎನ್‌ಡಿ/ಸಿಆರ್/158/2010–11, ದಿನಾಂಕ : 30–11–2010.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ದಿನಾಂಕ : 30–11–2010 ರಂದು ಪತ್ರ ಬರೆಯುತ್ತಾ ಸರ್ಕಾರಿ ಆದೇಶ ಸಂಖ್ಯೆ : ಇಎನ್ 429 ಎನ್‌ಸಿಇ 2007, ದಿನಾಂಕ : 11–12–2007 ರಲ್ಲಿ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು 22 ಮೆಗಾವ್ಯಾಟ್ಸ್ ಸಾಮರ್ಥ್ಯದಿಂದ 120 ಮೆಗಾವ್ಯಾಟ್ಸ್ ಸಾಮರ್ಥ್ಯ ಹೆಚ್ಚಿಸುವ ಉಪಕರಣ ಅಳವಡಿಸಲು ಬಾಗಲಕೋಟೆ ವಿಭಾಗದಲ್ಲಿ 235.35 ಹೆಕ್ಟೇರ್ ಅರಣ್ಯ ಜಮೀನನ್ನು ಮೆ॥ ಎನ್‌ಎಸ್‌ಎಲ್ ಪವರ್ ಲಿ., ಹೈದ್ರಾಬಾದ್ ಇವರಿಗೆ ಗುತ್ತಿಗೆ ನೀಡಲಾಗಿರುವುದಕ್ಕೆ ಪರಿಹಾರತ್ಮಕವಾಗಿ ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನ, ಚಿಕ್ಕಬ್ಯಾಲದ ಕೆರೆ ಗ್ರಾಮದ ಸ.ನಂ. 10 ಮತ್ತು 130 ಹಾಗೂ ಗುಡ್ಡದ ನೇರಲಕೆರೆ ಗ್ರಾಮದ ಸ.ನಂ. 100 ಈ ಮೂರು ಸರ್ವೆ ನಂಬರುಗಳ ಒಟ್ಟು ವಿಸ್ತೀರ್ಣ 600–00 ಎಕರೆ ಜಮೀನಿನಲ್ಲಿ ನೆಡುತೋಪು ಬೆಳೆಸಲು ಅರಣ್ಯ ಇಲಾಖೆಗೆ ಜಮೀನನ್ನು ಹಸ್ತಾಂತರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಹೊಸದುರ್ಗ ತಾಲ್ಲೂಕಿನ ಚಿಕ್ಕಬ್ಯಾಲದ ಕೆರೆ ಗ್ರಾಮದ ಸ.ನಂ. 10ರ ಜಮೀನು ಆರ್‌ಟಿಸಿಯ ಕಲಂ 9ರಲ್ಲಿ ಗೋಮಾಳ ಎಂಬುದಾಗಿ ವರ್ಗೀಕೃತಗೊಂಡಿದ್ದು 347.28 ಎಕರೆ ಇದ್ದು ಸ.ನಂ. 130ರ ಜಮೀನು ಆರ್‌ಟಿಸಿಯ ಕಲಂ 9ರಲ್ಲಿ ಗೋಮಾಳ ಎಂಬುದಾಗಿ ವರ್ಗೀಕೃತವಾಗಿದ್ದು 410.03 ಎಕರೆ ಇರುತ್ತದೆ. ಅದೇ ರೀತಿ ಗುಡ್ಡದ ನೇರಲಕೆರೆ ಗ್ರಾಮದ ಸ.ನಂ. 100 ರ ಜಮೀನು ಆರ್‌ಟಿಸಿಯ ಕಲಂ 9ರಲ್ಲಿ ಗೋಮಾಳ ಎಂಬುದಾಗಿ

ವರ್ಗೀಕೃತಗೊಂಡಿದ್ದು 524.08 ಎಕರೆ ಇರುತ್ತದೆ. ಆ ಪೈಕಿ ಈ ಕೆಳಕಂಡಂತೆ ಒಟ್ಟು 600 ಎಕರೆ ವಿಸ್ತೀರ್ಣದ ಜಮೀನನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸಲು ಪ್ರಸ್ತಾಪಿಸಲಾಗಿದೆ.

| | | |
|---|---|---|
| • ಚಿಕ್ಕಬ್ಯಾಲದಕೆರೆ (ಸ.ನಂ. 10) | – | 253.14 ಎಕರೆ |
| • ಚಿಕ್ಕಬ್ಯಾಲದಕೆರೆ (ಸ.ನಂ. 130) | – | 178.08 ಎಕರೆ |
| • ಗುಡ್ಡದನೇರಲಕೆರೆ (ಸ.ನಂ. 100) | – | 168.18 ಎಕರೆ |
| **ಒಟ್ಟು** | – | **600.00 ಎಕರೆ** |

ಉಲ್ಲೇಖಿತ 3 ಸರ್ವೆ ನಂಬರುಗಳ ಜಮೀನನ್ನು ಪರ್ಯಾಯ ನೆಡುತೋಪು ಬೆಳೆಸಲು ಅರಣ್ಯ ಇಲಾಖೆಗೆ ನೀಡುವ ಬಗ್ಗೆ ನಕ್ಷೆಯಲ್ಲಿ ತೋರಿಸಲಾಗಿದ್ದು ಸದರಿ ಜಮೀನು ನೆಡುತೋಪು ಬೆಳೆಸಲು ಯೋಗ್ಯವಾಗಿರುತ್ತದೆ ಸದರಿ ಜಮೀನುಗಳನ್ನು ಯಾವುದೇ ಸರ್ಕಾರಿ ಉದ್ದೇಶಕ್ಕಾಗಿ ಮೀಸಲಿಟ್ಟಿರುವುದಿಲ್ಲ. ಈ ಜಮೀನುಗಳಲ್ಲಿ ಪುರಾತನ ಕಾಲದ ಯಾವುದೇ ದೇವಾಲಯ/ಸ್ಮಾರಕಗಳು ಇರುವುದಿಲ್ಲ. ತಂಗಡಿ ಗಿಡ, ಕಾಡುಗಳಿಂದ ಕೂಡಿದ ಪ್ರದೇಶವಾಗಿರುತ್ತದೆ. ಜಮೀನು ಮಂಜೂರಾತಿ ಕೋರಿ ನಮೂನೆ 50–53ರಲ್ಲಿ ಅರ್ಜಿ ದಾಖಲಾಗಿರುವುದಿಲ್ಲ, ಅಲ್ಲದೆ ಪಿ.ಟಿ.ಸಿ.ಎಲ್. ಪ್ರಕರಣಗಳು ಇರುವುದಿಲ್ಲ. ಅರಣ್ಯ ಸಂರಕ್ಷಣಾ ಕಾಯ್ದೆ ಕಲಂ 4 ರನ್ವಯ ಈ ಜಮೀನುಗಳು ಕಾಯ್ದಿಟ್ಟ ಅರಣ್ಯ ಮತ್ತು ಡೀಮ್ಡ್ ಫಾರೆಸ್ಟ್‌ಗೆ ಸೇರಿರುವುದಿಲ್ಲ.

ಚಿಕ್ಕಬ್ಯಾಲದಕೆರೆ ಗ್ರಾಮದಲ್ಲಿ 880 ಮತ್ತು ಗುಡ್ಡದನೇರಲಕೆರೆ ಗ್ರಾಮದಲ್ಲಿ 1500 ಜಾನುವಾರುಗಳಿರುತ್ತವೆ. ಜಾನುವಾರುಗಳಿಗೆ ತಕ್ಕಂತೆ ಸಾಕಷ್ಟು ಗೋಮಾಳವಿರುತ್ತದೆ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಉದ್ದೇಶಿಸಿರುವ ಜಮೀನಿನ ಕುರಿತಂತೆ ಗ್ರಾಮಸ್ಥರ ತಕರಾರು ಇರುವುದಿಲ್ಲ. ಅದಲ್ಲದೆ ಗ್ರಾಮದಲ್ಲಿ ಹುಲ್ಲುಬನ್ನಿ ಖರಾಬು, ಕೆರೆ ಅಂಗಳ, ಅರಣ್ಯ, ಗೋಮಾಳ ಸೇರಿದಂತೆ ಜಮೀನು ಲಭ್ಯವಿದ್ದು ಜಾನುವಾರುಗಳ ಮೇವಿಗೆ ತೊಂದರೆಯಾಗುವುದಿಲ್ಲ.

ಈ ರೀತಿ ಅರಣ್ಯೀಕರಣಕ್ಕೆ ಹುಲ್ಲುಬನ್ನಿ ಅಥವಾ ಸರ್ಕಾರಿ ಗೋಮಾಳದ ಜಮೀನುಗಳನ್ನು ಮಂಜೂರು ಮಾಡಲು ನಿಯಮಗಳ ಅಡಿ ಅವಕಾಶವಿಲ್ಲದ್ದರೂ ರಾಜ್ಯವು ತೀವ್ರ ವಿದ್ಯುತ್ ಅಭಾವ ಎದುರಿಸುತ್ತಿರುವ ಹಿನ್ನೆಲೆಯಲ್ಲಿ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದನೆಗೆ ಸರ್ಕಾರ ಹೆಚ್ಚಿನ ಆದ್ಯತೆ ನೀಡಬೇಕಾಗಿರುತ್ತದೆ. ಆದರೆ ಅರಣ್ಯ ಇಲಾಖೆ ಗಣಿಗಾರಿಕೆ ಚಟುವಟಿಕೆಗಳಿಗಾಗಿ ಅರಣ್ಯ ಪ್ರದೇಶಗಳನ್ನು ಬಿಡುಗಡೆ ಮಾಡಿದಂತಹ ಸಂದರ್ಭಗಳಲ್ಲಿ ಅದಕ್ಕೆ ಪರಿಹಾರವಾಗಿ ಅರಣ್ಯ ಇಲಾಖೆಯ ವತಿಯಿಂದ ಪರಿಹಾರಾತ್ಮಕ ನೆಡುತೋಪು ಬೆಳೆಸುವುದಕ್ಕಾಗಿ ಕಂದಾಯ ಇಲಾಖೆಯ ಸಿ ಮತ್ತು ಡಿ ವರ್ಗದ ಜಮೀನುಗಳನ್ನು ಲ್ಯಾಂಡ್ ಬ್ಯಾಂಕ್‌ನಿಂದ ಬಿಡುಗಡೆಮಾಡಿ ಅರಣ್ಯ ಇಲಾಖೆಗೆ ಹಸ್ತಾಂತರಿಸಲು ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 106 ಎಲ್‌ಜಿಪಿ 88, ದಿನಾಂಕ : 20–7–94ರ ಪ್ರಕಾರ ಅವಕಾಶವಿದೆ.

ಆದರೆ, ಈ ಪ್ರಕರಣದಲ್ಲಿ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಮೆ॥ ಎನ್.ಎಸ್.ಎಲ್. ಪವರ್ ಲಿಮಿಟೆಡ್, ಹೈದರಾಬಾದ್‌ರವರಿಗೆ ಅರಣ್ಯ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ನೀಡಲಾಗಿರುವುದಕ್ಕೆ ಪರಿಹಾರತ್ಮಕವಾಗಿ ಅರಣ್ಯ ಬೆಳೆಸಲು ಸರ್ಕಾರಿ ಗೋಮಾಳ ಜಮೀನನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸುವ ಪ್ರಸ್ತಾವನೆ ಆಗಿರುತ್ತದೆ. ಸರ್ಕಾರಿ ಗೋಮಾಳ ಜಮೀನನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸುವುದರಿಂದ ಪರಿಸರ ರಕ್ಷಣೆ/ಅರಣ್ಯ ಬೆಳೆಸಲು ಉತ್ತೇಜನ ನೀಡಿದಂತಾಗುತ್ತದೆ ಮತ್ತು ಅತಿಕ್ರಮಣದಾರರಿಂದ ಒತ್ತುವರಿಯನ್ನು ತಡೆಗಟ್ಟಬಹುದಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 101 ಎಲ್‌ಜಿಸಿ 2010, ಬೆಂಗಳೂರು, ದಿನಾಂಕ : 9–5–2012.**

ಮೆ॥ ಎನ್.ಎಸ್.ಎಲ್. ಪವರ್ ಲಿಮಿಟೆಡ್, ಹೈದ್ರಾಬಾದ್, ಇವರಿಗೆ, ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಬಾಗಲಕೋಟೆ ವಿಭಾಗದಲ್ಲಿ 235–535 ಹೆಕ್ಟೇರ್ ಅರಣ್ಯ ಜಮೀನನ್ನು ಗುತ್ತಿಗೆ ನೀಡಿರುವುದಕ್ಕೆ, ಪರಿಹಾರಾತ್ಮಕವಾಗಿ ನೆಡುತೋಪು ಬೆಳೆಸಲು ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನ, ಚಿಕ್ಕಬ್ಯಾಲದಕೆರೆ ಗ್ರಾಮದ ಸ.ನಂ. 10 ರಲ್ಲಿನ 253–14 ಎಕರೆ ಮತ್ತು ಸ.ನಂ. 130 ರಲ್ಲಿ 178–08 ಎಕರೆ ಹಾಗೂ ಗುಡ್ಡದನೇರಲಕೆರೆ ಗ್ರಾಮದ ಸ.ನಂ. 100 ರಲ್ಲಿನ 168–18 ಎಕರೆ ಒಟ್ಟು 600–00 ಎಕರೆ ಜಮೀನನ್ನು ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969)ರ ನಿಯಮ 27ರಡಿ ಅರಣ್ಯೀಕರಣ ಉದ್ದೇಶಕ್ಕಾಗಿ ಅರಣ್ಯ ಇಲಾಖೆಗೆ ಹಸ್ತಾಂತರಿಸಲು ಮಂಜೂರಾತಿ ನೀಡಲಾಗಿದೆ.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ : ಆಇ/955/ವೆಚ್ಚ–7/2011, ದಿನಾಂಕ : 13–12–2011 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3).

**ಪಿ.ಆರ್. 1366**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : ಶ್ರೀ ವೀರಭದ್ರಗೌಡ ಎಸ್. ಕಟ್ಟಿ, ನೋಟರಿ, ಕೊಪ್ಪಳ ಇವರ ವಿರುದ್ಧ ಸ್ವೀಕೃತವಾದ ದೂರು ಬಗ್ಗೆ ಶಿಸ್ತು ಕ್ರಮ.

**ಓದಲಾಗಿದೆ :**

1. ಶ್ರೀಮತಿ ವೀರಮ್ಮ ಕೆ. ಗೌಡ ಇವರ ದೂರು ಮನವಿ ದಿನಾಂಕ : 4–6–2011.
2. ಸರ್ಕಾರದ ಪತ್ರ ಸಂಖ್ಯೆ : ಲಾ 178 ಎಲ್‌ಸಿಎಲ್ 2011, ದಿನಾಂಕ : 4–7–2011.
3. ಶ್ರೀಯುತರು ಲಿಖಿತ ಹೇಳಿಕೆ ದಿನಾಂಕ : 18–7–2011
4. ಸರ್ಕಾರದ ಪತ್ರ ಸಂಖ್ಯೆ : ಲಾ 178 ಎಲ್‌ಸಿಎಲ್ 2011, ದಿನಾಂಕ : 26–9–2011.
5. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಪ್ಪಳ ಇವರ ಪತ್ರ ಸಂಖ್ಯೆ : 643/012/ನೋಟರಿ ಎನ್‌ಕ್ವಯರಿ 2011, ದಿನಾಂಕ : 7–1–2012.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ : 4–6–2011 ರ ಮನವಿಯಲ್ಲಿ ಶ್ರೀಮತಿ ವೀರಮ್ಮ ಎಸ್. ಕಟ್ಟಿ, ಇವರು ಶ್ರೀ ವೀರಭದ್ರಗೌಡ ಎಸ್. ಕಟ್ಟಿ, ಇವರ ವಿರುದ್ಧ ಸಲ್ಲಿಸಿದ್ದ ದೂರು ಮನವಿಯನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ : 4–7–2011 ರ ಸರ್ಕಾರದ ಪತ್ರದಲ್ಲಿ ನೋಟರಿಯವರಿಗೆ ಕಳುಹಿಸಿ ಅವರ ವಿರುದ್ದದ ಆರೋಪದ ಬಗ್ಗೆ ಲಿಖಿತ ಹೇಳಿಕೆಯನ್ನು ಕೋರಲಾಗಿತ್ತು. ಅದರಂತೆ ನೋಟರಿಯವರು ಮೇಲೆ (3) ರಲ್ಲಿ ಓದಲಾದ ದಿನಾಂಕ : 18–7–2011 ರಲ್ಲಿ ಲಿಖಿತ ಹೇಳಿಕೆ ಸಲ್ಲಿಸಿದ್ದು, ಅದನ್ನು ಮೇಲೆ (4) ರಲ್ಲಿ ಓದಲಾದ ದಿನಾಂಕ : 26–9–2011 ರ ಸರ್ಕಾರದ ಪತ್ರದಲ್ಲಿ ದೂರು ಮನವಿ ಹಾಗೂ ಶ್ರೀಯುತರ ಲಿಖಿತ ಹೇಳಿಕೆಯನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರಿಗೆ ಕಳುಹಿಸಿ ನಿಯಮಾನುಸಾರ ಪರಿಶೀಲಿಸಿ ವಿಚಾರಣಾ ವರದಿಯನ್ನು ಕಳುಹಿಸುವಂತೆ ಕೋರಲಾಗಿತ್ತು. ಅದರಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಪ್ಪಳ ಇವರು ಮೇಲೆ (5) ರಲ್ಲಿ ಓದಲಾದ ದಿನಾಂಕ : 7–1–2012ರ ಪತ್ರದೊಂದಿಗೆ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಅದರಲ್ಲಿ "ನಿಶಾನೆ ಪಿ. 2 ರಲ್ಲಿ ದಾಖಲೆ ಮೇಲಿನ ನ್ಯೂನ್ಯತೆಗಳಿಂದ ಒಳಗೊಂಡಿದೆ. ನೋಟರಿಯವರು ತಮಗೆ ದತ್ತವಾಗಿರುವ ಅಧಿಕಾರವನ್ನು ಸರಿಯಾದ ರೀತಿಯಲ್ಲಿ ಚಲಾಯಿಸಿಲ್ಲ ಎಂಬುದು ಸ್ಪಷ್ಟವಿದೆ. ಈ ರೀತಿ ಚಲಾಯಿಸದೇ ಅವರು ಆಸ್ತಿಯ ಹಕ್ಕಿನ ಬಗ್ಗೆ ಈ ರೀತಿಯ ದಾಖಲೆ ಮಾಡಿರುವುದರಿಂದ ಫಿರ್ಯಾದುದಾರಳಿಗೆ ಮತ್ತು ಅವಳಿಗೆ ಸಂಬಂಧಪಟ್ಟವರಿಗೆ ತುಂಬಲಾರದ ಹಾನಿ ಆಗಿರುವುದು ಸ್ಪಷ್ಟವಿದೆ. ನಿಶಾನೆ ಪಿ–2ರ ನಂತರ ಹಲವಾರು ವ್ಯಾಜ್ಯಗಳು ಉದ್ಭವ ಆಗಿವೆ." ಈ ಎಲ್ಲಾ ವಿಷಯಗಳ ಆಧಾರಗಳ ಮೇಲಿಂದ ಈ ಅಂಶವನ್ನು "ಹೌದು" ಎಂದು ಉತ್ತರಿಸಿದ್ದಾರೆ. ನೋಟರಿಯವರಿಂದ ಕರ್ತವ್ಯ ಲೋಪವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಲಾ 178 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 29–3–2012.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ವೀರಭದ್ರಗೌಡ ಎಸ್. ಕಟ್ಟಿ, ನೋಟರಿ, ಕೊಪ್ಪಳ ಇವರಿಗೆ ಈ ಕೂಡಲೇ ಜಾರಿಗೆ ಬರುವಂತೆ ನೋಟರಿ ನಿಯಮಗಳು 1956ರ ನಿಯಮ 13(12) (ಬಿ) (ii) ರನ್ವಯ 3 ತಿಂಗಳವರೆಗೆ ಅಮಾನತ್ತುಗೊಳಿಸಿ ನೋಟರಿ ವೃತ್ತಿ ಮಾಡಬಾರದೆಂದು ಆದೇಶಿಸಿದೆ ಮತ್ತು 13(12)(ಬಿ) (iii) ರನ್ವಯನೋಟರಿಯವರಿಗೆ ಮತ್ತೊಮ್ಮೆ ಇಂತಹ ತಪ್ಪು ಪುನರಾವರ್ತಿಸಬಾರದೆಂದೂ ಸಹ ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 1370**

## ಸಹಕಾರ ಸಚಿವಾಲಯ

**ವಿಷಯ** : ದಿನಾಂಕ : 13–5–2012 ರಿಂದ 16–5–2012 ರವರೆಗೆ ನಡೆಯುವ International Federation of Warehousing Logistics Association ಸಮ್ಮೇಳನದಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮದ ಅಧ್ಯಕ್ಷರು ಹಾಗೂ ನಿಗಮದ ಇಬ್ಬರು ನಿರ್ದೇಶಕರುಗಳನ್ನು ಭಾಗವಹಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ರಾಜ್ಯ ಉಗ್ರಾಣ ನಿಗಮದ ಪತ್ರ ಸಂಖ್ಯೆ : ಕರಾಉನಿ/ಕಾರ್ಯದರ್ಶಿ/11579/2011-12 ದಿನಾಂಕ : 6-3-2012 ಹಾಗೂ 22-3-2012.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮದ ವ್ಯವಸ್ಥಾಪಕ ನಿರ್ದೇಶಕರು ದಿನಾಂಕ : 13-5-2012 ರಿಂದ 16-5-2012 ರವರೆಗೆ ರೋಂ, ಇಟಲಿಯಲ್ಲಿ ನಡೆಯುವ International Federation of Warehousing Logistics Association ಗೆ ನಿಗಮದ ಅಧ್ಯಕ್ಷರು ಹಾಗೂ ಇಬ್ಬರು ನಿರ್ದೇಶಕರುಗಳನ್ನು ಹಾಜರಾಗಲು ಅನುಮತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ವಿದೇಶ ಪ್ರವಾಸಕ್ಕೆ ಪ್ರತಿಯೊಬ್ಬರಿಗೆ ರೂ. 2,22,583-00 ಗಳಂತೆ ಒಟ್ಟು 6,67,749-00 ರೂ.ಗಳು ವೆಚ್ಚವಾಗಲಿದ್ದು ಸದರಿ ವೆಚ್ಚವನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮದಿಂದ ಭರಿಸಲಾಗುವುದೆಂದು ತಿಳಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಇ 26 ರಾಉನಿ 2012, ಬೆಂಗಳೂರು, ದಿನಾಂಕ : 18ನೇ ಏಪ್ರಿಲ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಉಗ್ರಾಣ ನಿಗಮದ ಅಧ್ಯಕ್ಷರನ್ನೊಳಗೊಂಡಂತೆ ಈ ಕೆಳಕಂಡ ಇಬ್ಬರು ನಿರ್ದೇಶಕರುಗಳು ದಿನಾಂಕ : 13-5-2012 ರಿಂದ 16-5-2012 ರವರೆಗೆ ರೋಂ, ಇಟಲಿಯಲ್ಲಿ ನಡೆಯಲಿರುವ International Federation of Warehousing Logistics Association ಸಮ್ಮೇಳನದಲ್ಲಿ ಭಾಗವಹಿಸಲು ಅನುಮತಿ ನೀಡಲಾಗಿದೆ.

5. ಶ್ರೀ ಇ.ಎಂ. ನಾರಾಯಣ ಸ್ವಾಮಿ, ಶಾಸಕರು ಹಾಗೂ ಚೇರ್ಮನ್, ಕರ್ನಾಟಕ ರಾಜ್ಯ ಉಗ್ರಾಣ ನಿಗಮ, ಬೆಂಗಳೂರು
6. ಶ್ರೀ ಮಹಾವೀರಗೌಡ ಪಾಟೀಲ್ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ, ಬೆಂಗಳೂರು.
7. ಶ್ರೀ ರಮೇಶ್, ಡಿ. ಮೇಘಲಮನಿ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ, ಬೆಂಗಳೂರು.

ಅಲ್ಲದೆ ಈ ಕೆಳಕಂಡ ಷರತ್ತುಗಳನ್ನು ಪಾಲಿಸತಕ್ಕದ್ದು.

1. ಸದರಿ ವಿದೇಶ ಪ್ರವಾಸಕ್ಕೆ ತಗಲುವ ವೆಚ್ಚವನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮದಿಂದಲೇ ಭರಿಸತಕ್ಕದ್ದು.
2. ಸದರಿ ನಿಗಮದ ಅಧ್ಯಕ್ಷರು ಹಾಗೂ ನಿರ್ದೇಶಕರುಗಳು ವಿದೇಶ ಪ್ರವಾಸ ಕೈಗೊಂಡ ನಂತರ 15 ದಿವಸಗಳೊಳಗಾಗಿ ಪ್ರವಾಸದ ವರದಿಯನ್ನು ಸರ್ಕಾರಕ್ಕೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ಇಲ್ಲದಿದ್ದಲ್ಲಿ ಭವಿಷ್ಯದಲ್ಲಿ ಅವರ ವಿದೇಶ ನಿಯೋಜನೆಯನ್ನು ಅನುಮೋದಿಸಲಾಗುವುದಿಲ್ಲ. ಪ್ರವಾಸದ ವರದಿಯು 750 ಪದಗಳಿಗೆ ಮೀರತಕ್ಕದ್ದಲ್ಲ. ಮತ್ತು ಎ-4 ಸೈಜ್ ಹಾಳೆಯಲ್ಲಿ ಮಂಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಹಕಾರ ಇಲಾಖೆ.

**ಪಿ.ಆರ್. 1313**

## ಸಹಕಾರ ಸಚಿವಾಲಯ

**ವಿಷಯ :** ಅಮಾನತ್ ಸಹಕಾರ ಬ್ಯಾಂಕ್ ನಿ., ಬೆಂಗಳೂರು, ಇದರ 2008-09, 2009-10 ಮತ್ತು 2010-11ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಒ 178 ಸಿಎಲ್ಎಂ 2010, ದಿನಾಂಕ : 9-11-2010.
2. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಯುಬಿಸಿ-5/ಜಿಬಿಎಂ/223/2010-11, ದಿನಾಂಕ : 15-3-2012.

**ಪ್ರಸ್ತಾವನೆ :**

ಅಮಾನತ್ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದರ 2008-09ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ : 31-12-2010ರ ಒಳಗಾಗಿ ನಡೆಸಲು ಮೇಲೆ ಓದಲಾದ (1)ರ ಆದೇಶದಲ್ಲಿ ಅನುಮತಿಯನ್ನು ನೀಡಲಾಗಿದೆ. ಮುಂದುವರೆದು, ಬ್ಯಾಂಕಿನ ಲೆಕ್ಕಪತ್ರಗಳನ್ನು ದಿನಾಂಕ :

31-3-2012ರ ಅಂತ್ಯದವರೆಗೆ ಪೂರ್ಣಗೊಳಿಸಲು ಸಮಯಾವಕಾಶದ ಅಗತ್ಯತೆಯನ್ನು ವಿವರಿಸಿ ಸದರಿ ಬ್ಯಾಂಕಿನ 2008-09, 2009-10 ಮತ್ತು 2010-11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು 2011-12ನೇ ಮಹಾಸಭೆಯ ಜೊತೆಗೆ ದಿನಾಂಕ : 30-9-2012ರ ಒಳಗೆ ನಡೆಸಲು ಸದರಿ ಬ್ಯಾಂಕಿನ ಮುಖ್ಯಕಾರ್ಯನಿರ್ವಹಣಾಧಿಕಾರಿಯವರು ಸಹಕಾರ ಸಂಘಗಳ ನಿಬಂಧಕರನ್ನು ಕೋರಿರುವ ಮೇರೆಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿ ಸರ್ಕಾರಕ್ಕೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಮತಿಯನ್ನು ನೀಡಬಹುದೆಂದು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ವರದಿಸಿರುತ್ತಾರೆ.

ಈ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 26 ಸಿಎಲ್ಎಂ 2011, ಬೆಂಗಳೂರು, ದಿನಾಂಕ : 17-4-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅಮಾನತ್ ಸಹಕಾರ ಬ್ಯಾಂಕ್ ನಿ., ಬೆಂಗಳೂರು, ಇದರ 2008-09, 2009-2010 ಮತ್ತು 2010-11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ : 30-9-2012 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ :

**27ರ ಪ್ರಕರಣದಲ್ಲಿ :**

27ನೇ ಪ್ರಕರಣ ಉಪ ಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಮುವತ್ತಾರು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ :**

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30-9-2012 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಸಿ. ಸತೀಶ್**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ.

**ಪಿ.ಆರ್. 1314**

**ಸಹಕಾರ ಸಚಿವಾಲಯ**

**ವಿಷಯ** : ಶ್ರೀ ವಾಲ್ಮೀಕಿ ಗುರುಕುಲಾಶ್ರಮ, ಅಲ್ಲೀಪುರ ತಾಲ್ಲೂಕು ಮತ್ತು ಬಳ್ಳಾರಿ ಜಿಲ್ಲೆ ಇದಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ : 40880/2011, ದಿನಾಂಕ : 3-2-2012ರ ಆದೇಶ.
2. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರುರವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/43/ಎಸ್‌ಒಆರ್-2/2011-12, ದಿನಾಂಕ : 27-3-2012.

**ಪ್ರಸ್ತಾವನೆ :**

ಶ್ರೀ ಎಂ. ಗವಿಸಿದ್ದಪ್ಪ ಮತ್ತು ಇತರರು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ರಿಟ್ ಪಿಟಿಷನ್ ಸಂ. 40880/2011 (PIL) ನ್ನು ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ : 3-2-2012 ರಂದು ತೀರ್ಪು ನೀಡಿ ಶ್ರೀ ವಾಲ್ಮೀಕಿ ಗುರುಕುಲಾಶ್ರಮ ಅಲ್ಲೀಪುರ ತಾಲ್ಲೂಕು ಮತ್ತು ಬಳ್ಳಾರಿ ಜಿಲ್ಲೆ ಇದಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಸೂಚಿಸಿದೆ.

ಮೇಲೆ (2)ರಲ್ಲಿ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಸಹಕಾರ ಸಂಘಗಳ ಜಿಲ್ಲಾ ನೊಂದಣಾಧಿಕಾರಿಗಳು ಹಾಗೂ ಸಹಕಾರ ಸಂಘಗಳ ಉಪ ನಿಬಂಧಕರು, ಬಳ್ಳಾರಿರವರು ಶ್ರೀ ಎಂ. ಗವಿಸಿದ್ದಪ್ಪ ಮತ್ತು ಶ್ರೀ ಜಿ. ಯರ್‍ರಿಸ್ವಾಮಿ ಹಾಗೂ ಇತರರು ಶ್ರೀ ವಾಲ್ಮೀಕಿ ಗುರುಕುಲಾಶ್ರಮ ಅಲ್ಲೀಪುರ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇದರ ಆಡಳಿತ ಮಂಡಳಿಯ ವಿರುದ್ಧ ಸಲ್ಲಿಸಿದ ಮನವಿ ಪತ್ರದ ಬಗ್ಗೆ ಮಾನ್ಯ ಜಿಲ್ಲಾಧಿಕಾರಿಗಳು ಪತ್ರ ಸಂ. ಕಂ./ಎಂಎಜೆ/ಕಾನೂನು/391/2010–11, ದಿನಾಂಕ : 5–3–2011 ರಲ್ಲಿ ಸದರಿ ವಿಷಯದ ಬಗ್ಗೆ ಕೈಗೊಂಡ ಕ್ರಮದ ವರದಿ ಸಲ್ಲಿಸುವಂತೆ ಸೂಚಿಸಿರುವುದಾಗಿ ವರದಿ ಮಾಡಿದ್ದು ಕರ್ನಾಟಕ ಸಂಘಗಳ ನೊಂದಣಿ ನಿಯಮ 1960ಕಲಂ 25ರಡಿಯಲ್ಲಿ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ/ಮಾರಾಟ ಅಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬಳ್ಳಾರಿ ಇವರಿಗೆ ಸೂಚಿಸಲಾಗಿತ್ತೆಂದು ತಿಳಿಸಿರುವುದಾಗಿ ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳು ಸಲ್ಲಿಸಿದ ವಿಚಾರಣಾ ವರದಿಯಲ್ಲಿನ ನ್ಯೂನತೆಗಳನ್ನು ಸರಿಪಡಿಸಲು ದಿನಾಂಕ : 5–5–2011ರಲ್ಲಿ ಸಂಘದ ಅಧ್ಯಕ್ಷರಿಗೆ ಸೂಚಿಸಿರುವುದಾಗಿ ತಿಳಿಸಿ, ನ್ಯಾಯಾಲಯದ ಆದೇಶದನ್ವಯ ತಹಶೀಲ್ದಾರರು, ಬಳ್ಳಾರಿ ಅಥವಾ ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್ ಕಛೇರಿ, ಬಳ್ಳಾರಿ ಇವರಲ್ಲಿ ಒಬ್ಬರನ್ನು ಈ ಸಂಸ್ಥೆಗೆ ಆಡಳಿತಾಧಿಕಾರಿಯಾಗಿ ನೇಮಕ ಮಾಡಬಹುದೆಂದು ತಿಳಿಸಿರುವುದಾಗಿ ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಉಚ್ಚ ನ್ಯಾಯಾಲಯದ ತೀರ್ಪಿನನ್ವಯ ಈ ಸಂಸ್ಥೆಗೆ ಆಡಳಿತಾಧಿಕಾರಿಗಳನ್ನು ನೇಮಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಇ 25 ಸಸಂನೋ 2012, ಬೆಂಗಳೂರು, ದಿನಾಂಕ : 20–4–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ವಾಲ್ಮೀಕಿ ಗುರುಕುಲಾಶ್ರಮ ಅಲ್ಲೀಪುರ ತಾಲ್ಲೂಕು ಮತ್ತು ಬಳ್ಳಾರಿ ಜಿಲ್ಲೆ ಹಾಲಿ ಇರುವ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಕರ್ನಾಟಕ ಸಂಘಗಳ ನೊಂದಣೀ ಕಾಯ್ದೆ 1960ರ ಕಲಂ 27(ಎ)ರನ್ವಯ ಸದರಿ ಸಂಸ್ಥೆಗೆ 6 ತಿಂಗಳ ಅವಧಿಗೆ ತಹಶೀಲ್ದಾರರು, ಬಳ್ಳಾರಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾವಣೆ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಹಾಗೂ ಈ ರೀತಿ ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 1315**

## ಸಹಕಾರ ಸಚಿವಾಲಯ

**ವಿಷಯ** : ದಿನಾಂಕ : 31–3–2012ರೊಳಗೆ ನಡೆಸಬೇಕಾಗಿರುವ ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮಲ್ಲೇಶ್ವರಂ, ಬೆಂಗಳೂರು ಇದರ ಆಡಳಿತ ಮಂಡಳಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಇ 28 ಸಿಎಲ್‌ಎಂ 2011, ದಿನಾಂಕ : 30–7–2011.
2. ಅಧ್ಯಕ್ಷರು, ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮಲ್ಲೇಶ್ವರಂ, ಬೆಂಗಳೂರು ರವರ ಪತ್ರ ದಿನಾಂಕ : 18–2–2012.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಹೆಚ್‌ಎಸ್‌ಜಿ–2/397/ಹೆಚ್‌ಹೆಚ್‌ಎಸ್/2011–12, ದಿನಾಂಕ : 31–3–2012.

**ಪ್ರಸ್ತಾವನೆ :**

ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮಲ್ಲೇಶ್ವರಂ, ಬೆಂಗಳೂರು ಇದರ ಆಡಳಿತ ಮಂಡಳಿಗೆ ದಿನಾಂಕ : 30–9–2011 ರೊಳಗೆ ನಡೆಸಬೇಕಾಗಿದ್ದ ಚುನಾವಣೆಯನ್ನು ದಿನಾಂಕ : 31–3–2012 ರೊಳಗೆ ನಡೆಸಲು ಅನುಮತಿಯನ್ನು ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ನೀಡಲಾಗಿದೆ ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಸದರಿ ಸಂಘದ ಅಧ್ಯಕ್ಷರು ಸಂಘದ ಆಡಳಿತ ಮಂಡಳಿಯು ಸದಸ್ಯರ ಹಿತದೃಷ್ಟಿಯಿಂದ ಕೆಲವು ಹೊಸ ಗೃಹ ನಿರ್ಮಾಣ ಯೋಜನೆಗಳು ಸೇರಿದಂತೆ ಸರ್ಕಾರದ ಹಂತದಲ್ಲಿ ಅನೇಕ ವರ್ಷಗಳಿಂದ ಅನುಮೋದನೆಗೆ ಬಾಕಿ

ಇರುವ ಯೋಜನೆಗಳ ಬಗ್ಗೆ ಸರ್ಕಾರದ ಅನುಮತಿ ಪಡೆಯಲು ತೀವ್ರಗತಿಯ ಕ್ರಮ ಕೈಗೊಂಡಿದ್ದು, ಈ ಎಲ್ಲಾ ಯೋಜನೆಗಳು ಅಂತಿಮ ಹಂತದಲ್ಲಿ ಸರ್ಕಾರದಲ್ಲಿ ಅನುಮೋದನೆಗಾಗಿ ಪ್ರಗತಿಯಲ್ಲಿರುತ್ತದೆ. ಸಂಘವು ಕರ್ನಾಟಕದ ಉಚ್ಚ ನ್ಯಾಯಾಲಯ ಹಾಗೂ ಭಾರತದ ಸರ್ವೋಚ್ಚ ನ್ಯಾಯಾಲಯಗಳ ಆದೇಶದಲ್ಲಿ ಕಳೆದುಕೊಂಡಿರುವ ಜಮೀನುಗಳ ಬದಲಾಗಿ ಸೂಕ್ತವಾದ ಬದಲಿ ಜಮೀನುಗಳನ್ನು ಪಡೆದುಕೊಳ್ಳಲು ನಡೆಸಿರುವ ಕಾರ್ಯ ಯೋಜನೆ ಸರ್ಕಾರದಲ್ಲಿ ಬಾಕಿ ಇದ್ದು ಹಾಗೂ ಇನ್ನೂ ಪ್ರಗತಿಯಲ್ಲಿರುವ ಯೋಜನೆಗಳನ್ನು ಶೀಘ್ರವಾಗಿ ಪೂರೈಸಿ ಅವುಗಳಿಂದ ಉತ್ಪತ್ತಿಯಾಗುವ ಆದಾಯದಿಂದ ಈಗಾಗಲೇ ಗ್ರಾಹಕರ ವೇದಿಕೆಗಳು ನೀಡಿರುವಂತಹ ಆದೇಶಗಳಂತೆ ಸದಸ್ಯರ ನಿವೇಶನ ಠೇವಣಿಯ ಹಣವನ್ನು ಹಿಂತಿರುಗಿಸುವಂತೆ ಕೋರಿ ಅರ್ಜಿ ಸಲ್ಲಿಸಿರುವ ಸದಸ್ಯರಿಗೆ ಆದ್ಯತೆಯ ಮೇರೆಗೆ ಹಣ ಹಿಂತಿರುಗಿಸುವುದು ಇನ್ನೂ ಮುಂತಾದ ಕಾರ್ಯಯೋಜನೆಗಳನ್ನು ಪೂರ್ಣಗೊಳಿಸಬೇಕಾಗಿರುತ್ತದೆ ಎಂದು ದಿನಾಂಕ : 18–2–2012ರ ಪತ್ರದಲ್ಲಿ ವಿವರಿಸಿ, ದಿನಾಂಕ : 31–3–2013 ರವರೆಗೆ ತಮ್ಮ ಸಂಘದ ಆಡಳಿತ ಮಂಡಳಿಯ ಚುನಾವಣೆಯನ್ನು ಮುಂದೂಡಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಸಹಕಾರ ಸಂಘಗಳ ನಿಬಂಧಕರು, ಈಗಾಗಲೇ ಆದೇಶಿಸಿರುವ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣಾ ವರದಿ ಸ್ವೀಕೃತವಾದ ನಂತರ ವರದಿಯಲ್ಲಿನ ಅಂಶಗಳ ಬಗ್ಗೆ ಪರಿಶೀಲಿಸಿ, ಸಂಘದಲ್ಲಿನ ನ್ಯೂನತೆಗಳ ಸ್ವರೂಪದ ಆಧಾರದ ಮೇಲೆ ನಿಯಮಾನುಸಾರ ಕ್ರಮವಹಿಸುವ ಷರತ್ತಿಗೊಳಪಟ್ಟು ದಿನಾಂಕ : 30–9–2012ರವರೆಗೆ ಸದರಿ ಸಂಘದ ಆಡಳಿತ ಮಂಡಳಿಯ ಚುನಾವಣೆಯನ್ನು ಮುಂದೂಡಲು ಸಹಕಾರ ಸಂಘಗಳ ನಿಬಂಧಕರು ಅಭಿಪ್ರಾಯಪಟ್ಟಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 32 ಸಿಎಲ್ಎಂ 2012, ಬೆಂಗಳೂರು, ದಿನಾಂಕ : 25–4–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮಲ್ಲೇಶ್ವರಂ, ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಸದರಿ ಸಂಘದ ಆಡಳಿತ ಮಂಡಳಿಗೆ ಚುನಾವಣೆಯನ್ನು ದಿನಾಂಕ : 30–9–2012 ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ :**

ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30–9–2012ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

**ಷರತ್ತು :**

ಈಗಾಗಲೇ ಆದೇಶಿಸಿರುವ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣಾ ವರದಿ ಸ್ವೀಕೃತವಾದ ನಂತರ ವರದಿಯಲ್ಲಿನ ಅಂಶಗಳ ಬಗ್ಗೆ ಪರಿಶೀಲಿಸಿ, ಸಂಘದಲ್ಲಿನ ನ್ಯೂನತೆಗಳ ಸ್ವರೂಪದ ಆಧಾರದ ಮೇಲೆ ನಿಯಮಾನುಸಾರ ಕ್ರಮವಹಿಸುವ ಷರತ್ತನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಸತೀಶ್**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**ಪಿ.ಆರ್. 1316**

## ಕನ್ನಡ ಮತ್ತು ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಬಸವ ಜಯಂತಿ ಆಚರಣೆಗೆ ಹಣ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** ಕನ್ನಡ ಮತ್ತು ಸಂಸ್ಕೃತಿ ಆಯುಕ್ತರ ಪತ್ರ ಸಂಖ್ಯೆ : ಕಸನಿ/2/ಬ.ಜ./2011–12, ದಿನಾಂಕ: 13–4–2012.

**ಪ್ರಸ್ತಾವನೆ :**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ರಾಜ್ಯದಾದ್ಯಂತ ಪ್ರತಿ ವರ್ಷ ಬಸವಜಯಂತಿ ಕಾರ್ಯಕ್ರಮವನ್ನು ಆಚರಿಸುತ್ತಾ ಬಂದಿದೆ. ಪ್ರಸಕ್ತ ಸಾಲಿನಲ್ಲಿ ಬಸವ ಜಯಂತಿಯನ್ನು ರಾಜ್ಯದಾದ್ಯಂತ ಆಚರಿಸಲು ಬೆಂಗಳೂರು ನಗರ ಜಿಲ್ಲೆಗೆ ರೂ. 10.00 ಲಕ್ಷ, ರಾಜ್ಯದ 30 ಜಿಲ್ಲಾ ಕೇಂದ್ರಗಳಿಗೆ ತಲಾ ರೂ. 50,000/– ಮತ್ತು 176 ತಾಲ್ಲೂಕು ಕೇಂದ್ರಗಳಿಗೆ ತಲಾ ರೂ. 25,000/–ಗಳಂತೆ ಒಟ್ಟು ರೂ. 59.00 ಲಕ್ಷ ಒಟ್ಟು ರೂ. 69.00 ಲಕ್ಷಗಳನ್ನು ಮಂಜೂರು ಮಾಡಬೇಕೆಂದು ಓದಲಾದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 542 ಕಸಧ 2012, ಬೆಂಗಳೂರು, ದಿನಾಂಕ : 17–4–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಾದ್ಯಂತ ಬಸವ ಜಯಂತಿ ಆಚರಿಸಲು ಬೆಂಗಳೂರು ನಗರ ಜಿಲ್ಲೆಯನ್ನು ಹೊರತುಪಡಿಸಿ 30 ಜಿಲ್ಲಾ ಕೇಂದ್ರಗಳಿಗೆ ತಲಾ ರೂ. 50,000/– ಗಳಂತೆ ಹಾಗೂ 176 ತಾಲ್ಲೂಕುಗಳಿಗೆ ತಲಾ ರೂ. 25,000/– ರಂತೆ ಒಟ್ಟು ರೂ. 59.00 ಲಕ್ಷಗಳನ್ನು ಎಲ್ಲಾ ಜಿಲ್ಲಾಧಿಕಾರಿಗಳಿಗೂ ಬಿಡುಗಡೆ ಮಾಡಲು ಹಾಗೂ ಬೆಂಗಳೂರಿನಲ್ಲಿ ಬಸವ ಜಯಂತಿ ಆಚರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಅನುದಾನ ಬಿಲ್ಲಿನ ಮೇಲೆ ಡ್ರಾ ಮಾಡಲು ರೂ. 10.00 ಲಕ್ಷಗಳನ್ನು ಒಟ್ಟು ರೂ. 69.00 ಲಕ್ಷಗಳನ್ನು (ರೂಪಾಯಿ ಅರವತ್ತೊಂಬತ್ತು ಲಕ್ಷ ಮಾತ್ರ) ಗಳನ್ನು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಇವರಿಗೆ ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರು ಮಾಡಲಾಗಿದೆ.

1. ಬಸವ ಜಯಂತಿ ಕಾರ್ಯಕ್ರಮಕ್ಕೆ ಹಣ ಮಂಜೂರು ಮಾಡಿದ್ದು, ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
2. ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣಬಳಕೆ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸುವುದು.
3. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999–2000 ನಿಯಮ ಮತ್ತು ಸರ್ಕಾರ ಆಗಿಂದಾಗ್ಗೆ ಹೊರಡಿಸಿದ ಸುತ್ತೋಲೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–01–100 (ಯೋಜನೆ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ/1/ಟಿಎಫ್‌ಪಿ/2008, ದಿನಾಂಕ : 16–5–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

**ಪಿ.ಆರ್. 1317**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2012–13 ನೇ ಸಾಲಿಗೆ ರಾಜ್ಯದಲ್ಲಿರುವ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕ / ಸ್ನಾತಕೋತ್ತರ ಕೋರ್ಸುಗಳ ಸೀಟುಗಳ ಶುಲ್ಕವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ವೃತ್ತಿಪರ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಕುರಿತು ಸರ್ಕಾರ ಹಾಗೂ ಖಾಸಗಿ ಆಡಳಿತ ಮಂಡಳಿಗಳ ನಡುವೆ ಸಮ್ಮತಾಭಿಪ್ರಾಯ ಒಪ್ಪಂದ ಮಾಡಿಕೊಳ್ಳಲು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 31.03.2010 ರಂದು ಜರುಗಿದ ಸಭೆಯ ನಡವಳಿಗಳು.
2. ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ:ವೈಶಿ/ಪಿಜಿಎಸ್/25/2012–13, ದಿನಾಂಕ 09.05.2012.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸಭೆಯ ನಡವಳಿಯನ್ವಯ ವೈದ್ಯಕೀಯ, ದಂತ ವೈದ್ಯಕೀಯ (ಸ್ನಾತಕ) ಮತ್ತು ವೈದ್ಯಕೀಯ ಸ್ನಾತಕೋತ್ತರ ಕೋರ್ಸುಗಳಿಗೆ 2011–12 ನೇ ಸಾಲಿನಲ್ಲಿ ನಿಗದಿಪಡಿಸಿದ ಶುಲ್ಕಕ್ಕಿಂತ ಶೇ.10 ರಷ್ಟನ್ನು 2012–13 ನೇ ಸಾಲಿಗೆ ಹೆಚ್ಚಿಸಲು ತೀರ್ಮಾನಿಸಲಾಗಿರುತ್ತದೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಬೆಂಗಳೂರು ಇವರು ಕರ್ನಾಟಕ ವೃತ್ತಿಪರ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಹಾಗೂ ಶುಲ್ಕ ನಿಗದಿ ಕುರಿತು ಸರ್ಕಾರಿ ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳ ನಡುವೆ ಸಮ್ಮತಾಭಿಪ್ರಾಯ ಒಪ್ಪಂದ ಮಾಡಿಕೊಳ್ಳಲು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 31.03.2012 ರಂದು ಜರುಗಿದ ಸಭೆಯಲ್ಲಿ ವೈದ್ಯಕೀಯ, ದಂತ ವೈದ್ಯಕೀಯ (ಸ್ನಾತಕ) ಮತ್ತು ವೈದ್ಯಕೀಯ ಸ್ನಾತಕೋತ್ತರ ಕೋರ್ಸುಗಳಿಗೆ 2011–12 ನೇ ಸಾಲಿನಲ್ಲಿ ನಿಗದಿಪಡಿಸಿದ ಶುಲ್ಕಕ್ಕಿಂತ ಶೇ.10 ರಷ್ಟನ್ನು 2012–13 ನೇ ಸಾಲಿಗೆ ಹೆಚ್ಚಿಸಲು ತೀರ್ಮಾನಿಸಲಾಗಿದ್ದು, ಅದರಂತೆ, ಪ್ರಸ್ತುತ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಸ್ನಾತಕ / ಸ್ನಾತಕೋತ್ತರ ಕೋರ್ಸುಗಳ ಸರ್ಕಾರಿ ಕೋಟಾದ ಸೀಟುಗಳಿಗೆ ನಿಗದಿಪಡಿಸಲಾಗಿರುವ ಹಾಗೂ ಪರಿಷ್ಕರಿಸಬೇಕಾಗಿರುವ ಶುಲ್ಕದ ವಿವರಗಳು ಕೆಳಕಂಡಂತಿರುತ್ತವೆಂದು ತಿಳಿಸಿರುತ್ತಾರೆ.

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ಸ್ನಾತಕೋತ್ತರ ವೈದ್ಯಕೀಯ / ಡಿಪ್ಲೊಮಾ / ದಂತ ವೈದ್ಯಕೀಯ ಕೋರ್ಸುಗಳ ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(ರೂ. ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಪಿಜಿಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| 1. | ವೈದ್ಯಕೀಯ | | | | |
| | ಪದವಿ | | | | |
| (i) | ಕ್ಲಿನಿಕಲ್ | 4,56,000 | 5,01,600 | 3,05,000 | 3,35,000 |
| (ii) | ಪ್ಯಾರಾ ಕ್ಲಿನಿಕಲ್ | 1,14,000 | 1,25,400 | 76,000 | 83,600 |
| (iii) | ಪ್ರಿ ಕ್ಲಿನಿಕಲ್ | 57,000 | 62,700 | 38,190 | 42,009 |
| 2. | ಡಿಪ್ಲೊಮಾ | | | | |
| (a) | ಕ್ಲಿನಿಕಲ್ | 3,42,000 | 3,76,200 | 2,29,000 | 2,51,900 |
| (b) | ಪ್ಯಾರಾ ಕ್ಲಿನಿಕಲ್ | 1,14,000 | 1,25,400 | 76,000 | 83,600 |
| 3. | ದಂತ ವೈದ್ಯಕೀಯ | | | | |
| (a) | ಪದವಿ ಮತ್ತು ಡಿಪ್ಲೊಮಾ | 2,34,000 | 2,57,400 | 1,56,000 | 1,71,600 |

**ಕರ್ನಾಟಕ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತ ವೃತ್ತಿಪರ ಕಾಲೇಜುಗಳ ಒಕ್ಕೂಟದ (KRLMPCA) ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕೋತ್ತರ ವೈದ್ಯಕೀಯ / ಡಿಪ್ಲೊಮಾ / ದಂತ ವೈದ್ಯಕೀಯ ಕೋರ್ಸುಗಳ ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(ರೂ. ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | KRLMPCA ಅಭ್ಯರ್ಥಿಗಳಿಗೆ | | ಪಿಜಿಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| 1. | ವೈದ್ಯಕೀಯ | | | | |
| | ಪದವಿ | | | | |
| (i) | ಕ್ಲಿನಿಕಲ್ | 3,45,000 | 3,79,500 | 2,76,000 | 3,03,600 |
| (ii) | **ಪ್ಯಾರಾ ಕ್ಲಿನಿಕಲ್** | 95,000 | 1,04,500 | 76,000 | 83,600 |
| (iii) | **ಪ್ರಿ ಕ್ಲಿನಿಕಲ್** | 47,000 | 51,700 | 37,600 | 41,360 |
| 2. | ಡಿಪ್ಲೊಮಾ | | | | |
| (i) | ಕ್ಲಿನಿಕಲ್ | 2,76,000 | 3,03,600 | 2,20,800 | 2,42,880 |
| (ii) | ಪ್ಯಾರಾ ಕ್ಲಿನಿಕಲ್ | 95,000 | 1,04,500 | 76,000 | 83,600 |
| 3. | ದಂತ ವೈದ್ಯಕೀಯ | | | | |
| (i) | ಪದವಿ ಮತ್ತು ಡಿಪ್ಲೊಮಾ | 1,92,500 | 2,11,750 | 1,54,000 | 1,69,400 |

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ವೈದ್ಯಕೀಯ (MBBS) / ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(ರೂ.ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| 1. | ಎಂಬಿಬಿಎಸ್ | 3,25,000 | 3,57,500 | 35,000 | 38,500 |
| 2. | ಬಿಡಿಎಸ್ | 2,30,000 | 2,53,000 | 25,000 | 27,500 |

**ಕರ್ನಾಟಕ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತ ವೃತ್ತಿಪರ ಕಾಲೇಜುಗಳ ಒಕ್ಕೂಟದ (KRLMPCA) ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ ವೈದ್ಯಕೀಯ (MBBS) / ದಂತ ವೈದ್ಯಕೀಯ (BDS) ಕೋರ್ಸುಗಳ ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(ರೂ.ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | KRLMPCA ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| 1. | ಎಂಬಿಬಿಎಸ್ | 3,25,000 | 3,57,500 | 35,000 | 38,500 |
| 2. | ಬಿಡಿಎಸ್ | 2,30,000 | 2,53,000 | 25,000 | 27,500 |

ಮುಂದುವರಿದು, ಡೀಮ್ಡ್ ವಿಶ್ವವಿದ್ಯಾಲಯಗಳ ವ್ಯಾಪ್ತಿಗೆ ಒಳಪಡುವ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕಾಲೇಜುಗಳಲ್ಲಿ ಪಿಜಿಸಿಇಟಿ ಹಾಗೂ ಸಿಇಟಿ ಮೂಲಕ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳು ನಿಗದಿಪಡಿಸುವ ಶುಲ್ಕವನ್ನು ಪಾವತಿಸಬೇಕಾಗಿದೆಯೆಂದು, ಆದರೆ, ಶುಲ್ಕ ಮರುಪಾವತಿಗೆ ಅರ್ಹರಾಗಿರುವ ಸೇವಾನಿರತ ಅಭ್ಯರ್ಥಿಗಳು ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಕಾಮೆಡ್–ಕೆ ಸಂಸ್ಥೆಯೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಪ್ರಕಾರ ನಿಗದಿಪಡಿಸಿರುವ ಶುಲ್ಕವನ್ನು ಮರುಪಾವತಿಸಲಾಗುವುದು ಹಾಗೂ ವ್ಯತ್ಯಾಸದ ಮೊತ್ತವನ್ನು ಅಭ್ಯರ್ಥಿಗಳೇ ಸ್ವಂತವಾಗಿ ಭರಿಸತಕ್ಕದ್ದೆಂದು ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ.

ಸರ್ಕಾರಿ ಕಾಲೇಜುಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಪಾವತಿಸಬೇಕಾದ ಶುಲ್ಕದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. 2011–12 ನೇ ಸಾಲಿನಲ್ಲಿ ನಿಗದಿಪಡಿಸಿರುವ ಶುಲ್ಕದ ವಿವರಗಳು ಕೆಳಕಂಡಂತಿದ್ದು, ಅದೇ ಶುಲ್ಕವನ್ನು 2012–13 ನೇ ಸಾಲಿನಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೂ ಸಹ ನಿಗದಿಪಡಿಸಬಹುದಾಗಿದೆಯೆಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರು ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಕೋರ್ಸುಗಳ ವಿವರ | ನಿಗದಿಪಡಿಸಿರುವ ಶುಲ್ಕ |
|---|---|---|
| | **ಸ್ನಾತಕೋತ್ತರ ಪದವಿ ವೈದ್ಯಕೀಯ ಕೋರ್ಸುಗಳು** | |
| 1. | ಕ್ಲಿನಿಕಲ್ | 20,000 |
| 2. | ಪ್ಯಾರಾ ಕ್ಲಿನಿಕಲ್ | 10,000 |
| 3. | ಪ್ರಿ ಕ್ಲಿನಿಕಲ್ | 5,000 |
| | **ಸ್ನಾತಕೋತ್ತರ ಡಿಪ್ಲೊಮಾ ಕೋರ್ಸುಗಳು** | |
| 1. | ಕ್ಲಿನಿಕಲ್ | 20,000 |
| 2. | ಪ್ಯಾರಾ ಕ್ಲಿನಿಕಲ್ | 10,000 |
| | **ಸ್ನಾತಕೋತ್ತರ ಪದವಿ ದಂತ ವೈದ್ಯಕೀಯ ಕೋರ್ಸುಗಳು** | |
| 1. | ಕ್ಲಿನಿಕಲ್ | 20,000 |
| 2. | ಪ್ಯಾರಾ ಕ್ಲಿನಿಕಲ್ | 5,000 |
| | **ಸ್ನಾತಕ ವೈದ್ಯಕೀಯ / ದಂತ ವೈದ್ಯಕೀಯ ಕೋರ್ಸುಗಳು** | |
| 1. | ಎಂಬಿಬಿಎಸ್ | 16,700 |
| 2. | ಬಿಡಿಎಸ್ | 14,400 |

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಸ್ನಾತಕ / ಸ್ನಾತಕೋತ್ತರ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು ಮೇಲ್ಕಂಡಂತೆ 2012–13 ನೇ ಸಾಲಿಗೆ ಶೇ.10 ರಷ್ಟು ಹೆಚ್ಚಿಸಿ ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 101 ಆರ್‌ಜಿಯು 2012, ಬೆಂಗಳೂರು, ದಿನಾಂಕ 10.05.2012**

ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಸ್ನಾತಕ / ಸ್ನಾತಕೋತ್ತರ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು **2012–13 ನೇ ಸಾಲಿಗೆ** ಶೇ.10 ರಷ್ಟು ಹೆಚ್ಚಿಸಿ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಲಾಗಿದೆ.

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ಸ್ನಾತಕೋತ್ತರ ವೈದ್ಯಕೀಯ / ದಂತ ವೈದ್ಯಕೀಯ / ಡಿಪ್ಲೊಮಾ ಕೋರ್ಸುಗಳ ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(ರೂ.ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಪಿಜಿಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| **1.** | **ವೈದ್ಯಕೀಯ** | | | | |
| | **ಪದವಿ** | | | | |
| (i) | ಕ್ಲಿನಿಕಲ್ | 4,56,000 | 5,01,600 | 3,05,000 | 3,35,000 |
| (ii) | ಪ್ಯಾರಾ ಕ್ಲಿನಿಕಲ್ | 1,14,000 | 1,25,400 | 76,000 | 83,600 |
| (iii) | ಪ್ರಿ ಕ್ಲಿನಿಕಲ್ | 57,000 | 62,700 | 38,190 | 42,009 |
| **2.** | **ಡಿಪ್ಲೊಮಾ** | | | | |
| (i) | ಕ್ಲಿನಿಕಲ್ | 3,42,000 | 3,76,200 | 2,29,000 | 2,51,900 |
| (ii) | ಪ್ಯಾರಾ ಕ್ಲಿನಿಕಲ್ | 1,14,000 | 1,25,400 | 76,000 | 83,600 |
| **3.** | **ದಂತ ವೈದ್ಯಕೀಯ** | | | | |
| (i) | ಪದವಿ ಮತ್ತು ಡಿಪ್ಲೊಮಾ | 2,34,000 | 2,57,400 | 1,56,000 | 1,71,600 |

**ಕರ್ನಾಟಕ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತ ವೃತ್ತಿಪರ ಕಾಲೇಜುಗಳ ಒಕ್ಕೂಟದ (KRLMPCA) ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕೋತ್ತರ ವೈದ್ಯಕೀಯ / ದಂತ ವೈದ್ಯಕೀಯ / ಡಿಪ್ಲೊಮಾ ಕೋರ್ಸುಗಳ ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(ರೂ.ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | KRLMPCA ಅಭ್ಯರ್ಥಿಗಳಿಗೆ | | ಪಿಜಿಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| **1.** | **ವೈದ್ಯಕೀಯ** | | | | |
| (i) | ಪದವಿ<br>ಕ್ಲಿನಿಕಲ್ | 3,45,000 | 3,79,500 | 2,76,000 | 3,03,600 |
| (ii) | ಪ್ಯಾರಾ ಕ್ಲಿನಿಕಲ್ | 95,000 | 1,04,500 | 76,000 | 83,600 |
| (iii) | ಪ್ರಿ ಕ್ಲಿನಿಕಲ್ | 47,000 | 51,700 | 37,600 | 41,360 |
| **2.** | **ಡಿಪ್ಲೊಮಾ** | | | | |
| (i) | ಕ್ಲಿನಿಕಲ್ | 2,76,000 | 3,03,600 | 2,20,800 | 2,42,880 |
| (ii) | ಪ್ಯಾರಾ ಕ್ಲಿನಿಕಲ್ | 95,000 | 1,04,500 | 76,000 | 83,600 |
| **3.** | **ದಂತ ವೈದ್ಯಕೀಯ** | | | | |
| (i) | ಪದವಿ ಮತ್ತು ಡಿಪ್ಲೊಮಾ | 1,92,500 | 2,11,750 | 1,54,000 | 1,69,400 |

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ವೈದ್ಯಕೀಯ (MBBS) / ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(ರೂ.ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| 1. | ಎಂಬಿಬಿಎಸ್ | 3,25,000 | 3,57,500 | 35,000 | 38,500 |
| 2. | ಬಿಡಿಎಸ್ | 2,30,000 | 2,53,000 | 25,000 | 27,500 |

**ಕರ್ನಾಟಕ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತ ವೃತ್ತಿಪರ ಕಾಲೇಜುಗಳ ಒಕ್ಕೂಟದ (KRLMPCA) ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ ವೈದ್ಯಕೀಯ (MBBS) / ದಂತ ವೈದ್ಯಕೀಯ (BDS) ಕೋರ್ಸುಗಳ ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(ರೂ.ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | KRLMPCA ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| 1. | ಎಂಬಿಬಿಎಸ್ | 3,25,000 | 3,57,500 | 35,000 | 38,500 |
| 2. | ಬಿಡಿಎಸ್ | 2,30,000 | 2,53,000 | 25,000 | 27,500 |

ಸರ್ಕಾರಿ ಸ್ವಾಯತ್ತ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಪಾವತಿಸಬೇಕಾದ ಶುಲ್ಕದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲವಾದ್ದರಿಂದ 2011–12 ನೇ ಸಾಲಿನಲ್ಲಿ ಕೆಳಕಂಡಂತೆ ನಿಗದಿಪಡಿಸಿರುವ ಶುಲ್ಕವನ್ನೇ 2012–13 ನೇ ಸಾಲಿನಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೂ ನಿಗದಿಪಡಿಸಲಾಗಿದೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಕೋರ್ಸುಗಳ ವಿವರ | ನಿಗದಿಪಡಿಸಿರುವ ಶುಲ್ಕ |
|---|---|---|
| | **ಸ್ನಾತಕೋತ್ತರ ಪದವಿ ವೈದ್ಯಕೀಯ ಕೋರ್ಸುಗಳು** | |
| 1. | ಕ್ಲಿನಿಕಲ್ | 20,000 |
| 2. | ಪ್ಯಾರಾ ಕ್ಲಿನಿಕಲ್ | 10,000 |
| 3. | ಪ್ರಿ ಕ್ಲಿನಿಕಲ್ | 5,000 |
| | **ಸ್ನಾತಕೋತ್ತರ ಡಿಪ್ಲೊಮಾ ಕೋರ್ಸುಗಳು** | |
| 1. | ಕ್ಲಿನಿಕಲ್ | 20,000 |
| 2. | ಪ್ಯಾರಾ ಕ್ಲಿನಿಕಲ್ | 10,000 |
| | **ಸ್ನಾತಕೋತ್ತರ ಪದವಿ ದಂತ ವೈದ್ಯಕೀಯ ಕೋರ್ಸುಗಳು** | |
| 1. | ಕ್ಲಿನಿಕಲ್ | 20,000 |
| 2. | ಪ್ಯಾರಾ ಕ್ಲಿನಿಕಲ್ | 5,000 |
| | **ಸ್ನಾತಕ ವೈದ್ಯಕೀಯ / ದಂತ ವೈದ್ಯಕೀಯ ಕೋರ್ಸುಗಳು** | |
| 1. | ಎಂಬಿಬಿಎಸ್ | 16,700 |
| 2. | ಬಿಡಿಎಸ್ | 14,400 |

ಡೀಮ್ಡ್ ವಿಶ್ವವಿದ್ಯಾಲಯಗಳ ವ್ಯಾಪ್ತಿಗೆ ಒಳಪಡುವ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕಾಲೇಜುಗಳಲ್ಲಿ ಪಿಜಿಸಿಇಟಿ ಹಾಗೂ ಸಿಇಟಿ ಮೂಲಕ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳು ನಿಗದಿಪಡಿಸುವ ಶುಲ್ಕವನ್ನೇ ಪಾವತಿಸತಕ್ಕದ್ದು. ಆದರೆ, ಶುಲ್ಕ ಮರುಪಾವತಿಗೆ ಅರ್ಹರಾಗಿರುವ ಸೇವಾನಿರತ ಅಭ್ಯರ್ಥಿಗಳು ಹಾಗೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಕಾಮೆಡ್–ಕೆ ಸಂಸ್ಥೆಯೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಪ್ರಕಾರ ನಿಗದಿಪಡಿಸಿರುವ ಶುಲ್ಕವನ್ನು ಮರುಪಾವತಿಸಲಾಗುವುದು. ಆದರೆ, ವ್ಯತ್ಯಾಸದ ಮೊತ್ತವನ್ನು ಅಭ್ಯರ್ಥಿಗಳೇ ಸ್ವಂತವಾಗಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮೆಹಬೂಬ್ ಖಾನ್,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ಪಿ.ಆರ್. ಸಂಖ್ಯೆ.1374